# ಪ್ರಸ್ತಾವನೆ

ಈ ವ್ಯಾಕರಣಗ್ರಂಥವು ಶಿಕ್ಷಕರಿಗೂ ವಿದ್ಯಾರ್ಥಿಗಳಿಗೂ ಬಹುದಿವಸದಿಂದಲೂ ಪ್ರಿಯವಾಗಿರುವುದು. ಆದರೆ ಇತ್ತೀಚೆಗೆ ಇದರಲ್ಲಿ ಅವಶ್ಯವಾದ ಕೆಲವು ಮಾರ್ಪಾಡುಗಳನ್ನು ಮಾಡಬೇಕೆಂದು ಮುಂಬಯಿ ಪ್ರಾಂತದ ಶಾಲಾಖಾತೆಯ ಟೆಕ್ಸ್ಟ್ ಬುಕ್ ಕಮಿಟಿಯವರು ಸೂಚಿಸಿದುದರಿಂದ ಇದರಲ್ಲಿ ಅನೇಕ ಮಾರ್ಪಾಡುಗಳನ್ನು ಮಾಡಿ ವಿದ್ಯಾರ್ಥಿಗಳಿಗೆ ಸುಲಭವಾಗುವಂತೆ ಸುಧಾರಿಸಲಾಗಿದೆ. ಅನಾವಶ್ಯಕವೆಂದು ಕಂಡ ಹಲವು ವಿಷಯಗಳನ್ನು ತೆಗೆದುಹಾಕಿರುವುದಲ್ಲದೆ ಕೆಲವು ಹೊಸ ವಿಷಯಗಳನ್ನು ಅಲ್ಲಲ್ಲಿ ಸೇರಿಸಿದೆ. ಛಂದಸ್ಸಿನ ವಿಷಯವನ್ನೂ ಹೆಚ್ಚಾಗಿ ಸೇರಿಸಲಾಗಿದೆ. ಈ ಕೆಲಸದಲ್ಲಿ ಅನೇಕ ವಿದ್ವಾಂಸರ ಸಲಹೆ ಸಹಾಯಗಳು ದೊರೆತುದಕ್ಕಾಗಿ ನಾವು ಅವರೆಲ್ಲರಿಗೂ ಕೃತಜ್ಞರಾಗಿದ್ದೇವೆ.

ಈ ಗ್ರಂಥದಲ್ಲಿ ಉದಾಹರಣೆ ಸ್ವಲ್ಪ ಹೆಚ್ಚಾಗಿಯೇ ಇರುವುವೆಂದು ಕಾಣಬಹುದು. ಅನೇಕ ಶಬ್ದಗಳ ಪ್ರಯೋಗಗಳ ಸಂಬಂಧವಾಗಿ ಭಿನ್ನಾಭಿಪ್ರಾಯಗಳಿಗೆ ಎಡೆ ಇರುವುದೆಂದು ತೋರಬಹುದು. ಆದರೆ ವ್ಯಾಕರಣವು ನುಡಿಯ ಕಟ್ಟು ಆಗಿರುವಂತೆ ನುಡಿಯ ಕನ್ನಡಿಯೂ ಆಗಿರುವುದರಿಂದ ರೂಢಿಗನುಸಾರವಾದ ಹಲವು ಪ್ರಯೋಗಗಳೂ ಇದರಲ್ಲಿ ಬಂದಿವೆ. ಉದಾಹರಣೆಗಳಿಂದಲೇ ನಿಯಮಗಳನ್ನು ತಾವೇ ಮಾಡಿಕೊಳ್ಳುವಂತೆ ವಿದ್ಯಾರ್ಥಿಗಳಿಗೆ ಶಿಕ್ಷಕರು ಮೊದಲಿನಿಂದಲೂ ಕಲಿಸುತ್ತಿರಬೇಕು. ಇದರಿಂದ ವ್ಯಾಕರಣದ ನಿಯಮಗಳು ಅಕ್ಷರಶಃ ಸೆನಸಿಡುವಂತಹವೂ ಪಾಲಿಸತಕ್ಕಂತಹವೂ ಎಂಬ ಕಲ್ಪನೆಯು ಹೋಗಿ ಹಲವು ಕಡೆಗಳಲ್ಲಿ ಶಾಸ್ತ್ರಕ್ಕಿಂತಲೂ ರೂಢಿಯು ಬಲವಾದುದೆಂಬ ಕಲ್ಪನೆಯು ತಲೆದೋರುವುದು.

ವಿದ್ವಾಂಸರ ಸಲಹೆಗಳನ್ನು ಸದಾ ಅಂಗೀಕರಿಸಲೂ ಸಿದ್ಧರಿದ್ದೇವೆ.

ಶಂಭುಲಿಂಗಪ್ಪ ಶಿವರುದ್ರಪ್ಪ ಕುಲಕರಣಿ

# ನುಡಿಗಟ್ಟಿನ ಪರಿವಿಡಿ

# ಮೊದಲನೆಯ ಭಾಗ—ಅಕ್ಷರ ವಿಚಾರ

## ಸಂಜ್ಞಾಪ್ರಕರಣ

೧. ನಮ್ಮ ಮಾತಿನೊಳಗಿನ ಪ್ರತಿಯೊಂದು ಸ್ಪಷ್ಟ ಧ್ವನಿಗೂ ಅದನ್ನು ಬರೆದು ತೋರಿಸಲಿಕ್ಕೆ ಹಿರಿಯರು ಗೊತ್ತುಮಾಡಿದ ಚಿಹ್ನಕ್ಕೂ ಅಕ್ಷರ ಅಥವಾ ಅಕ್ಕರವೆನ್ನುವರು. ಅಕ್ಷರಕ್ಕೆ ವರ್ಣವೆಂಬ ಬೇರೆ ಹೆಸರೂ ಉಂಟು.

೨. ಅಕ್ಷರಗಳು ಮೂರು ವಿಧವಾಗಿವೆ:— ೧. ಮೂಲಾಕ್ಷರಗಳು; ೨. ಗುಣಿತಾಕ್ಷರಗಳು; ೩. ಒತ್ತಕ್ಷರಗಳು.

೩. ಶುದ್ಧವಾದಂತಹ ಎಂದರೆ ಒಂದರೊಳಗೊಂದು ಕೂಡದಂತಹ ವರ್ಣಕ್ಕೆ ಮೂಲಾಕ್ಷರವೆಂಬ ಹೆಸರು. ಮೂಲಾಕ್ಷರಗಳು ಐವತ್ತು ಉಂಟು. ಅವೆಲ್ಲಕ್ಕೂ ಕೂಡಿ ವರ್ಣಮಾಲೆಯೆಂಬ ಹೆಸರು. ಅವು ಯಾವುವೆಂದರೆ —

### ವರ್ಣಮಾಲೆ:

ಸ್ವರಗಳು:

ಅ ಆ, ಇ ಈ, ಉ ಊ, ಋ ೠ,* ಎ ಏ ಐ, ಒ ಓ ಔ.

ವ್ಯಂಜನಗಳು:-(೧) ವರ್ಗೀಯಗಳು:

ಕ್, ಖ್, ಗ್, ಘ್, ಙ್; ಚ್, ಛ್, ಜ್, ಝ್, ಞ್;
ಟ್, ಠ್, ಡ್, ಢ್, ಣ್; ತ್, ಥ್; ದ್, ಧ್, ನ್;
ಪ್, ಫ್, ಬ್, ಭ್, ಮ್.

(೨) ಅವರ್ಗೀಯಗಳು:

ಯ್, ರ್, ಲ್, ವ್, ಶ್, ಷ್, ಸ್, ಹ್, ಳ್.

ಅಯೋಗವಾಹಗಳು (ಕ್ಲೀಬವರ್ಣಗಳು):

ಂ ಅನುಸ್ವಾರ. ಃ ವಿಸರ್ಗ.

---

* “ಇಲ್ಲಿ ‘ಌ’ ಎಂಬ ಇನ್ನೊಂದು ವರ್ಣವನ್ನು ಕೆಲವರು ಹೇಳುವುದುಂಟು. ಆದರೆ ಅದು ಸಂಸ್ಕೃತದಲ್ಲಿ ಮಾತ್ರ—ಅಲ್ಲಿಯೂ ಒಂದೇ ಕಡೆಗೆ ಮಾತ್ರ—ಉಪಯೋಗವಾಗುವುದರಿಂದ ಅದನ್ನು ಬಿಟ್ಟು ೫೦ ಅಕ್ಷರಗಳನ್ನೆ ಹೇಳುವುದು ರೂಢಿಯಾಗಿದೆ.

೪. ಮೇಲೆ ತೋರಿಸಿದ ವರ್ಣಮಾಲೆಯೊಳಗಿನ 'ಎ, ಒ, ಳ' ಎಂಬೀ ಮೂರು ವರ್ಣಗಳು ಸಂಸ್ಕೃತ ಶಬ್ದಗಳಲ್ಲಿ ಬರುವುದಿಲ್ಲ. 'ಋ, ೠ, ಶ, ಷ, ಃ (ವಿಸರ್ಗ)' ಈ ಅಯ್ದು ವರ್ಣಗಳು ಕನ್ನಡ ಶಬ್ದಗಳಲ್ಲಿ ಬರುವುದಿಲ್ಲ. 'ಖ್, ಘ್, ಛ್, ಝ್, ಠ್, ಢ್, ಥ್, ಧ್, ಫ್, ಭ್, ಈ ಅಕ್ಷರಗಳು ಅನುಕರಣವಾಚಕ, ಸಂಖ್ಯಾವಾಚಕ ಶಬ್ದಗಳಲ್ಲಿ ಬರುವುವಲ್ಲದೆ ಶುದ್ಧ ಕನ್ನಡ ಶಬ್ದಗಳಲ್ಲಿ ಬರುವುದಿಲ್ಲ.

೫. ಒಂದು ವರ್ಣವನ್ನು ಹೇಳಬೇಕಾದರೆ, ಅದರ ಮುಂದೆ 'ಕಾರ' ಎಂಬ ಶಬ್ದವನ್ನು ಇಡುತ್ತಾರೆ*.

ಉದಾ: ಅಕಾರ, ಇಕಾರ, ಕಕಾರ, ಮಕಾರ† ಮು.

೬. ಮೂಲಾಕ್ಷರಗಳಲ್ಲಿ ಸ್ವರಗಳು, ವ್ಯಂಜನಗಳು‡, ಅಯೋಗವಾಹಗಳು (ಅಥವಾ ಯೋಗವಾಹಗಳು) ಎಂಬ ಮೂರು ಭೇದಗಳು ಉಂಟು.

೭. ಸ್ವರಗಳು ಸ್ವತಂತ್ರವಾಗಿ ಉಚ್ಚರಿಸಲ್ಪಡುವ ವರ್ಣಗಳು. ಅವು ಅಕಾರದಿಂದ ಔಕಾರದ ವರೆಗೆ ಹದಿನಾಲ್ಕು ಉಂಟು.

(ಮೂರನೆಯ ನಿಯಮದ ಕೆಳಗೆ ಬರೆದ ವರ್ಣಮಾಲೆಯಲ್ಲಿ ನೋಡಿರಿ.)

೮. ಸ್ವರಗಳಲ್ಲಿ ಹ್ರಸ್ವಗಳು, ದೀರ್ಘಗಳು ಎಂದು ಎರಡು ಭೇದಗಳ್ ಉಂಟು.§ ಅವು ಯಾವುವೆಂದರೆ:—

ಹ್ರಸ್ವಗಳು—'ಅ, ಇ, ಉ, ಋ, ಎ, ಒ' ಇವು ಆರು.

ದೀರ್ಘಗಳು—'ಆ, ಈ, ಊ, ೠ, ಏ, ಐ, ಓ, ಔ,' ಇವು ಎಂಟು.

---

*ಆದರೆ ರ ವರ್ಣಕ್ಕೆ 'ರೇಫ' ಎನ್ನುವುದೇ ವಿಶೇಷ ರೂಢಿಯುಂಟು.

†ವ್ಯಂಜನಕ್ಕೆ ಕಾರ ಶಬ್ದವು ಪರವಾದರೆ, ನಡುವೆ ಅಕಾರಾಗಮವು ಉಚ್ಚಾರಣಾರ್ಥವಾಗಿ ಬರುವುದು.

‡ ಇವುಗಳಿಗೆ 'ಅರೆಯಕ್ಕರ, ಬೀಳಕ್ಕರ' ಎಂಬ ಹೆಸರುಗಳೂ ಉಂಟು.

§ ಒಂದು ಹ್ರಸ್ವಾಕ್ಷರವನ್ನು ಉಚ್ಚರಿಸುವುದಕ್ಕೆ ಬೇಕಾಗುವನಿತು ಕಾಲಕ್ಕೆ (ಒಂದು) 'ಮಾತ್ರೆ' ಎನ್ನುವರು. ಒಂದು ದೀರ್ಘಾಕ್ಷರವನ್ನು ಉಚ್ಚಾರಮಾಡಲಿಕ್ಕೆ ಎರಡು ಮಾತ್ರೆಗಳ ಕಾಲವು ಬೇಕಾಗುವುದು. ಒಮ್ಮೊಮ್ಮೆ ಮೂರು ಮಾತ್ರೆಗಳಷ್ಟು ಕಾಲವೂ ಒಂದೊಂದು ಸ್ವರಕ್ಕೆ ಬೇಕಾಗುತ್ತದೆ. ಅಂತಹ ಸ್ವರಗಳಿಗೆ 'ಪ್ಲುತ' ಎಂಬ ಹೆಸರು. ಉದಾ: 'ಕೂ ಕ್ಕೂ ಕೂ ಎಂದು ಕೋಳಿ ಕೂಗುತ್ತದೆ'. ಇಲ್ಲಿ ಮೂರನೆಯ 'ಕೂ' ಎಂಬುದು ಪ್ಲುತ ಸ್ವರವೆಂದು ತಿಳಿಯಬೇಕು. ಒಂದು ವ್ಯಂಜನವನ್ನು ಉಚ್ಚರಿಸಲಿಕ್ಕೆ ಅರ್ಧ ಮಾತ್ರೆಯಷ್ಟು ಕಾಲವು ಬೇಕಾಗುವುದು.

೯. ವ್ಯಂಜನಗಳು ಸ್ವರಗಳ ಸಹಾಯದಿಂದ ಸ್ಪಷ್ಟವಾಗಿ ಉಚ್ಚರಿಸಲ್ಪಡುವ ವರ್ಣಗಳು. ಅವು ಕಕಾರದಿಂದ ಳಕಾರದ ವರೆಗೆ ಮೂವತ್ತುನಾಲ್ಕು ಉಂಟು. (ಅವನ್ನು ೩ನೆಯ ನಿಯಮದ ಕೆಳಗಿನ ವರ್ಣಮಾಲೆಯಲ್ಲಿ ನೋಡಿರಿ.)

೧೦. ವ್ಯಂಜನಗಳು ವರ್ಗೀಯಗಳೆಂತಲೂ ಅವರ್ಗೀಯಗಳೆಂತಲೂ ಎರಡು ವಿಧವಾಗಿವೆ. ವರ್ಗೀಯಗಳು ಕಕಾರದಿಂದ ಮಕಾರದ ವರೆಗೆ ಇಪ್ಪತ್ತೈದು; ಮತ್ತು ಅವರ್ಗೀಯಗಳು ಯಕಾರದಿಂದ ಳಕಾರದ ವರೆಗೆ ಒಂಬತ್ತು ಉಂಟು. (ವಿವರಣೆಯನ್ನು ೩ನೆಯ ನಿಯಮದಲ್ಲಿ ನೋಡಿರಿ.)

೧೧. ವರ್ಗೀಯ ವ್ಯಂಜನಗಳಲ್ಲಿ ಕ್ರಮದಿಂದ ಅಯ್ದಯ್ದು ವ್ಯಂಜನಗಳಿಗೆ ಒಂದೊಂದರಂತೆ ಕವರ್ಗ, ಚವರ್ಗ, ಟವರ್ಗ, ತವರ್ಗ, ಪವರ್ಗ, ಎಂದು ಅಯ್ದು ವರ್ಗಗಳುಂಟು.

ಉದಾ: 'ಕ್, ಖ್, ಗ್, ಘ್, ಙ್,' ಈ ಅಯ್ದು ಕೂಡಿ ಕವರ್ಗವು. ಚ್, ಛ್, ಜ್, ಝ್, ಞ್' ಈ ಅಯ್ದು ಕೂಡಿ ಚವರ್ಗವು. ಹೀಗೆಯೇ ಮುಂದೆ.

೧೨. ಪ್ರತಿಯೊಂದು ವರ್ಗದ ಮೊದಲಿನ ಎರಡು ವ್ಯಂಜನಗಳಿಗೆ ಕರ್ಕಶ ವರ್ಣಗಳೆನ್ನುವರು. ಉದಾ: ಕ್ ಖ್—ಇತ್ಯಾದಿ.

ಕಡೆಯ ಮೂರು ವ್ಯಂಜನಗಳಿಗೆ ಮೃದು ವರ್ಣಗಳೆನ್ನುವರು.

ಉದಾ: ಗ್, ಘ್, ಙ್. ಹೀಗೆಯೇ ಉಳಿದ ವರ್ಗಗಳ ವಿವರವನ್ನು ತಿಳಿಯಬೇಕು.

೧೩. ಪ್ರತಿಯೊಂದು ವರ್ಗದ (ಅ) ೧ನೆಯ ೩ನೆಯ ವ್ಯಂಜನಗಳಿಗೆ ಅಲ್ಪಪ್ರಾಣ*ಗಳೆಂದು ಹೆಸರು;

ಉದಾ: ಕ್, ಗ್; ಚ್, ಜ್; ಟ್, ಡ್; ತ್, ದ್; ಪ್, ಬ್.

(ಆ) ೨ನೆಯ ೪ನೆಯ ವ್ಯಂಜನಗಳಿಗೆ ಮಹಾಪ್ರಾಣ*ಗಳೆಂಬ ಹೆಸರು;

ಉದಾ: ಖ್, ಘ್; ಛ್, ಝ್; ಠ್, ಢ್; ಥ್, ಧ್; ಫ್, ಭ್.

(ಇ) ೫ನೆಯ ವ್ಯಂಜನಕ್ಕೆ ಅನುನಾಸಿಕವೆಂಬ ಹೆಸರು.

ಉದಾ: ಙ್, ಞ್, ಣ್, ನ್, ಮ್.

೧೪. ಅವರ್ಗೀಯಗಳಲ್ಲಿ 'ಶ್, ಷ್, ಸ್, ಳ್' ಇವು ನಾಲ್ಕು ಕರ್ಕಶವರ್ಣಗಳು; ಉಳಿದುವು ಮೃದು ವರ್ಣಗಳು. ಇದಲ್ಲದೆ 'ಶ್, ಷ್, ಸ್, ಹ್'

---

* ಕೆಲವರು ಅಲ್ಪಪ್ರಾಣಕ್ಕೆ 'ಹೆಣ್ಣಕ್ಷರ'ವೆಂತಲೂ ಮಹಾಪ್ರಾಣಕ್ಕೆ 'ಗಂಡಕ್ಷರ'ವೆಂಲೂ ಎನ್ನುವರು.

ಗಳಿಗೆ ಉಷ್ಮಗಳೆಂದೂ 'ಯ್, ರ್, ಲ್, ವ್'ಗಳಿಗೆ ಅಂತಸ್ಥಗಳೆಂದೂ ಹೆಸರು.

೧೫. ಅನುಸ್ವಾರ ವಿಸರ್ಗಗಳಿಗೆ ಸ್ವತಂತ್ರೋಚ್ಚಾರವು ಇಲ್ಲದ್ದರಿಂದ ಅವು ಸ್ವರಗಳಲ್ಲ; ನಿಯಮಿತೋಚ್ಚಾರವಿಲ್ಲದ್ದರಿಂದ ವ್ಯಂಜನಗಳೂ ಅಲ್ಲ. ಇದರಿಂದ ಅವಕ್ಕೆ ಕೆಲವರು ಕ್ಲೀಬವರ್ಣಗಳೆನ್ನುವರು. ಮತ್ತು ಅವು ಸ್ವರಗಳೊಳಗೂ ವ್ಯಂಜನಗಳೊಳಗೂ ಕೂಡುವುದಿಲ್ಲವಾದ ಕಾರಣ ಅವಕ್ಕೆ ಅಯೋಗವಾಹಗಳೆಂಬ ಹೆಸರು.

೧೬. ವರ್ಣಗಳು ಬಾಯೊಳಗೆ ಬೇರೆ ಬೇರೆ ಸ್ಥಾನಗಳಲ್ಲಿ ಹುಟ್ಟುವುದರಿಂದ ಆಯಾ ಸ್ಥಾನಗಳ ಹೆಸರುಗಳನ್ನು ಹೊಂದಿವೆ. ಹೇಗೆಂದರೆ:—

'ಅ, ಆ, ಕವರ್ಗ, ಹ, ಃ (ವಿಸರ್ಗ)' ಇವುಗಳಿಗೆ ಕಂಠ್ಯಗಳೆನ್ನುವರು. ಏಕೆಂದರೆ ಅವು ಕಂಠದಲ್ಲಿ ಹುಟ್ಟುವುವು.

'ಇ, ಈ, ಚವರ್ಗ, ಯ, ಶ' ಗಳಿಗೆ ತಾಲವ್ಯಗಳೆನ್ನುವರು. ಏಕೆಂದರೆ ಇವು ತಾಲುವಿನಲ್ಲಿ ಎಂದರೆ ಅಂಗಳಿನಲ್ಲಿ ಹುಟ್ಟುವುವು.

'ಉ, ಊ, ಪವರ್ಗ' ಗಳಿಗೆ ಓಷ್ಠ್ಯಗಳೆನ್ನುವರು. ಏಕೆಂದರೆ ಇವು ಓಷ್ಠದಲ್ಲಿ ಎಂದರೆ ತುಟಿಯಲ್ಲಿ ಹುಟ್ಟುವುವು.*

'ಋ, ೠ, ಟವರ್ಗ, ರ, ಷ, ಳ' ಗಳು ಮೂರ್ಧನ್ಯಗಳು. ಏಕೆಂದರೆ ಇವು ಮೂರ್ಧದಲ್ಲಿ ಎಂದರೆ ಅಂಗಳಿನ ಮೇಲ್ಭಾಗದಲ್ಲಿ ಹುಟ್ಟುವುವು.

'ತವರ್ಗ, ಲ, ಸ'ಗಳಿಗೆ ದಂತ್ಯಗಳೆನ್ನುವರು. ಏಕೆಂದರೆ ಇವು ದಂತ ಎಂದರೆ ಹಲ್ಲುಗಳಲ್ಲಿ ಹುಟ್ಟುವುವು.

'ಎ, ಏ, ಐ' ಗಳು ಕಂಠತಾಲವ್ಯಗಳು. ಏಕೆಂದರೆ ಇವು ಕಂಠದಲ್ಲಿಯೂ ತಾಲುವಿನಲ್ಲಿಯೂ ಕೂಡಿ ಹುಟ್ಟುವುವು.

'ಒ, ಓ, ಔ' ಗಳು ಕಂಠೋಷ್ಠ್ಯಗಳು. ಏಕೆಂದರೆ ಇವು ಕಂಠದಲ್ಲಿಯೂ ಓಷ್ಠದಲ್ಲಿಯೂ ಕೂಡಿ ಹುಟ್ಟುವುವು.

ವಕಾರವು ದಂತದಲ್ಲೂ ಓಷ್ಠದಲ್ಲೂ ಕೂಡಿ ಹುಟ್ಟುವುದರಿಂದ ದಂತೋಷ್ಠ್ಯವೆನಿಸುತ್ತದೆ.

ಇದಲ್ಲದೆ ವರ್ಗಗಳ ಕಡೆಯಲ್ಲಿರುವ 'ಙ, ಞ, ಣ, ನ, ಮ'ಗಳ ಉಚ್ಚಾರವು ಮೂಗಿನಿಂದ ಆಗುವ ಕಾರಣ ಇವಕ್ಕೆ ಅನುನಾಸಿಕಗಳೆನ್ನುವರು.

---

* [illegible] ಓಷ್ಠಗಳಲ್ಲಿ ಹುಟ್ಟುವುದು.

## ಗುಣಿತಾಕ್ಷರಗಳು.

೧೭. ವ್ಯಂಜನಗಳಿಗೆ ಸ್ವರಗಳನ್ನು ಎಂದರೆ ಸ್ವರಚಿಹ್ನಗಳನ್ನು ಕೂಡಿಸುವುದರಿಂದ ಹುಟ್ಟುವ ಮಿಶ್ರವರ್ಣಗಳಿಗೆ ಗುಣಿತಾಕ್ಷರಗಳೆನ್ನುವರು. ಕೆಳಗೆ ಅನುಕ್ರಮವಾಗಿ ಸ್ವರಗಳನ್ನೂ ಸ್ವರಚಿಹ್ನಗಳನ್ನೂ ಅವು ಕಕಾರಕ್ಕೆ ಸೇರುವುದರಿಂದ ಹುಟ್ಟುವ ಗುಣಿತಾಕ್ಷರಗಳನ್ನೂ ಕೊಡುತ್ತೇವೆ.

| ಅನುಕ್ರಮ | ಸ್ವರಗಳು. | ಸ್ವರಚಿಹ್ನಗಳು. | ವ್ಯಂಜನವು. | ಗುಣಿತಾಕ್ಷರಗಳು. |
|---|---|---|---|---|
| ೧ | ಅ | ‿ | ಕ್ | ಕ |
| ೨ | ಆ | ಾ | ಕ್ | ಕಾ |
| ೩ | ಇ | ಿ | ಕ್ | ಕಿ |
| ೪ | ಈ | ೀ | ಕ್ | ಕೀ |
| ೫ | ಉ | ು | ಕ್ | ಕು |
| ೬ | ಊ | ೂ | ಕ್ | ಕೂ |
| ೭ | ಋ | ೃ | ಕ್ | ಕೃ |
| ೮ | ೠ | ೄ | ಕ್ | ಕೄ |
| ೯ | ಎ | ೆ | ಕ್ | ಕೆ |
| ೧೦ | ಏ | ೇ | ಕ್ | ಕೇ |
| ೧೧ | ಐ | ೈ | ಕ್ | ಕೈ |
| ೧೨ | ಒ | ೊ | ಕ್ | ಕೊ |
| ೧೩ | ಓ | ೋ | ಕ್ | ಕೋ |
| ೧೪ | ಔ | ೌ | ಕ್ | ಕೌ |

ಹೀಗೆ ಪ್ರತಿಯೊಂದು ವ್ಯಂಜನವು ಸ್ವರಸಂಯೋಗದಿಂದ ಹದಿನಾಲ್ಕು ಗುಣಿತಾಕ್ಷರಗಳ ರೂಪಗಳನ್ನು ಧರಿಸುತ್ತದೆ. ಇವುಗಳನ್ನು ಕ್ರಮದಿಂದ ಬರೆದ ಸಾಲಿಗೆ 'ಗುಣಿತಾಕ್ಷರ' ಇಲ್ಲವೆ ಬಳ್ಳಿಯೆನ್ನುವರು.

## ಒತ್ತಕ್ಷರಗಳು.

೧೮. ನಡುವೆ ಸ್ವರವಿಲ್ಲದೆ ಅನೇಕ* ವ್ಯಂಜನಗಳು ಕೂಡಿಬಂದರೆ ಅವಕ್ಕೆ ಸಂಯುಕ್ತಾಕ್ಷರ ಇಲ್ಲವೆ ಒತ್ತಕ್ಷರವೆಂಬ ಹೆಸರು. ಒತ್ತಕ್ಷರದಲ್ಲಿ ಎಲ್ಲಕ್ಕೂ

* ಕನ್ನಡದ ಒತ್ತಕ್ಷರಗಳು ಎರಡೇ ವ್ಯಂಜನಗಳಿಂದಾಗಿವೆ. ಉದಾ: ನಾಲ್ಕು, ಉಣ್ಮು. ಆದರೆ ಸಂಸ್ಕೃತದಲ್ಲಿ ಇನ್ನೂ ಹೆಚ್ಚು ವ್ಯಂಜನಗಳು ಕೂಡುವುದುಂಟು. ಉದಾ: ನಸ್ತ್ರ, ಕಾರ್ತ್ಸ್ನ, — ಇತ್ಯಾದಿ.

ಕಡೆಯ ವ್ಯಂಜನದಲ್ಲಿ ಸ್ವರವಿರುತ್ತದೆ. ಆದರಿಂದ ಎಲ್ಲ ವ್ಯಂಜನಗಳೂ ಸ್ಪಷ್ಟವಾಗಿ ಉಚ್ಚರಿಸಲ್ಪಡುತ್ತವೆ.

ಉದಾ: ಲ್ಗ, ಲ್ಪ, ಳ್ವ, ರ್ಕ, ಣ್ಬ, ಣ್ಣ, ಲ್ಕ, ಸ್ತ್ರ—ಮು.

೧೯. ವ್ಯಂಜನಗಳು ಒಂದಕ್ಕೊಂದು ಕೂಡಿದರೆ ಮೊದಲು ಉಚ್ಚರಿಸಲ್ಪಡುವ ವ್ಯಂಜನವನ್ನು ಬಿಟ್ಟು ಉಳಿದ ವ್ಯಂಜನಗಳಿಗೆ ಒತ್ತುಗಳ ರೂಪಗಳು ಬರುತ್ತವೆ. ಒತ್ತುಗಳಾಗುವಾಗ (೧) ಕೆಲವು ವ್ಯಂಜನಗಳು ಇದ್ದಂತೆ ಇರುತ್ತವೆ.

ಉದಾ: ಖ, ಙ, ಜ, ಟ, ಣ, ಬ, ಭ, ವ, ಞ ಮು.

(೨) ಕೆಲವು ವ್ಯಂಜನಗಳ ತಲೆಕಟ್ಟು ಹೋಗುತ್ತದೆ.

ಉದಾ: ಕ=್ಕ, ಗ=್ಗ, ಚ=್ಚ, ಘ=್ಘ, ಛ=್ಛ, ಝ=್ಝ, ಠ=್ಠ, ಡ=್ಡ, ಥ=್ಥ, ದ=್ದ, ಧ=್ಧ, ಪ=್ಪ, ಫ=್ಫ, ಮು.

(೩) ಕೆಲವು ವ್ಯಂಜನಗಳಿಗೆ ಶೀರ ಭಿನ್ನರೂಪಗಳೇ ಬರುತ್ತವೆ.

ಉದಾ: ತ=್ತ, ನ=್ನ, ಮ ್ಮ, ಯ=್ಯ, ರ=್ರ, ೯, ಲ=್ಲ.

೨೦. ಒತ್ತಕ್ಷರವನ್ನು ರೆಯುವ ಕ್ರಮವು ಹೇಗಂದರೆ:—ಎಲ್ಲಕ್ಕೂ ಮೊದಲಿನ ವ್ಯಂಜನದಲ್ಲಿ ಎಲ್ಲಕ್ಕೂ ಕಡೆಯ ವ್ಯಂಜನದ ಸ್ವರವನ್ನು ಕೂಡಿಸಿ ಉಂಟಾದ ಗುಣಿತಾಕ್ಷರವನ್ನು ಮೊದಲು ಬರೆದು ಅದರ ಕೆಳಗೆ ಉಳಿದ ವ್ಯಂಜನಗಳ ಒತ್ತುಗಳನ್ನು ಕ್ರಮದಿಂದ ಬರೆಯಬೇಕು.

ಉದಾ: ಶ್+ರ್+ಈ=ಶೀ+ರ್=ಶ್ರೀ.

ಸ್+ತ್+ರ್+ಈ=ಸೀ+ತ್+ರ್=ಸ್ತ್ರೀ.

೨೧. ರೇಫದ ಗುರುತುಗಳು ಎರಡುಂಟು. ರೇಫವೇ ಬೇರೆ ವ್ಯಂಜನಕ್ಕೆ ಒತ್ತಾದರೆ, '್ರ' ಈ ಚಿಹ್ನವನ್ನು ಆ ಬೇರೆ ವ್ಯಂಜನದ ಕೆಳಗೆ ಬರೆಯುತ್ತಾರೆ.

ಉದಾ: ಕ್+ರ್+ಅ=ಕ+ರ್=ಕ್ರ.

ಹೀಗೆ ಪ್ರ, ವ್ರ, ಸ್ರು, ಪ್ರು, ಮು.

ರೇಫಕ್ಕೆ ಬೇರೆ ವ್ಯಂಜನವು ಒತ್ತಾದರೆ, ಆ ಬೇರೆ ವ್ಯಂಜನವನ್ನು ರೇಫದ ಕೆಳಗೆ ಒತ್ತು ಮಾಡಿ 'ರ್ಕ, ರ್ಥ, ರ್ಯ' ಹೀಗೆ ಬರೆಯುವ ರೂಢಿಯು ಇದ್ದರೂ ಒಮ್ಮೊಮ್ಮೆ ಆ ಬೇರೆ ವ್ಯಂಜನವನ್ನೇ ಮೊದಲು ಬರೆದು ಅದರ ಮುಂದೆ ರೇಫವನ್ನು '೯' ಈ ಚಿಹ್ನದಿಂದ ಬರೆಯುತ್ತಾರೆ. ಆದರೆ ಮೊದಲು ರೇಫವನ್ನೇ ಉಚ್ಚರಿಸುತ್ತಾರೆ.

ಉದಾ: ರ್ಪ=ಪ೯, ರ್ಕ=ಕ೯, ರ್ಥ=ಥ೯, ರ್ಯ=ಯ೯ ಮು.

'೯' ಈ ಚಿಹ್ನಕ್ಕೆ ರೂಢಿಯಲ್ಲಿ 'ಅರ್ಕಾವಳಿ'ಯೆಂಬ ಹೆಸರುಂಟು,

೨೨. ಒಂದು ವ್ಯಂಜನಕ್ಕೆ ಅದೇ ವ್ಯಂಜನವಾಗಲಿ ಅದರ ಸಜಾತೀಯ ವ್ಯಂಜನವಾಗಲಿ ಒತ್ತಾಗಿ ಉಂಟಾದ ಒತ್ತಕ್ಷರಕ್ಕೆ ದ್ವಿತ್ವಾಕ್ಷರವೆಂದು ಹೆಸರು.

ಉದಾ: ತ್ತ, ಥ್ಥ, ಮ್ಮ, ಪ್ಪ, ಫ್ಫ, ಜ್ಜ, ಜ್ಝ ಮು.

೨೩. ಕನ್ನಡ ಶಬ್ದಗಳಲ್ಲಿ ದ್ವಿತ್ವಾಕ್ಷರಗಳೇ ಬಹಳವಾಗಿವೆ, ಒತ್ತಕ್ಷರಗಳು ಕಡಿಮೆ.

ಉದಾ: ದ್ವಿತ್ವಕ್ಕೆ—ಅಕ್ಕಿ, ಬಜ್ಜಲು, ಅಟ್ಟ, ಅಪ್ಪ, ಅಮ್ಮ, ಅಯ್ಯ ಮು.

ಒತ್ತಕ್ಷರಕ್ಕೆ—ಅಷ್ಟು, ಇಷ್ಟು, ಎಷ್ಟು, ನಾಲ್ಕು, ತಣ್ಪು ಮು.

## ಅಕ್ಷರಗಳ ಲೇಖನೋಚ್ಚಾರಭೇದ.

೨೪. ಅಕಾರದ ಉಚ್ಚಾರವು ಎರಡು ಬಗೆಯಾಗಿದೆ:—(೧) ಸಂಕುಚಿತ, (೨) ವಿಸ್ತೃತ. 'ಅಗಸೆ' ಎಂಬ ಶಬ್ದವು ಊರ ಬಾಗಿಲ ಹೆಸರಾದಾಗ ಅಕಾರದ ಉಚ್ಚಾರವು ಸಂಕುಚಿತವಾಗುತ್ತದೆ. ಇದೇ ಪ್ರಕಾರ 'ಅಗಳಿ ಅಚ್ಚು, ಕತ್ತಿ (ಖಡ್ಗ), ಕಲಿ (ಅಭ್ಯಾಸಿಸು), ಕರಿ (ಆನೆ), ಗಣಿಕೆ (ಸೂಳೆ), ಮುಂತಾದ ಶಬ್ದಗಳಲ್ಲಿ ಅಕಾರವು ಸಂಕುಚಿತವಾಗಿ ಉಚ್ಚರಿಸಲ್ಪಡುತ್ತದೆ.

'ಅಗಸೆ'ಯೆಂಬ ಶಬ್ದವು ಧಾನ್ಯವಿಶೇಷಕ್ಕೆ ಹೆಸರಾದಾಗ ಅಕಾರದ ಉಚ್ಚಾರವು ವಿಸ್ತೃತವಾಗುತ್ತದೆ. ಹೀಗೆಯೇ 'ಅಪ್ಪ, ಅಗಸ, ಕತ್ತೆ, ಕಲಿ (ಕೂಡು), ಕರ, ಗಣಿಕೆ (= ಗಣ್ಣು)' ಮುಂತಾದ ಶಬ್ದಗಳಲ್ಲಿ ಅಕಾರವು ವಿಸ್ತೃತವಾಗಿ ಉಚ್ಚರಿಸಲ್ಪಡುತ್ತದೆ.

೨೫. 'ಚ, ಜ' ವರ್ಣಗಳ ಉಚ್ಚಾರವು (ಅ) ಸಂಸ್ಕೃತ ಶಬ್ದಗಳಲ್ಲಿ ಶುದ್ಧತಾಲವ್ಯವಾಗಿ ಇರುತ್ತದೆ;

ಉದಾ: ಚಂದ್ರ, ಚಾರು, ಚೂಡ, ಛತ್ರ, ಜಲ, ಝರಿ ಮು.

(ಆ) ಕನ್ನಡದ ಕೆಲವು ಶಬ್ದಗಳಲ್ಲಿ ಶುದ್ಧತಾಲವ್ಯವಾಗಿದೆ;

ಉದಾ: ಚಳಕ, ಜಳಕ, ಜಲ್ಲಿ, ಜಾತ್ರೆ, ಜಾರು, ಚಾವ ಮು.

(ಇ) ಬೇರೆ ಕೆಲವು ಕನ್ನಡ ಶಬ್ದಗಳಲ್ಲಿ ದಂತತಾಲವ್ಯವಾಗಿದೆ.

ಉದಾ: ಈಚಲ, ರಾಜಪ್ಪ, ಚೋಟು, ಚೂಣಿ, ಎಚ್ಚರಿಕೆ, ಹಚ್ಚಗೆ, ಜೋಳ.

(ಈ) ಅಚ್ಚಗನ್ನಡದಲ್ಲಿ ಯಕಾರ-ವಕಾರಗಳಿಂದ ಆರಂಭವಾಗುವ ಶಬ್ದಗಳು ಕಡಿಮೆ. ಇತ್ತೀಚಿಗೆ ಬಳಕೆಯಲ್ಲಿ ಉಂಟಾದ ಯಜಮಾನ, ಯಾಕೆ,

ಯಾತ, ಯಾರು, ಮುಂತಾದ ಶಬ್ದಗಳ ಶುದ್ಧ ರೂಪಗಳು 'ಆವುದು, ಏಕೆ, ಏತ, ಆರು, ಇತ್ಯಾದಿಯಾಗಿ ಇರುತ್ತವೆ.

ಒಮ್ಮೊಮ್ಮೆ ಸಂಸ್ಕೃತದಿಂದ ಬಂದ ಶಬ್ದಗಳ ಪ್ರಾರಂಭದ ಯಕಾರ-ವಕಾರಗಳು ಕನ್ನಡದಲ್ಲಿ 'ಎ, ಒ'ಗಳಾಗಿ ಬರೆಯಲ್ಪಡುತ್ತವೆ.

ಉದಾ: ವಾಲೆ=ಓಲೆ. ಯಮ=ಎಮ ಇತ್ಯಾದಿ.

ಹೀಗೆಯೇ ಹಳಗನ್ನಡದ 'ವೋಲ್' ಎಂಬುದನ್ನು 'ಓಲ್' ಎಂದೂ ಬರೆಯುವುದುಂಟು,

೨೬. (ಅ) ಅನುಸ್ವಾರದ ಮುಂದೆ ಯಾವಕ್ಷರವೂ ಇಲ್ಲದಿದ್ದರೆ, ಅದು ಮಕಾರದಂತೆ ಉಚ್ಚರಿಸಲ್ಪಡುತ್ತದೆ.

ಉದಾ: ಅಂ=ಅಮ್, ಇಂ=ಇಮ್, ಉಂ=ಉಮ್, ಅವಂ=ಅವಮ್ ಮು.

(ಆ) ಶಬ್ದಗಳ ಮಧ್ಯದಲ್ಲಿ ವರ್ಗೀಯ ವ್ಯಂಜನಗಳ ಹಿಂದೆ ಅನುಸ್ವಾರವನ್ನು ಬರೆದಾಗ ಅದರ ಉಚ್ಚಾರವನ್ನು ಅದರ ಮುಂದಿನ ವ್ಯಂಜನದ ವರ್ಗದ ಅನುನಾಸಿಕದಂತೆ ಮಾಡತಕ್ಕದ್ದು. ಇಂತಹ ಕಡೆಗೆ ಅನುನಾಸಿಕವನ್ನು ಬರೆಯುವುದೇ ಶುದ್ಧವಾದ ಪದ್ಧತಿ. ಆದುದರಿಂದ ಅನುಸ್ವಾರವನ್ನು ಬಳಸುವುದು ಬರೆಯುವ ಅನುಕೂಲಕ್ಕಾಗಿ ಎಂದು ತಿಳಿಯತಕ್ಕದ್ದು.*

ಉದಾ: ಅಂಕ=ಅಙ್ಕ, ಮುಂಚೆ=ಮುಞ್ಚೆ, ಅಂಟು=ಅಣ್ಟು, ದಂತ=ದನ್ತ.

## ಸಂಧಿಪ್ರಕರಣ.

೨೭. ಎರಡು ಇಲ್ಲವೆ ಹೆಚ್ಚು ವರ್ಣಗಳನ್ನು ಪರಸ್ಪರವಾಗಿ ಕೂಡಿಸಿ (ಎಂದರೆ ನಡುವೆ ಬಿಡುವಿಲ್ಲದೆ ಅವೆಲ್ಲವನ್ನು ಒಟ್ಟಾಗಿ) ಉಚ್ಚಾರಮಾಡುವುದೇ **ಸಂಧಿಯು**. ಸಂಧಿಗೆ **ಸಂಹಿತೆಯೆಂ**ತಲೂ ಹೆಸರುಂಟು.

ಉದಾ: ಕಾಲ್+ಇಲ್ಲ=ಕಾಲಿಲ್ಲ, ಮೇಲ್+ಮೇಯ್=ಮೇಲ್ಮೆಯ್ ಇತ್ಯಾದಿ.

೨೮. ಶಬ್ದಗಳ ಉಚ್ಚಾರವು ಸರಳವಾಗಬೇಕು; ಅರ್ಥವು ಚೆನ್ನಾಗಿ ತಿಳಿಯಬೇಕು, ಎಂದು ಭಾಷೆಯಲ್ಲಿ ಸಂಧಿಯನ್ನು ಕಲ್ಪಿಸಿದ್ದಾರೆ. ಕಾರಣ ಈ ಸಂಕೇತಗಳಲ್ಲಿ ಯಾವುದಕ್ಕಾದರೂ ವ್ಯತ್ಯಯ ಬರುವ ಹಾಗಿದ್ದರೆ, ಸಂಧಿ ಮಾಡಬಾರದು.

---

*ಅನುಸ್ವಾರದ ಮುಂದೆ ಯಕಾರವಿದ್ದರೆ, ಅನುಸ್ವಾರದ ಉಚ್ಚಾರವು ಞಕಾರದಂತಾಗುವುದು. ಉದಾ: ಸಂಯೋಗ= ಸಞ್ಯೋಗ. (ರ, ಲ, ವ, ಶ, ಷ, ಸ, ಳ ಕಾರಗಳಿದ್ದರೆ ಅದರುಚ್ಚಾರವು ಮೂಗಿನ ಧ್ವನಿಯ ವಕಾರಕ್ಕೆ ಸರಿಯಾಗುತ್ತದೆ. ಉದಾ: ಸಂಸಾರ=ಸವ್ಸಾರ ಮು.

"ಅವನು ಅಂಥ ಜಾಣನೇ?" ಈ ವಾಕ್ಯದ ಮೊದಲಿನ ಎರಡು ಪದಗಳನ್ನು ಕೂಡಿಸಬಾರದು. ಕೂಡಿಸಿದರೆ "ಅವನಂಥ ಜಾಣನೇ?" ಎಂದು ಬೇರೆ ಅರ್ಥವಾಗುತ್ತದೆ. "ಬಾಳಾ, ಊರು ಅನ್ನು, ನೋಡುತ್ತೇನೆ," ಈ ವಾಕ್ಯದ ನಡುವಿನ ಎರಡು ಪದಗಳನ್ನು ಕೂಡಿಸಬಾರದು; ಕೂಡಿಸಿದರೆ, "ಬಾಳಾ, ಊರನ್ನು ನೋಡುತ್ತೇನೆ." ಎಂದು ಬೇರೆ ಅರ್ಥವು ಹುಟ್ಟುತ್ತದೆ.

ಆದರೆ ಕೆಲವು ಕಡೆಗಳಲ್ಲಿ ಸಂಧಿಯನ್ನು ಮಾಡದೇ ಬಿಟ್ಟರೆ ತಪ್ಪಾಗುವುದು. 'ಮಾತಾಡುವಾಗ ತೊದಲುತ್ತಾಳೆ. ಅವನು ಬಂದನೆಂದರೆ ನಾನು ಬರುತ್ತೇನೆ' ಈ ವಾಕ್ಯಗಳಲ್ಲಿ 'ಮಾತಾಡುವಾಗ' ಎಂಬ ಪದದ ಶಬ್ದಗಳನ್ನು ಬಿಡಿಸಿ 'ಮಾತಾಡುವ ಆಗ' ಎಂದೂ, 'ಬಂದನೆಂದರೆ' ಎಂಬುದರೊಳಗಿನ ಶಬ್ದಗಳನ್ನು 'ಬಂದನು ಎಂದರೆ' ಎಂದೂ ಬರೆದರೆ ಉಚ್ಚಾರಕ್ಕೆ ತೊಂದರೆಯಾಗುವುದಲ್ಲದೆ ಅರ್ಥಕ್ಕೂ ಸಂಶಯವು ಬರುತ್ತದೆ.

ಆದುದರಿಂದ ಪ್ರಕೃತಿ-ಪ್ರತ್ಯಯಗಳು ಕೂಡಿ ಪದವಾಗುವಾಗ, ಹಾಗೂ ಬೇರೆ ಬೇರೆ ಶಬ್ದಗಳು ಸಮಾಸವಾಗಿ ಪದವಾಗುವಾಗ ಸಂಧಿಯನ್ನು ಮಾಡಲೇಬೇಕೆಂಬುದು ವ್ಯಾಕರಣದ ನಿಯಮ.

ಉದಾ: ಪ್ರಕೃತಿ ಪ್ರತ್ಯಯಕ್ಕೆ: ಗುರು + ಇಂದ = ಗುರುವಿಂದ, ಗುರುವಿನಿಂದ; ಗೋ + ಅಲ್ಲಿ = ಗೋವಿನಲ್ಲಿ ಇತ್ಯಾದಿ.

ಸಮಾಸಕ್ಕೆ: ನುಡಿ + ಕಟ್ಟು = ನುಡಿಗಟ್ಟು; ಕಿಸು + ಬಾಯಿ = ಕಿಸುವಾಯಿ ಇತ್ಯಾದಿ.

೨೯. ಸಂಧಿಯ ಮಾಡಲಿಕ್ಕೆ ಲೋಪ, ಆಗಮ, ಆದೇಶವೆಂಬ ಮೂರು ಸಾಧನಗಳು ಉಂಟು.

(ಅ) ಮೊದಲಿದ್ದ ವರ್ಣಗಳಲ್ಲಿ ಒಂದು ಅಥವಾ ಹಲವು ವರ್ಣಗಳು ಹೋಗುವುದೇ 'ಲೋಪ'ವೆಂಬುದು.

ಉದಾ: ಊರು + ಇಲ್ಲ = ಊರಿಲ್ಲ, ಇಲ್ಲಿ ಉಕಾರ ಲೋಪವಾಯಿತು. ಅರಸು + ಮನೆ = ಅರಮನೆ, ಇಲ್ಲಿ ಸಕಾರ ಉಕಾರಗಳೆರಡು ಲೋಪವಾದುವು. ನಾಲ್ಕು + ನೂರು = ನಾನೂರು, ಇಲ್ಲಿ ಲಕಾರ ಕಕಾರ ಉಕಾರಗಳೆಂಬ ಮೂರು ವರ್ಣಗಳ ಲೋಪ.

(ಆ) ಮೊದಲಿದ್ದ ವರ್ಣಗಳಲ್ಲಿ ಒಂದಾಗಲಿ ಹಲವಾಗಲಿ ಹೊಸ ಅಕ್ಷರ ಬರುವುದೇ 'ಆಗಮ'ಎಂಬುದು. ಆಗಮವು ಮೊದಲಿದ್ದುದನ್ನು ಕೆಡಿಸದೆ ಮಿತ್ರನಂತೆ ಬರುತ್ತದೆ.

ಉದಾ: ತಂದೆ+ಎ=ತಂದೆಯೆ, ಇಲ್ಲಿ ಯಕಾರಾಗಮವಾಯಿತು. ಇರುಳ್+ಇಂದ=ಇರುಳಿನಿಂದ, ಇಲ್ಲಿ ಇಕಾರ ನಕಾರಗಳೆರಡು ಆಗಮವಾದವು. ಗುರು+ಅಲ್ಲಿ=ಗುರುವಿನಲ್ಲಿ, ಇಲ್ಲಿ ವಕಾರ ಇಕಾರ ನಕಾರಗಳೆಂಬ ಮೂರಕ್ಷರಗಳ ಆಗಮ.

(ಇ) ಒಂದು ಅಥವಾ ಹಲವು ವರ್ಣಗಳು ಹೋಗಿ ಅವುಗಳ ಸ್ಥಳದಲ್ಲಿ ಬೇರೆ ವರ್ಣವಾಗಲಿ ವರ್ಣಗಳಾಗಲಿ ಬರುವುದೇ 'ಆದೇಶ'ವೆಂಬುದು. ಆದೇಶವು ಮೊದಲಿದ್ದುದನ್ನು ತೆಗೆದುಹಾಕಿ ಶತ್ರುವಿನಂತೆ ಬರುತ್ತದೆ.

ಉದಾ: ಮರ+ಕಾಲು=ಮರಗಾಲು, ಇಲ್ಲಿ ಕಕಾರಕ್ಕೆ ಗಕಾರಾದೇಶವಾಯಿತು. ಬೆಚ್ಚನೆ+ಬೂದಿ=ಬೆಂಬೂದಿ, ಇಲ್ಲಿ 'ಚ್ಚನೆ' ಎಂಬ ವರ್ಣಸಮುದಾಯಕ್ಕೆ ಅನುಸ್ವಾರಾದೇಶವಾಯಿತು.

೩೦. ಸಂಧಿಯು ಎರಡು ಸ್ಥಳಗಳಲ್ಲಿ ಬರುತ್ತದೆ:—ಪದದ ಮಧ್ಯದಲ್ಲಿ ಮತ್ತು ಪದದ ಅಂತ್ಯದಲ್ಲಿ.* ಇವುಗಳ ವಿವರವು ಹೇಗೆಂದರೆ:—

(ಅ) ಶಬ್ದಕ್ಕೆ ಪ್ರತ್ಯಯವನ್ನು ಹಚ್ಚುವಾಗ ಇಲ್ಲವೆ ಸಮಾಸದಲ್ಲಿ ಪದಗಳನ್ನು ಕೂಡಿಸುವಾಗ ಆಗುವ ಸಂಧಿ **ಪದಮಧ್ಯಸಂಧಿಯು.**

ಉದಾ: ಪ್ರತ್ಯಯಕ್ಕೆ—ಮಾತು+ಇಂದ=ಮಾತಿನಿಂದ, ಒಡಕ+ಅನ್ನು=ಒಡಕವನ್ನು, ಮಾಡು+ಅನು=ಮಾಡನು, ಆಡು+ಅ=ಆಟ, ಹುಡುಗ+ಎ=ಹುಡುಗೆ, ಮೇಳಗಾರ+ತಿ=ಮೇಳಗಾರ್ತಿ ಇತ್ಯಾದಿ.

ಸಮಾಸಕ್ಕೆ—ಅರಸು+ಗಿಳಿ=ಅರಗಿಳಿ, ಮರ+ಕಾಲು=ಮರಗಾಲು ಮು.

(ಆ) ವಾಕ್ಯದೊಳಗಿನ ಪದಗಳನ್ನು ಒಂದಕ್ಕೊಂದು ಕೂಡಿಸುವುದು **ಪದಾಂತಸಂಧಿಯು.**

ಉದಾ: ರಾಯರು ಇದ್ದಾರೆ=ರಾಯರಿದ್ದಾರೆ, ಅವನ ಆಟವು ಆಯಿತು=ಅವನಾಟವಾಯಿತು ಮು.

೩೧. ಪದಮಧ್ಯ ಸಂಧಿಯು ನಿತ್ಯವು; ಎಂದರೆ ಅಲ್ಲಿ ಆಗತಕ್ಕ ಲೋಪವಾಗಲಿ ಆಗಮವಾಗಲಿ ಆದೇಶವಾಗಲಿ ಆಗಲೇ ಬೇಕು. (ಉದಾಹರಣಗಳನ್ನು ಮೇಲಿನ ೩೦ (ಅ) ನಿಯಮವನ್ನು ನೋಡಿರಿ. ಪದಾಂತಸಂಧಿಯು ವಿಕಲ್ಪವು;† ಎಂದರೆ ಆಗತಕ್ಕ ಲೋಪಾದಿಗಳನ್ನು ಮಾಡಿದರೂ ಸರಿಯೇ, ಬಿಟ್ಟರೂ ಸರಿಯೆ. ಆದರೆ ಅರ್ಥಕ್ಕೆ ತೊಂದರೆಯುಂಟಾಗುವ ಎಡೆಗಳಲ್ಲಿ ಪದಾಂತಸಂಧಿಯನ್ನು ನಿತ್ಯವಾಗಿ ಮಾಡಬೇಕಾಗುವುದು.

---

* ಶಬ್ದಮಣಿದರ್ಪಣ ಸೂತ್ರ ೫೦.

† ಶಬ್ದಾನುಶಾಸನ ಸೂತ್ರ ೩೪.

ಉದಾ: ವಿಕಲ್ಪಕ್ಕೆ—ರಾಯರು ಇದ್ದಾರೆ ಅಥವಾ ರಾಯರಿದ್ದಾರೆ.

ನಿತ್ಯಕ್ಕೆ—ರಾಮನಿಗೆ+ಓಸ್ಕರ=ರಾಮನಿಗೋಸ್ಕರ, ನಿನಗೆ+ಇಂತ=ನಿನಗಿಂತ, ರಾಮನಿಗೆ+ಊ=ರಾಮನಿಗೂ, ಬಂದೆನು+ಆದೊಡೆ=ಬಂದೆನಾದೊಡೆ ಮು.

೩೨. ಸಂಧಿ ಸಾಮಾನ್ಯವಾಗಿ ಆಗಬೇಕಾದ ಕಡೆಗಳಲ್ಲಿ ಸಂಧಿಮಾಡದೆ ಬಿಟ್ಟರೆ ಅದಕ್ಕೆ 'ಪ್ರಕೃತಿಭಾವ' ಎಂದು ಹೆಸರು. ಕೆಲವೆಡೆಗಳಲ್ಲಿ ವ್ಯಾಕರಣಕಾರರು ಸಂಧಿಮಾಡಬಾರದೆಂದು ಹೇಳಿ ಪ್ರಕೃತಿಭಾವವನ್ನೇ ವಿಧಿಸುತ್ತಾರೆ.

(೪೯ನೆಯ ನಿಯಮವನ್ನು ನೋಡುವುದು.)

೩೩. ವರ್ಣಭೇದದಿಂದ ಸಂಧಿ ಎರಡು ವಿಧವಾಗಿದೆ:—

(ಅ) ಸ್ವರಸಂಧಿ, (ಆ) ವ್ಯಂಜನಸಂಧಿ.

(ಅ) ಸ್ವರಕ್ಕೆ ಸ್ವರವು ಪರವಾದರೆ (ಮುಂದಾದರೆ), ಸ್ವರಸಂಧಿಯಾಗುತ್ತದೆ.

ಉದಾ: ಅವನು+ಇಲ್ಲ=ಅವನಿಲ್ಲ, ಮು.

(ಆ) ವ್ಯಂಜನಕ್ಕೆ ವ್ಯಂಜನವು ಪರವಾದರೆ ಇಲ್ಲವೆ ಸ್ವರವ್ಯಂಜನಗಳು ಒಂದಕ್ಕೊಂದು ಪರವಾದರೆ, ವ್ಯಂಜನಸಂಧಿಯಾಗುತ್ತದೆ.

ಉದಾ: ಎಡುರ್+ಕೊಳ್ಳು=ಎಡುರ್ಗೊಳ್ಳು, ಮುಳ್+ಅನ್ನು=ಮುಳ್ಳನ್ನು, ಮರ+ಕಾಲು=ಮರಗಾಲು ಮು.

ಸೂಚನೆ—ಕನ್ನಡದಲ್ಲಿ ಸಂಸ್ಕೃತ ಶಬ್ದಗಳೂ ಸಮಾಸಗಳೂ ಬರುತ್ತವೆ. ಆದುದರಿಂದ ಈ ಕನ್ನಡ ವ್ಯಾಕರಣದಲ್ಲಿ ಮುಖ್ಯ ಮುಖ್ಯ ಸಂಸ್ಕೃತಸಂಧಿಯ ನಿಯಮಗಳನ್ನು ಹೇಳುವುದು ಆವಶ್ಯವು. ಆದಕಾರಣ ಕನ್ನಡ ಸಂಧಿಗಳನ್ನು ಹೇಳಿದ ಬಳಿಕ ಸಂಸ್ಕೃತಸಂಧಿಗಳನ್ನು ಹೇಳಿದ್ದೇವೆ.

## ಕನ್ನಡ ಸ್ವರಸಂಧಿ

೩೪. ಸ್ವರಕ್ಕೆ ಸ್ವರವು ಪರವಾದರೆ, ಅರ್ಥಕ್ಕೆ ಸಂಶಯಬಾರದ ಪಕ್ಷದಲ್ಲಿ ಮೊದಲಿನ ಸ್ವರಕ್ಕೆ ಲೋಪವಾಗುತ್ತದೆ.

ಉದಾ: ಪ್ರಕೃತಿಸ್ವರಲೋಪಕ್ಕೆ—ತುಡುಗ+ಎ=ತುಡುಗೆ, ಮಾಡು+ಇಕೆ=ಮಾಡಿಕೆ, ನಗು+ಎ=ನಗೆ ಇತ್ಯಾದಿ.

ವಿಭಕ್ತಿಸ್ವರಲೋಪಕ್ಕೆ—ಅವನ+ಊರು=ಅವನೂರು, ಮಾಡಿ+ಇದ್ದಾನೆ=ಮಾಡಿದ್ದಾನೆ, ಮಾತು+ಇಲ್ಲ=ಮಾತಿಲ್ಲ, ಹಾಗೆ+ಆಯಿತು—ಹಾಗಾಯಿತು ಮು.

೩೫. ಅಂಕಿತನಾಮಗಳಿಗೆ 'ಅಪ್ಪ, ಅಣ್ಣ, ಅಕ್ಕ' ಮುಂತಾದ ಬಂಧುವಾಚಕಗಳು ಪರವಾದರೆ, ಪೂರ್ವ ಶಬ್ದದ ಕಡೆಯ ಸ್ವರವು ಲೋಪವಾಗುತ್ತದೆ.

ಉದಾ: ರಾಮ + ಅಪ್ಪ = ರಾಮಪ್ಪ, ನೀಲೆ + ಅಮ್ಮ = ನೀಲಮ್ಮ, ಕಾಸಿ + ಅಕ್ಕ = ಕಾಸಕ್ಕ, ಗಂಗೆ + ಅತ್ತೆ = ಗಂಗತ್ತೆ ಮು.

**ಅಪವಾದ** – 'ಗಿರಿ, ಹರಿ, ಮುದಿ, ಕರಿ' ಮುಂತಾದ ಶಬ್ದಗಳ ಅಂತ್ಯ ಸ್ವರಕ್ಕೆ ಲೋಪ ಬರುವುದಿಲ್ಲ; ಅಲ್ಲಿ ಯಕಾರಾಗಮವಾಗುತ್ತದೆ.

ಉದಾ: ಗಿರಿಯಪ್ಪ, ಮುದಿಯಮ್ಮ, ಕರಿಯಣ್ಣ, ಹರಿಯಪ್ಪ ಮು.

೩೬. ಸ್ವರಲೋಪದಿಂದ ಅರ್ಥಕ್ಕೆ ಸಂಶಯವಾಗುತ್ತಿದ್ದರೆ, ಲೋಪ ಸಂಧಿಯನ್ನು ಮಾಡಬಾರದು.

ಉದಾ: ಅಕ್ಕ + ಇಲ್ಲ = ಅಕ್ಕಿಲ್ಲ; ಕುಡಿ + ಅನ್ನು = ಕುಡನ್ನು; ಹರಿ + ಅಪ್ಪ = ಹರಪ್ಪ ಇತ್ಯಾದಿ.

ಅಂತಹ ಕಡೆಗಳಲ್ಲಿ ಆ ಸ್ವರಗಳ ನಡುವೆ ಉಚ್ಚಾರಕ್ಕೆ ಅನುಕೂಲವಾಗುವಂತೆ ಯಕಾರವಾಗಲಿ ವಕಾರವಾಗಲಿ ಆಗಮವಾಗುತ್ತದೆ. ಹೇಗೆಂದರೆ, 'ಅ ಇ ಈ ಎ ಏ ಐ'ಗಳ ಮುಂದೆ ಯಕಾರಾಗಮವಾಗುತ್ತದೆ.

ಉದಾ: ಕಾ+ಅದ = ಕಾಯದ, ಕಾ+ಉತ್ತ = ಕಾಯುತ್ತ, ಕಾ+ಇತು = ಕಾಯಿತು, ಹುಲಿ + ಅನ್ನು = ಹುಲಿಯನ್ನು, ಈ + ಆನೆ = ಈಯಾನೆ, ಮಾಡುತ್ತೀ + ಎಂದು = ಮಾಡುತ್ತೀಯೆಂದು, ಸ್ತ್ರೀ + ಅಲ್ಲಿ = ಸ್ತ್ರೀಯಲ್ಲಿ, ತಂದೆ + ಇಂದ = ತಂದೆಯಿಂದ, ಬೇ + ಉತ್ತ = ಬೇಯುತ್ತ, ಐ + ಅನ್ನು = ಐಯನ್ನು.

ಅಪವಾದ—(೧) ದರ್ಶಕ–ಆಕಾರಕ್ಕೆ 'ಇ ಈ ಎ ಏ' ಗಳು ಪರವಾದರೆ ಯಕಾರಾಗಮವೂ, 'ಉ ಊ ಒ ಓ' ಗಳು ಪರವಾದರೆ ವಕಾರಾಗಮವೂ ಆಗುತ್ತದೆ.*

ಉದಾ: ಆ+ಇಲಿ=ಆಯಿಲಿ, ಆ + ಈಸು = ಆಯೀಸು, ಆ + ಎತ್ತು = ಆಯೆತ್ತು, ಆ + ಏಣಿ = ಆಯೇಣಿ, ಆ + ಉಡಿಗೆ = ಆವುಡಿಗೆ, ಆ + ಊಟ = ಆವೂಟ, ಆ + ಒಸಗೆ = ಆವೊಸಗೆ, ಆ+ಓದು=ಆವೋದು.

(೨) ದರ್ಶಕ ಈಕಾರಕ್ಕೆ 'ಉ ಊ ಒ ಓ'ಕಾರಗಳು ಪರವಾದರೆ, ಯಕಾರಾಗಮವು ಅಥವಾ ವಕಾರಾಗಮವು ಬರುತ್ತದೆ.†

ಉದಾ: ಈ+ಉದಕ=ಈಯುದಕ, ಈವುದಕ; ಈ+ಊರು=ಈಯೂರು, ಈವೂರು ಈ+ಒತ್ತು=ಈಯೊತ್ತು, ಈವೊತ್ತು; ಈ+ಓಟ=ಈಯೋಟ, ಈವೋಟ ಮು.

* ಶಬ್ದಾನುಶಾಸನಸೂತ್ರ ೩೮ನೆಯದರ ವ್ಯಾಖ್ಯಾನಾಂತದಲ್ಲಿ.

† ಶಬ್ದಮಣಿದರ್ಪಣ ಸೂತ್ರ ೫೩, ೫೪.

೩೭. 'ಉ ಊ ಋ ೠ ಒ ಓ ಔ'ಗಳಿಗೆ ಸ್ವರವು ಪರವಾದರೆ, ವಕಾರಾಗಮವಾಗುತ್ತದೆ.

ಉದಾ: ಮಗು+ಅನ್ನು=ಮಗುವನ್ನು, ಗುರು+ಇಗೆ=ಗುರುವಿಗೆ, ಹೂ+ಅನ್ನು=ಹೂವನ್ನು, ಭೂ+ಇಂದ=ಭೂವಿಂದ, ಕರ್ತೃ+ಇಗೆ=ಕರ್ತೃವಿಗೆ, ೠ+ಅನ್ನು=ೠವನ್ನು, ಒ+ಅನ್ನು=ಒವನ್ನು, ಓ+ಅನ್ನು=ಓವನ್ನು, ಗೋ+ಇಗೆ=ಗೋವಿಗೆ, ಗ್ಲೌ+ಇಂದ=ಗ್ಲೌವಿಂದ, ನೋಡೌ+ಅಕ್ಕ=ನೋಡೌವಕ್ಕ ಮು.

ಅಪವಾದಗಳು--(೧) ಅನಿತ್ಯ ಉಕಾರಕ್ಕೆ * ಲೋಪವಾಗುತ್ತದೆ. ಆದರೆ ಕೆಲವು ಉಕಾರಾಂತ ಧಾತುಗಳಿಗೆ 'ಇಕೆ' ಪರವಾದರೆ, ಲೋಪವೂ ವಕಾರಾಗಮವೂ ಆಗುವುದು.

ಉದಾ: ಲೋಪಕ್ಕೆ—ಮಾತು+ಇಲ್ಲ=ಮಾತಿಲ್ಲ.

ಲೋಪ—ವಕಾರಾಗಮಗಳಿಗೆ—ಹೇಳು+ಇಕೆ=ಹೇಳುವಿಕೆ, ಹೇಳಿಕೆ; ಆದರೆ ಆಗು+ಇಕೆ=ಆಗುವಿಕೆ (ಆಗಿಕೆ ಎಂದು ಲೋಪವಾಗುವುದಿಲ್ಲ).

(೨) ಕೆಲವೆಡೆಗಳಲ್ಲಿ ಓಕಾರಕ್ಕೂ 'ಜೋ' ಶಬ್ದಕ್ಕೂ ಸ್ವರ ಪರವಾದರೆ, ಯಕಾರಾಗಮವಾಗುತ್ತದೆ; ಆದರೆ 'ಓ' ಧಾತುವಿಗೆ ಸ್ವರ ಪರವಾದರೆ, ವಕಾರಾಗಮವಾಗುತ್ತದೆ.

ಉದಾ: ಧಾತುವಿಗೆ—ನೋ+ಉತ್ತ=ನೋಯುತ್ತ, ತೋ+ಉವ=ತೋಯುವ, ಓ+ಎನ್ನು=ಓಯೆನ್ನು ಇತ್ಯಾದಿ.

'ಜೋ' ಶಬ್ದಕ್ಕೆ—ಜೋ+ಎಂದು=ಜೋಯೆಂದು.

'ಓ' ಧಾತುವಿಗೆ—ಓ+ಇಂದ=ಓವಿಂದ, ಓ+ಉ=ಓವು.

೩೮. (ಅ) ಪದಾಂತ-ಅಕಾರಕ್ಕೆ ನಿಪಾತಗಳಾಗಲಿ ಸ್ವರಾದಿಶಬ್ದಗಳಾಗಲಿ ಪರವಾದರೆ, ಕೆಲವೆಡೆಯಲ್ಲಿ ಲೋಪವು ಅಥವಾ ಲಕಾರಾಗಮವು† ಆಗುತ್ತದೆ.

---

* ಎರಡು ಮಾತ್ರೆಗಳುಳ್ಳ ಉಕಾರಾಂತನಾಮಗಳೂ ಸಂಸ್ಕೃತ ಉಕಾರಾಂತ ಶಬ್ದಗಳೂ ನಿತ್ಯ-ಉಕಾರಾಂತಗಳು. ಉದಾ: ಮಗು, ನಡು, ಮಡು, ಹುಳು, ಹಸು, ಮುಸು, ಕರು, ಗುರು, ಕಟು ಮು.

ಉಳಿದ ಉಕಾರಾಂತಗಳು ಅನಿತ್ಯ-ಉಕಾರಾಂತಗಳು. ಉದಾ: ಮಾಡು, ಮಾತು, ಕವಡು, ಅದು, ಇದು ಮು.

† ಈ ಲಕಾರವು ನಡುಗನ್ನಡ ಹೊಸಗನ್ನಡಗಳಲ್ಲಿ ಮಾತ್ರ ಕಾಣುತ್ತದೆ. ಇದು ನಿಜವಾಗಿಯೂ ಸಂಧಿಯಲ್ಲಿ ಬರುವ ಆಗಮವಲ್ಲ. ಕೆಲವೆಡೆ ಇದು 'ಅಲ್' ಎಂಬ ಪ್ರತ್ಯಯದ ಅವಶೇಷವೆಂದು ಹೇಳಬಹುದು. ಉದಾ: ಅತ್ತಲ್+ಏ=ಅತ್ತಲೇ, ನೋಡಲ್+ಏ=ನೋಡಲೇ ಇತ್ಯಾದಿ. ಇಂತಹ ಪ್ರಯೋಗಗಳು ಹೆಚ್ಚಾದ ಹಾಗೆ 'ಲ್' ಎಂಬುದು ಒಂದು ಬಗೆಯ ಆಗಮವೆಂಬ ಭ್ರಾಂತಿಯುಂಟಾಗಿರಬಹುದು.

ಉದಾ: ಅದರಿಂದ+ಏ= ಅದರಿಂದಲೇ, ಅದರಿಂದೇ; ಅತ್ತ+ಏ= ಅತ್ತಲೇ, ಅತ್ತೇ; ನೋಡುತ್ತ+ಇದ್ದಳು=ನೋಡುತ್ತಲಿದ್ದಳು, ನೋಡುತ್ತಿದ್ದಳು; ಆದರೆ ನೋಡುತ್ತ+ಊ= ನೋಡುತ್ತಲೂ ಎಂಬ ಒಂದೇ ರೂಪವಾಗುತ್ತದೆ.

(ಆ) ಷಷ್ಠಿಯ ಅಕಾರಕ್ಕೆ ನಿಪಾತವು ಪರವಾದರೆ, ಯಕಾರಾಗಮವಾಗಲಿ ಪ್ರಕೃತಿಭಾವವಾಗಲಿ ಆಗುವುದು. *

ಉದಾ: ಆತನ+ಏ=ಆತನಯೇ, ಆತನಏ; ನಿನ್ನ+ಎ=ನಿನ್ನಯೆ ಅಥವಾ ನಿನ್ನ ಎ.

೩೯. ಕೆಳಗೆ ಹೇಳಿದ ಸ್ಥಳಗಳಲ್ಲಿ ಪ್ರಕೃತಿಭಾವವಾಗುತ್ತದೆ:

(ಅ) ದರ್ಶಕ ಆಕಾರಕ್ಕೆ ಅ ಆ ಐ ಔಗಳು ಪರವಾದಲ್ಲಿ; †

ಉದಾ: ಆ ಅರಸು, ಆ ಆಟ, ಆ ಐಶ್ವರ್ಯ, ಆ ಔದಾರ್ಯ, ಮು.

(ಆ) ಸಂಭೋಧನೆಗೆ ಸ್ವರ ಪರವಾದಲ್ಲಿ;

ಉದಾ: ರಾಮಾ ಓದು, ಅಣ್ಣಗಳಿರಾ ಇದೇನು, ನೃಪಾಲ ಇವನು ಮು.

(ಇ) ಕೆಲವು ನಿಪಾತಗಳಿಗೆ ಸ್ವರ ಪರವಾದಲ್ಲಿ;

ಉದಾ: ಹಾ ಇರಲಿ, ಹೂ ಅನ್ನು, ಹೇಗೋ ಎದ್ದು, ಏ ಅಪ್ಪಾ ಮು.

(ಈ) ಕನ್ನಡ ಸ್ವರಗಳಿಗೆ ಋ ವರ್ಣ ಪರವಾದಲ್ಲಿ;

ಉದಾ: ಇವರು ಋಷಿಗಳು, ಅವನ ಋಣಾನುಬಂಧ ಮು.

(ಉ) ಹೊಸ, ಹೊರ, ಒಳ, ಎಳ, ಹಳ ಶಬ್ದಗಳಿಗೆ ಸ್ವರ ಪರವಾದಲ್ಲಿ;

ಉದಾ: ಹೊಸ ಅಡಿಕೆ, ಹೊರ ಆಟ್ಟ, ಒಳ ಒಕ್ಕಲು, ಎಳ ಅಂಚೆ, ಹಳ ಅಲಗು ಮು.

## ವ್ಯಂಜನ ಸಂಧಿ

೪೦. (ಅ) ಸಮಾಸದ ಪರಪದದ ಆದಿಯಲ್ಲಿ ಇರುವ ಕ ತ ಪಕಾರಗಳಿಗೆ ಕ್ರಮದಿಂದ ಗ ದ ಬಕಾರಗಳ ಆದೇಶವಾಗುತ್ತದೆ.

ಈ ನಿಯಮವು * ಸಮಾಸವಲ್ಲದ ಕೆಲವೆಡೆಯಲ್ಲಿಯೂ ತೋರುತ್ತದೆ.

ಉದಾ: ಸಮಾಸಕ್ಕೆ—ಮರ+ಕಾಲು=ಮರಗಾಲು, ಹುಲಿ+ತೊಗಲು=ಹುಲಿದೊಗಲು, ಸುಖ+ಪಡು=ಸುಖಬಡು, ಬಾನ್+ಪೊಳೆ=ಬಾಂಬೊಳೆ.

ಸಮಾಸವಲ್ಲದಲ್ಲಿ—ಮಾಡ+ಕೊಡು=ಮಾಡಗೊಡು.

(ಆ) ಪ, ಬ, ಮಕಾರಗಳಿಗೆ ವಕಾರಾದೇಶವಾಗುತ್ತದೆ. §

---

* ಶಬ್ದಾನುಶಾಸನ ಸೂತ್ರ ೪೫. † ಶಬ್ದಾನುಶಾಸನ ಸೂತ್ರ ೪೩, ೪೬.

§ ಈ ನಿಯಮಗಳಿಗೆ ಅಪವಾದಗಳಿವೆ. ಅವನ್ನೆಲ್ಲ ಈ ಸಣ್ಣ ಪುಸ್ತಕದಲ್ಲಿ ಹೇಳುವುದು ಅಸಾಧ್ಯವೂ ಚಿಕ್ಕ ವಿದ್ಯಾರ್ಥಿಗಳಿಗೆ ದುರ್ಬೋಧವೂ ಆಗುವುದು.

ಉದಾ: ಕೆನೆ+ ಪಾಲು+ಕೆನೆವಾಲು, ತಲೆ+ ಬಾಗು = ತಲೆವಾಗು. ನೆಲೆ+ ಮನೆ= ನೆಲೆವನೆ ಮು.

೪೧. ಣ, ನ, ಮ, ಯ, ಲ, ಳಕಾರಾಂತಗಳಾದ ಒಂದೇ ಹ್ರಸ್ವಸ್ವರವುಳ್ಳ ಶಬ್ದಗಳ ಕಡೆಯ ವ್ಯಂಜನಕ್ಕೆ ಸ್ವರಪರವಾದರೆ, ಆ ವ್ಯಂಜನವು ದ್ವಿತ್ವವಾಗುತ್ತದೆ. ಉದಾ: ಕಣ್ + ಉ = ಕಣ್ಣು, ಹೊನ್+ ಉ=ಹೊನ್ನು, ಕಯ್ + ಉ= ಕಯ್ಯು, ಮೆಯ್+ಉ—ಮೆಯ್ಯು, ಕಲ್+ಉ=ಕಲ್ಲು, ಮುಳ್+ಉ=ಮುಳ್ಳು, ತಮ್ ಇಂದ=ತಮ್ಮಿಂದ ಮು.

ಅಪವಾದಗಳು: (೧) ಅನೇಕ ಸ್ವರಗಳುಳ್ಳ ಶಬ್ದಗಳ ಕೊನೆಗೆ ಆಗದೆ ಇರುವುದಕ್ಕೆ—ಬೆರಳ್+ಉ=ಬೆರಳು, ಪಗಲ್+ಉ=ಪಗಲು, ಪವಣ್+ಉ=ಪವಣು.

(೨) ದೀರ್ಘಸ್ವರವುಳ್ಳ ಶಬ್ದಗಳ ಕೊನೆಗೆ ಆಗದೆ ಇರುವುದಕ್ಕೆ— ಕಾಲ್+ಉ=ಕಾಲು, ಪಾಲ್+ಉ=ಪಾಲು ಮು.

(೩) ಅವ್ಯಯದ ಕೊನೆಗೆ ಆಗದೆ ಇರುವುದಕ್ಕೆ—ದಲ್+ಎಂದು=ದಲೆಂದು.

೪೨. ಮ, ನ, ಣಕಾರಗಳಿಗೆ ವ್ಯಂಜನ ಪರವಾದರೆ ಅನುಸ್ವಾರಾದೇಶವಾಗುತ್ತದೆ. ಆದರೆ ಣಕಾರಕ್ಕೆ ಮಾತ್ರ ಕೆಲವೆಡೆಯಲ್ಲಿ ವಿಕಲ್ಪವಾಗಿ ಪ್ರಕೃತಿಭಾವವೂ ಕೆಲವೆಡೆಯಲ್ಲಿ ನಿತ್ಯವಾಗಿ ಪ್ರಕೃತಿಭಾವವೂ ಕೆಲವೆಡೆಯಲ್ಲಿ ನಿತ್ಯವಾಗಿ ಅನುಸ್ವಾರಾದೇಶವೂ ತೋರುತ್ತದೆ.

ಉದಾ: ತಾಮ್+ಬಂದರು=ತಾಂಬಂದರು, ಹೊನ್+ಬಳೆ=ಹೊಂಬಳೆ, ಕೆನ್+ ಜೋಳ+ಕೆಂಜೋಳ.

ಣಕಾರವು ನಿತ್ಯ ಅನುಸ್ವಾರವಾಗುವುದಕ್ಕೆ—ತಣ್+ಪಿಟ್ಟು=ತಂಬಿಟ್ಟು, ಎಣ್+ಪತ್ತು=ಎಂಬತ್ತು.

ಣಕಾರದ ನಿತ್ಯ ಪ್ರಕೃತಿಭಾವಕ್ಕೆ—ಬಿಣ್+ಕೆಚ್ಚಲು=ಬಿಣ್ಗೆಚ್ಚಲು, ಮಣ್+ ಕೂಡಿ=ಮಣ್ಗೂಡಿ, ಸಾಣ್+ಕೆಡಿಸು=ಸಾಣ್ಗೆಡಿಸು ಮು.

ಣಕಾರದ ವಿಕಲ್ಪ ಪ್ರಕೃತಿಭಾವಕ್ಕೆ—ಕಣ್ಗೊಳಿಸು=ಕಂಗೊಳಿಸು, ತಣ್ಪು= ತಂಪು, ಕಣ್ದೆರೆ=ಕಂದೆರೆ ಮು.

೪೩. ಪದಗಳ ದ್ವಿರುಕ್ತಿಯೊಳಗಿನ ಪೂರ್ವಾಂಗದ ಪ್ರತ್ಯಯಕ್ಕೆ ಲೋಪವಾಗುವುದುಂಟು.

ಉದಾ: ಮನೆಗೆ ಮನೆಗೆ=ಮನೆಮನೆಗೆ, ನಡೆಯುತ್ತ ನಡೆಯುತ್ತ=ನಡೆ ನಡೆಯುತ್ತ, ಬರೆದು ಬರೆದು=ಬರೆಬರೆದು.

೪೪. ಸ್ವರಾದಿಸ್ವರಾಂತ ಶಬ್ದಗಳ ದ್ವಿರುಕ್ತಿಯಾದರೆ, ಪೂರ್ವಾಂಗದ ಅಂತ್ಯಸ್ವರಕ್ಕೆ ಕೆಲವು ಕಡೆಯಲ್ಲಿ ಲೋಪವಾಗುವುದು.

ಉದಾ: ಎಲೆ+ಎಲೆ=ಎಲೆಲೆ, ಅಯ್ಯೋ+ಅಯ್ಯೋ=ಅಯ್ಯಯ್ಯೋ, ಅಡವಿ+ಅಡವಿ=ಅಡವಡವಿ ಮು,

ಕೆಲವೆಡೆಯಲ್ಲಿ (ದ್ವಿಮಾತ್ರಕಗಳಾದ ಸ್ವರಾಂತ ಶಬ್ದಗಳಲ್ಲಿ) ಆಗಮ ಇರುವುದಕ್ಕೆ.

ಉದಾ: ಅರಿ+ಅರಿ=ಅರಿಯರಿ, ಇಡಿ+ಇಡಿ+ಇಡಿಯಿಡಿ, ಒರೆ+ಒರೆ+ಒರೆಯೊರೆ ಮು,

೪೫. (ಅ) ದುವರ್ಣಾಂತ ಭೂತನ್ಯೂನಕ್ಕೆ 'ಕೊಳ್ಳು, ಕೊಡು' ಧಾತುಗಳು ಪರವಾದರೆ, ವಿಕಲ್ಪವಾಗಿ ದುವರ್ಣಕ್ಕೆ ಲೋಪವಾಗುವುದಲ್ಲದೆ ಅದರ ಹಿಂದಿನ ಸ್ವರಕ್ಕೆ ಅಕಾರಾದೇಶವಾಗುವದು.

ಉದಾ: ಸುಲಿದುಕೊಳ್ಳು, ಸುಲಕೊಳ್ಳು; ಸುಲಿದುಕೊಡು, ಸುಲಕೊಡು; ಸೆಳೆದುಕೊಳ್ಳು, ಸೆಳಕೊಳ್ಳು; ಸೆಳೆದುಕೊಡು, ಸೆಳಕೊಡು ಮು,

(ಆ) 'ತರು' ಧಾತು ಪರವಾದರೆ, ಕೆಲವೆಡೆಯಲ್ಲಿ ದುವರ್ಣಕ್ಕೆ ಲೋಪವಾಗುತ್ತದೆ.

ಉದಾ: ನಡೆದು+ತರು=ನಡೆತರು, ಕವಿದು+ತರು=ಕವಿತರು, ಹಿಡಿದು+ತರು=ಹಿಡಿತರು ಮು.

## ಸಂಸ್ಕೃತ ಸ್ವರಸಂಧಿ

೪೬. ಸಂಸ್ಕೃತ ಶಬ್ದಗಳನ್ನು ಕೂಡಿಸುವುದಿದ್ದರೆ ಮಾತ್ರ ಸಂಸ್ಕೃತ ಸಂಧಿನಿಯಮಗಳನ್ನು ಉಪಯೋಗಿಸಬೇಕು. ಸಂಸ್ಕೃತ ಶಬ್ದಗಳಿಗೆ ಕನ್ನಡ ಪ್ರತ್ಯಯಗಳು ಹತ್ತಿದರೆ, ಅವು ಕನ್ನಡ ಶಬ್ದಗಳಾದುವೆಂದು ತಿಳಿಯಬೇಕು. ಕನ್ನಡದಲ್ಲಿ ರೂಢವಾಗಿರುವ ಸಂಸ್ಕೃತ ಸಮಾಸಗಳಲ್ಲಿ (೧) ಸವರ್ಣದೀರ್ಘ, (೨) ಯಣ್, (೩) ಗುಣ, (೪) ವೃದ್ಧಿ ಮುಂತಾದ ಸ್ವರಸಂಧಿಗಳು ಮುಖ್ಯವಾಗಿ ತೋರುತ್ತವೆ.

೪೭. ಸವರ್ಣ— ಒಂದೇ ಸ್ಥಾನದಲ್ಲಿ ಹುಟ್ಟುವ ಸ್ವರಗಳಿಗೆ ಸವರ್ಣಗಳೆನ್ನುವರು, ಅವು ಯಾವುವೆಂದರೆ:—

ಅ, ಆ, ಇವೆರಡೂ ಸವರ್ಣಗಳು. ಇ, ಈ ಇವೆರಡೂ ಸವರ್ಣಗಳು, ಉ, ಊ ಇವೆರಡೂ ಸವರ್ಣಗಳು, ಋ, ೠ ಇವೆರಡೂ ಸವರ್ಣಗಳು.

ಸವರ್ಣಸ್ವರಗಳು ಒಂದರ ಮುಂದೆ ಒಂದು ಬಂದರೆ, ಎರಡೂ ಕೂಡಿ ಅದೇ ಜಾತಿಯ ದೀರ್ಘಸ್ವರವಾಗುತ್ತದೆ. ಅದಕ್ಕೆ 'ಸವರ್ಣದೀರ್ಘಸಂಧಿ' ಎನ್ನುವರು.

ಉದಾ: ಗಂಧ+ಅಕ್ಷತೆ=ಗಂಧಾಕ್ಷತೆ, ವಿದ್ಯಾ+ಅಭ್ಯಾಸ=ವಿದ್ಯಾಭ್ಯಾಸ, ಸುಂದರ+ಆಕಾರ=ಸುಂದರಾಕಾರ, ಮಹಾ+ಆತ್ಮ=ಮಹಾತ್ಮ, ಕವಿ+ಇಂದ್ರ=ಕವೀಂದ್ರ, ಮುನಿ+ಈಶ್ವರ=ಮುನೀಶ್ವರ, ಗೌರೀ+ಈಶ=ಗೌರೀಶ, ಲಕ್ಷ್ಮೀ+ಇಂದ್ರ=ಲಕ್ಷ್ಮೀಂದ್ರ, ಮೃದು+ಉಕ್ತಿ=ಮೃದೂಕ್ತಿ, ವಧೂ+ಉಪಚಾರ=ವಧೂಪಚಾರ, ಬಹು+ಊರ್ಜಿತ=ಬಹೂರ್ಜಿತ, ಮಾತೃ+ಋಣ=ಮಾತೄಣವು.

೪೮. ಯಣ್‌ಸಂಧಿ—ಇ ಉ ಋ ಕಾರಗಳಿಗೆ ಅಸವರ್ಣ ಸ್ವರಗಳು ಮುಂದಾದರೆ, ಇಕಾರಕ್ಕೆ ಯಕಾರಾದೇಶವಾಗುತ್ತದೆ, ಉಕಾರಕ್ಕೆ ವಕಾರಾದೇಶವಾಗುತ್ತದೆ, ಋಕಾರಕ್ಕೆ ರೇಫಾದೇಶವಾಗುತ್ತದೆ.

ಉದಾ: ಇತಿ+ಆದಿ=ಇತ್ಯಾದಿ, ಅತಿ+ಉತ್ತಮ=ಅತ್ಯುತ್ತಮ, ಪ್ರತಿ+ಏಕ=ಪ್ರತ್ಯೇಕ, ದಧಿ+ಓದನ=ದಧ್ಯೋದನ, ಹರಿ+ಔದಾರ್ಯ=ಹರ್ಯೌದಾರ್ಯ, ಗುರು+ಅನುಗ್ರಹ=ಗುರ್ವನುಗ್ರಹ, ವಿಧು+ಇನಂ=ವಿಧ್ವಿನಂ, ಗುರು+ಐಶ್ವರ್ಯ=ಗುರ್ವೈಶ್ವರ್ಯ, ಮಾತೃ+ಆಜ್ಞೆ=ಮಾತ್ರಾಜ್ಞೆ, ಜಾಮಾತೃ+ಆಗಮನ=ಜಾಮಾತ್ರಾಗಮನ.

೪೯. ಗುಣಸಂಧಿ—ಅ ಆಕಾರಗಳಿಗೆ ಇ ಈಕಾರಗಳು ಪರವಾದರೆ, ಎರಡಕ್ಕೂ ಕೂಡಿ ಏಕಾರಾದೇಶವಾಗುವುದು; ಉ ಊಕಾರಗಳು ಪರವಾದರೆ, ಎರಡಕ್ಕೂ ಕೂಡಿ ಓಕಾರಾದೇಶವಾಗುವುದು; ಋ ೠಕಾರಗಳು ಪರವಾದರೆ, ಎರಡಕ್ಕೂ ಕೂಡಿ ಅರ್ ಆದೇಶವಾಗುವುದು.

ಉದಾ: ಮನುಷ್ಯ+ಇತರ=ಮನುಷ್ಯೇತರ, ಗಣ+ಈಶ=ಗಣೇಶ, ಮಹಾ+ಇಂದ್ರ=ಮಹೇಂದ್ರ, ಲಂಕಾ+ಈಶ್ವರ=ಲಂಕೇಶ್ವರ, ಸಮುದ್ರ+ಉದಕ=ಸಮುದ್ರೋದಕ, ಮಹಾ+ಉದಯ=ಮಹೋದಯ, ಗುಣ+ಊರ್ಜಿತ=ಗುಣೋರ್ಜಿತ, ದೇವ+ಋಷಿ=ದೇವರ್ಷಿ, ಮಹಾ+ಋಷಿ=ಮಹರ್ಷಿ.

ಅಪವಾದ—ಅಕಾರಕ್ಕೆ ಋಕಾರ ಪರವಾದರೆ, ವಿಕಲ್ಪದಿಂದ ಪ್ರಕೃತಿಭಾವವಾಗುವುದು.

ಉದಾ: ದೇವಋಷಿ ಅಥವಾ ದೇವರ್ಷಿ ಮು.

೫೦. ವೃದ್ಧಿಸಂಧಿ— ಅ ಆಕಾರಗಳಿಗೆ ಏ ಐಕಾರಗಳು ಪರವಾದರೆ, ಎರಡಕ್ಕೂ ಕೂಡಿ ಐಕಾರಾದೇಶವಾಗುತ್ತದೆ; ಓ ಔಕಾರಗಳು ಪರವಾದರೆ, ಎರಡಕ್ಕೂ ಕೂಡಿ ಔಕಾರಾದೇಶವಾಗುತ್ತದೆ.

ಉದಾ: ಲೋಕ + ಏಕವೀರ= ಲೋಕೈಕವೀರ, ರಾಜ + ಐಶ್ವರ್ಯ= ರಾಜೈಶ್ವರ್ಯ, ಜಲ + ಓಘ =ಜಲೌಘ, ದಿವ್ಯ+ ಔಷಧ =ದಿವ್ಯೌಷಧ.

ಅಪವಾದ—ಅಕಾರಕ್ಕೆ 'ಓಷ್ಠ, ಓತು' ಶಬ್ದಗಳು ಪರವಾದರೆ ವಿಕಲ್ಪದಿಂದ ಪೂರ್ವಪದಾಂತ ಸ್ವರಕ್ಕೆ ಲೋಪವಾಗುತ್ತದೆ.

ಉದಾ: ಬಿಂಬ + ಓಷ್ಠ = ಬಿಂಬೌಷ್ಠ, ಬಿಂಬೋಷ್ಠ; ಅಧರ + ಓಷ್ಠ =ಅಧರೋಷ್ಠ, ಅಧರೌಷ್ಠ; ಸ್ಥೂಲ + ಓತು =ಸ್ಥೂಲೋತು, ಸ್ಥೂಲೌತು ಮು.

೫೧. ಏ, ಓ, ಐ, ಔಕಾರಗಳ ಮುಂದೆ ಸ್ವರ ಬಂದರೆ ಅನುಕ್ರಮವಾಗಿ ಅಯ್, ಅವ್, ಆಯ್' ಆವ್ ಎಂಬಾದೇಶಗಳು ಬರುವುವು.

ಉದಾ: ದ್ಯೋ + ಇಂದ್ರ =ದ್ಯವಿಂದ್ರ, ರೈ + ಆನಂದ =ರಾಯಾನಂದ; ನೌ + ಆರೋಹಣ= ನಾವಾರೋಹಣ.

ಅಪವಾದ—'ಗೋ' ಶಬ್ದಕ್ಕೆ ಸ್ವರ ಪರವಾದರೆ ಆ ಶಬ್ದದ ಓಕಾರಕ್ಕೆ 'ಅವ' ಎಂಬಾದೇಶವಾಗುತ್ತದೆ.

ಉದಾ: ಗೋ + ಅಕ್ಷ =ಗವಾಕ್ಷ; ಗೋ + ಇಂದ್ರ =ಗವೇಂದ್ರ.

## ಸಂಸ್ಕೃತ ವ್ಯಂಜನಸಂಧಿ.

೫೨. ಕ ಚ ಟ ತ ಪಕಾರಗಳಿಗೆ ಸ್ವರವು ಅಥವಾ ಮೃದುವರ್ಣವು ಪರವಾದರೆ, ಅವುಗಳಿಗೆ ಕ್ರಮದಿಂದ ಗ ಜ ಡ ದ ಬಕಾರಗಳ ಆದೇಶವು ಆಗುತ್ತದೆ.

ಉದಾ: ದಿಕ್ + ಅದ್ರಿ =ದಿಗದ್ರಿ, ವಾಕ್ + ವರ =ವಾಗ್ವರ, ಅಚ್ + ಅಂತ= ಅಜಂತ, ಅಚ್ + ವರ್ಣ =ಅಜ್ವರ್ಣ, ಷಟ್ + ಅಂಗ =ಷಡಂಗ, ಷಟ್ + ಗಣ= ಷಡ್ಗಣ, ಜಗತ್ + ಈಶ =ಜಗದೀಶ, ಲಸತ್ + ಗೀತ =ಲಸದ್ಗೀತ, ಅಪ್ + ಜಾತ= ಅಬ್ಜಾತ; ಅಪ್ + ಬಿಂದು =ಅಬ್ಬಿಂದು ಮು.

ಅಪವಾದ—(ಅ) ಕ ಚ ಟ ತ ಪಕಾರಗಳಿಗೆ ಅನುನಾಸಿಕಾಕ್ಷರವು ಪರವಾದರೆ ಪೂರ್ವಶಬ್ದದ ಅಂತ್ಯವ್ಯಂಜನದ ವರ್ಗದ ಅನುನಾಸಿಕಾಕ್ಷರದ ಆದೇಶವು ವಿಕಲ್ಪದಿಂದಾಗುತ್ತದೆ.

ಉದಾ: ವಾಕ್ + ಮನ =ವಾಙ್ಮನ, ವಾಗ್ಮನ; ಷಟ್ + ಮತ =ಷಣ್ಮತ, ಷಡ್ಮತ, ಶತ್ + ನಿಮಾ =ಶನ್ನಿಮಾ, ಶದ್ನಿಮಾ; ಅಪ್ + ಮಿತ್ರ =ಅಮ್ಮಿತ್ರ, ಅಬ್ಮಿತ್ರ ಮು.

(ಆ) ತಕಾರಕ್ಕೆ ಜ ಝಕಾರಗಳು ಪರವಾದರೆ ಜಕಾರಾದೇಶವೂ, ಡ ಲಕಾರಗಳು ಪರವಾದರೆ ಕ್ರಮದಿಂದ ಡ ಲಕಾರಗಳ ಆದೇಶವೂ ಆಗುವುದು.

ಉದಾ: ತತ್ + ಜಾತ = ತಜ್ಜಾತ, ಸರಿತ್ + ಝರಿ = ಸರಿಜ್ಝರಿ, ಉತ್ + ಡೀನ = ಉಡ್ಡೀನ, ರಟತ್ + ಡಮರು = ರಟಡ್ಡಮರು, ಸತ್ + ಲಕ್ಷಣ = ಸಲ್ಲಕ್ಷಣ ಮು.

೫೩. ಕ ಚ ಟ ತ ಪಕಾರಗಳಿಗೆ ಕರ್ಕಶವ್ಯಂಜನವು ಪರವಾದರೆ ಏನೂ ವಿಕಾರವಾಗುವುದಿಲ್ಲ.

ಉದಾ: ವಾಕ್ + ಪತಿ = ವಾಕ್ಪತಿ, ಅಚ್ + ಪೂರ್ವ = ಅಚ್ಪೂರ್ವ, ಷಟ್ + ಪಾದ = ಷಟ್ಪಾದ, ತತ್ + ಸಮ = ತತ್ಸಮ, ಅಪ್ + ತೀರ = ಅಪ್ತೀರ ಮು.

ಅಪವಾದ—ತಕಾರಕ್ಕೆ ಚ ಛಕಾರಗಳು ಪರವಾದರೆ ಚಕಾರಾದೇಶವೂ, ಟ ಠಕಾರಗಳು ಪರವಾದರೆ ಟಕಾರಾದೇಶವೂ ಆಗುತ್ತದೆ.

ಉದಾ: ಸತ್ + ಚರಿತ್ರ = ಸಚ್ಚರಿತ್ರ, ವಿದ್ಯುತ್ + ಛಿನ್ನ = ವಿದ್ಯುಚ್ಛಿನ್ನ, ಲಸತ್ + ಟೀಕಾ = ಲಸಟ್ಟೀಕಾ, ತತ್ + ಠಂಕಾರ = ತಟ್ಠಂಕಾರ ಮು.

೫೪. ಅನುನಾಸಿಕವಲ್ಲದ ವರ್ಗೀಯವ್ಯಂಜನಕ್ಕೆ ಪರವಾದ ಶಕಾರಕ್ಕೆ ಛಕಾರಾದೇಶವಾಗುತ್ತದೆ; ಆದರೆ ಶಕಾರದ ಮುಂದೆ ಸ್ವರ, ಅಂತಸ್ಥ, ಅನುನಾಸಿಕ, ಹಕಾರ ಇವುಗಳಲ್ಲಿ ಯಾವುದಾದರೂ ಒಂದು ಇರಲಿಕ್ಕೆ ಬೇಕು.

ಚಲತ್ + ಶೀಕರ = ಚಲತ್ + ಛೀಕರ = (೫೩ ನಿಯಮದ ಅಪವಾದವಂತೆ), ಚಲಚ್ಛೀಕರ; ತಿರ್ಯಕ್ + ಶರೀರ = ತಿರ್ಯಕ್ಛರೀರ; ಅಪ್ + ಶಯನ = ಅಪ್ಛಯನ; ಉದ್ಯತ್ + ಶ್ಲೋಕ = ಉದ್ಯಚ್ಛ್ಲೋಕ; ಅಚ್ + ಶಕಾರ = ಅಚ್ಛಕಾರ; ಮು.

ಆದರೆ 'ವಾಕ್ + ಶ್ಚೋತ = ವಾಕ್ಶ್ಚೋತ' ಆಗುವದಲ್ಲದೆ 'ವಾಕ್ಛೋತ' ಆಗುವುದಿಲ್ಲ; ಏಕೆಂದರೆ ಶಕಾರದ ಮುಂದೆ ಚಕಾರ ಬಂದಿದೆ.

೫೫. ಹ್ರಸ್ವಸ್ವರಕ್ಕೆ ಛಕಾರ ಪರವಾದರೆ, ನಡುವೆ ಚಕಾರಾಗಮವಾಗುತ್ತದೆ.

ಉದಾ: ಪದ + ಛೇದ = ಪದಚ್ಛೇದ, ರವಿ + ಛವಿ = ರವಿಚ್ಛವಿ ಮು.

೫೬. ವಿಸರ್ಗಕ್ಕೆ ಶ ಷ ಸಕಾರಗಳು ಪರವಾದರೆ, ಆ ವಿಸರ್ಗಕ್ಕೆ ಮುಂದಿನ ವ್ಯಂಜನದ ಆದೇಶವು ವಿಕಲ್ಪದಿಂದಾಗುತ್ತದೆ.

ಉದಾ: ಮನಃ + ಶಾಂತಿ = ಮನಶ್ಶಾಂತಿ, ಮನಃಶಾಂತಿ; ಪಯಃ + ಷಂಡ = ಪಯಷ್ಷಂಡ, ಪಯಃಷಂಡ; ಹವಿಃ + ಸಂಪರ್ಕ = ಹವಿಸ್ಸಂಪರ್ಕ, ಹವಿಃಸಂಪರ್ಕ ಮು.

೫೭. ಅಕಾರದ ಮುಂದಿರುವ ವಿಸರ್ಗಕ್ಕೆ ಅಕಾರವಾಗಲಿ ಮೃದು ವ್ಯಂಜನವಾಗಲಿ ಪರವಾದರೆ, ವಿಸರ್ಗಕ್ಕೆ ಉಕಾರಾದೇಶವಾಗುತ್ತದೆ; ಬಳಿಕ ಉಕಾರವು ತನ್ನ ಹಿಂದಿನ ಅಕಾರದೊಳಗೆ ಕೂಡಿ ಗುಣಸಂಧಿಯಿಂದ ಓಕಾರ ವಾಗುತ್ತದೆ; ಈ ಓಕಾರದ ಮುಂದೆ ಅಕಾರವಿದ್ದರೆ ಆ ಅಕಾರವು ಲೋಪ ವಾಗುತ್ತದೆ.

ಉದಾ: ಮನಃ + ಗಮನ = ಮನ + ಉ + ಗಮನ = ಮನೋಗಮನ, ಮನಃ + ಅನುರಾಗ = ಮನ + ಉ + ಅನುರಾಗ = ಮನೋ + ಅನುರಾಗ = ಮನೋನುರಾಗ.

೫೮. ಅ ಆಕಾರಗಳ ಹೊರತು ಉಳಿದ ಸ್ವರಗಳ ಮುಂದೆ ಇರುವ ವಿಸರ್ಗಕ್ಕೆ ಸ್ವರವಾಗಲಿ ಮೃದುವ್ಯಂಜನವಾಗಲಿ ಪರವಾದರೆ ರೇಫಾದೇಶ ವಾಗುತ್ತದೆ.

ಉದಾ: ಹವಿಃ + ಗಂಧ = ಹವಿರ್ಗಂಧ, ಹವಿಃ + ಅಂಶ = ಹವಿರಂಶ, ಚಕ್ಷುಃ + ಮಿತ್ರ = ಚಕ್ಷುರ್ಮಿತ್ರ, ಚಕ್ಷುಃ + ಅಬ್ಜ = ಚಕ್ಷುರಬ್ಜ ಮು.

---

# ಎರಡನೆಯ ಭಾಗ—ಶಬ್ದವಿಚಾರ.

೫೯. ಅರ್ಥವುಳ್ಳ ಅಕ್ಷರಕ್ಕಾಗಲಿ ಅಕ್ಷರಗಳಿಗಾಗಲಿ ಶಬ್ದವೆನ್ನುವರು.

ಉದಾ: ಹೂ, ಕಯ್, ಕಾಲು, ಬೆರಳು, ಸಡಗರ, ಕಸಬರಿಗೆ ಮು.

೬೦. ಅರ್ಥವಿಶೇಷವನ್ನು ತೋರುವುದಕ್ಕಾಗಿ ಶಬ್ದಗಳ ಕಡೆಯಲ್ಲಿ ಸೇರುವ ವರ್ಣಗಳಿಗೆ **ಪ್ರತ್ಯಯಗಳೆ**ನ್ನುವರು.

ಉದಾ: ಉ, ಅನ್ನು, ಕಾರ, ವಂತ, ಅಕ ಮು.

೬೧. ಪ್ರತ್ಯಯಗಳು ನಾಲ್ಕು ವಿಧವಾಗಿವೆ:—(೧) ವಿಭಕ್ತಿಪ್ರತ್ಯಯ, (೨) ಕೃತ್ಪ್ರತ್ಯಯ, (೩) ತದ್ಧಿತಪ್ರತ್ಯಯ, (೪) ಸಮಾಸಾಂತಪ್ರತ್ಯಯ.

೬೨. ಶಬ್ದಕ್ಕೆ ವಿಭಕ್ತಿಪ್ರತ್ಯಯವನ್ನು ಹಚ್ಚಿದರೆ **ಪದ**ವಾಗುತ್ತದೆ.

ಉದಾ: 'ಕುದುರೆ' ಎಂಬ ಶಬ್ದಕ್ಕೆ 'ಅನ್ನು' ಎಂಬ ವಿಭಕ್ತಿ ಪ್ರತ್ಯಯವನ್ನು ಹಚ್ಚಿದರೆ, 'ಕುದುರೆಯನ್ನು' ಎಂಬ ಪದವು ಸಿದ್ಧವಾಗುತ್ತದೆ. ಇದೇ ಮೇರೆಗೆ 'ಮಾಡು' ಶಬ್ದಕ್ಕೆ 'ಅನು' ಎಂಬ ವಿಭಕ್ತಿ ಪ್ರತ್ಯಯವನ್ನು ಹಚ್ಚಿದರೆ, 'ಮಾಡನು' ಎಂಬ ಪದವು ಸಿದ್ಧವಾಗುತ್ತದೆ.

೬೩. ವಿಭಕ್ತಿಪ್ರತ್ಯಯಗಳು ಎರಡು ವಿಧವಾಗಿವೆ:—(೧) ನಾಮವಿಭಕ್ತಿ ಪ್ರತ್ಯಯ, (೨) ಕ್ರಿಯಾವಿಭಕ್ತಿ ಪ್ರತ್ಯಯ ಅಥವಾ ಆಖ್ಯಾತಪ್ರತ್ಯಯ. ನಾಮ ವಿಭಕ್ತಿಪ್ರತ್ಯಯಗಳು ನಾಮ, ಸರ್ವನಾಮ, ವಿಶೇಷಣ, ಅವ್ಯಯಗಳೆಂಬ ನಾಲ್ಕು ವಿಧದ ಶಬ್ದಗಳಿಗೆ ಹತ್ತುವುವು *

ಉದಾ: ರಾಮನು, ಅವನು, ಕರಿಯನು, ಮೇಲಿನಿಂದ ಮು.

ಕ್ರಿಯಾವಿಭಕ್ತಿಪ್ರತ್ಯಯಗಳು ಧಾತುಗಳಿಗೆ ಹತ್ತುವುವು.

ಉದಾ: ಮಾಡುತ್ತಾನೆ, ಮಾಡಿದನು, ಮಾಡುವನು ಮು.

೬೪. ಪದವು ಮೂರು ವಿಧವಾಗಿದೆ:—(೧) ನಾಮಪದ, (೨) ಕ್ರಿಯಾಪದ, (೩) ಅವ್ಯಯಪದ.

ಉದಾ: ನಾಮಪದಕ್ಕೆ—ಮನುಷ್ಯನು, ಅವನು, ಕರಿಯನು ಮು. ಕ್ರಿಯಾಪದಕ್ಕೆ—ಮಾಡಿದನು, ನುಡಿಯುತ್ತಾನೆ ಮು. ಅವ್ಯಯಪದಕ್ಕೆ—ಮೇಲೆ, ಹಿಂದೆ, ಮಾಡಲಿಕ್ಕೆ ಮು.

---

* ನಾಮವಿಭಕ್ತಿ ಪ್ರತ್ಯಯಗಳು ಸೇರುವ ಶಬ್ದಗಳಿಗೆ 'ಪ್ರಾತಿಪದಿಕ' ಎಂಬ ಹೆಸರು. ಇವುಗಳಲ್ಲಿ ಅವ್ಯಯಗಳು ನಿಜವಾಗಿ ಸೇರುವುದಿಲ್ಲ. ಏಕೆಂದರೆ ಈ ಪ್ರತ್ಯಯಗಳು ಕೆಲವು ಅವ್ಯಯಗಳಿಗೆ ಮಾತ್ರ ಸೇರುತ್ತವೆ; ಮತ್ತು ಅಂತಹ ಅವ್ಯಯಗಳಿಗೆ ಎಲ್ಲ ವಿಭಕ್ತಿ ಪ್ರತ್ಯಯಗಳೂ ಸೇರುವುದಿಲ್ಲ.

೧೫. ಪ್ರತ್ಯಯದ ಹಿಂದಿರುವ ಶಬ್ದಕ್ಕೆ ಪ್ರಕೃತಿಯೆನ್ನುವರು.

ಉದಾ: 'ಆಟಗಾರ್ತಿಗೆ' ಎಂಬ ಪದದಲ್ಲಿ 'ಆಟಗಾರ್ತಿ' ಎಂಬುದು ಪ್ರಕೃತಿ; 'ಗೆ' ಎಂಬುದೇ ಪ್ರತ್ಯಯ. 'ಆಟಗಾರ್ತಿ' ಎಂಬ ಶಬ್ದದಲ್ಲಿ 'ಆಟಗಾರ' ಎಂಬುದು ಪ್ರಕೃತಿಯು; 'ತಿ' ಎಂಬುದು ಪ್ರತ್ಯಯವು. 'ಆಟಗಾರ' ಶಬ್ದದಲ್ಲಿ 'ಆಟ' ಎಂಬುದು ಪ್ರಕೃತಿಯು; 'ಗಾರ' ಎಂಬುದು ಪ್ರತ್ಯಯವು. 'ಆಟ' ಎಂಬ ಶಬ್ದದಲ್ಲಿ 'ಆಡು' ಎಂಬುದು ಪ್ರಕೃತಿಯು, 'ಅ' ಎಂಬುದು ಪ್ರತ್ಯಯವು.

೧೬. ಪ್ರಕೃತಿಯು ಎರಡು ವಿಧವಾಗಿದೆ:—ನಾಮವಿಭಕ್ತಿಯ ಹಿಂದಿರುವ ಪ್ರಕೃತಿಯು ಪ್ರಾತಿಪದಿಕವೆನಿಸುತ್ತದೆ. ಕ್ರಿಯಾವಿಭಕ್ತಿಯ ಹಿಂದಿರುವ ಪ್ರಕೃತಿಯು ಧಾತುವೆನಿಸುತ್ತದೆ.

ಉದಾ: 'ಗಿಡವನ್ನು, ಅವನಿಂದ, ಕರಿಯನಿಗೆ, ಮೂಡಲ' ಈ ನಾಲ್ಕು ಪದಗಳ 'ಅನ್ನು, ಇಂದ, ಇಗೆ, ಅ' ಈ ನಾಲ್ಕು ನಾಮವಿಭಕ್ತಿಗಳ ಹಿಂದೆ ಕ್ರಮವಾಗಿ ಇರುವ 'ಗಿಡ, ಅವ, ಕರಿಯ, ಮೂಡ' ಶಬ್ದಗಳಿಗೆ ಪ್ರಾತಿಪದಿಕಗಳೆನ್ನುವರು.

'ಮಾಡನು, ನುಡಿಯನು' ಎಂಬ ಕ್ರಿಯಾಪದಗಳಲ್ಲಿ 'ಅನು' ಎಂಬ ಕ್ರಿಯಾವಿಭಕ್ತಿಯ ಹಿಂದಿರುವ 'ಮಾಡು, ನುಡಿ' ಎಂಬ ಶಬ್ದಗಳಿಗೆ ಧಾತುಗಳೆನ್ನುವರು.

೧೭. ಶಬ್ದಗಳಿಗೆ ಜಾತಿ ಅರ್ಥ ರೂಪಗಳೆಂಬ ಮೂರು ಲಕ್ಷಣಗಳುಂಟು.

೧೮. ಕನ್ನಡನುಡಿಯಲ್ಲಿ ಅಯ್ದು ಜಾತಿಯ ಶಬ್ದಗಳು ಇರುವುವು. ಯಾವುವೆಂದರೆ:—(೧) **ದೇಶ್ಯ**, (೨) **ತತ್ಸಮ**, (೩) **ತದ್ಭವ**, (೪) **ಗ್ರಾಮ್ಯ** (೫) **ಅನ್ಯದೇಶ್ಯ**. (ಇವುಗಳ ವಿವರವು ಕ್ರಮದಿಂದ ಮುಂದೆ ಬರುತ್ತದೆ).

೧೯. ಅಚ್ಚಗನ್ನಡ ಶಬ್ದಕ್ಕೆ **ದೇಶ್ಯ**ವೆನ್ನುವರು.

ಉದಾ: ಹೊಲ, ಮನೆ, ಬಾಗಿಲು, ಬದುಕು ಮು.

೨೦. ಪ್ರಾಚೀನ ಕನ್ನಡ ಪಂಡಿತರು ಬರೆದ ಗ್ರಂಥಗಳಲ್ಲಿರುವ ಎಷ್ಟೋ ಕನ್ನಡ ಶಬ್ದಗಳು ವಿಕಾರಹೊಂದಿ ಈಗಿನವರ ಪ್ರಯೋಗದಲ್ಲಿ ಬಂದಿವೆ. ವಿಕಾರಗಳಲ್ಲಿ ಮುಖ್ಯವಾದುವುಗಳು ಯಾವುವೆಂದರೆ:—

(ಅ) ವ್ಯಂಜನಾಂತಶಬ್ದಗಳ ಅಂತ್ಯವ್ಯಂಜನದಲ್ಲಿ ಉಕಾರ ಸೇರುತ್ತದೆ.

ಉದಾ: ನೀರ್ =ನೀರು, ಪಾಲ್ =ಪಾಲು, ತಾನ್ =ತಾನು, ಕಾಣ್ =ಕಾಣು, ಕೇಳ್ =ಕೇಳು, ಪಾಯ್ =ಪಾಯು, ಕಲ್= ಕಲ್ಲು, ಮುಳ್ =ಮುಳ್ಳು* ಮು.



* ವ್ಯಂಜನಸಂಧಿ ೪೧ನೆಯ ನಿಯಮವು ನೋಡು.

ಅಪವಾದ—(೧) 'ಕಾಲ್, ತಾಯ್, ನಾಯ್, ಬಾಯ್' ಶಬ್ದಗಳ ಅಂತ್ಯವ್ಯಂಜನದಲ್ಲಿಯೂ 'ಒಲ್, ಕಲ್, ಬಲ್' ಶಬ್ದಗಳ ಅಂತ್ಯವ್ಯಂಜನದಲ್ಲಿಯೂ ಇಕಾರ ಸೇರುತ್ತದೆ.

ಉದಾ: ಕಾಯಿ, ತಾಯಿ, ನಾಯಿ, ಬಾಯಿ, ಒಲಿ, ಕಲಿ, ಬಲಿ.

(೨) ಕಯ್, ಮೆಯ್, ನೆಯ್, ಸುಯ್ ಶಬ್ದಗಳಿಗೆ ಏನೂ ಸೇರುವುದಿಲ್ಲ.

(ಆ) ಕೆಲವು ಶಬ್ದಗಳೊಳಗಿನ ಅನುಸ್ವಾರ ಹೋಗುತ್ತದೆ.

ಉದಾ: ಬೇಂಟೆ=ಬೇಟೆ, ಕೋಂಟೆ=ಕೋಟೆ, ಕದಂಪು=ಕದಪು ಮು.

(ಇ) ಪಕಾರಕ್ಕೆ ಹಕಾರಾದೇಶವಾಗುತ್ತದೆ.

ಉದಾ: ಪಾಲು=ಹಾಲು, ಪುಡಿ=ಹುಡಿ, ಪಣ=ಹಣ, ಇಪ್ಪ=ಇಹ, ತಪ್ಪ=ತಹ.

(ಈ) ಕೆಲವು ಶಬ್ದಗಳಲ್ಲಿ ಸ್ವರದೊಳಗೆ ವ್ಯಂಜನ ಕೂಡಿದೆ.

ಉದಾ: ಆರ್=ಯಾರು, ಆವುದು=ಯಾವುದು ಮು.

(ಉ) ಕೆಲವು ಶಬ್ದಗಳಲ್ಲಿರುವ ಸಂಯುಕ್ತಾಕ್ಷರಗಳು ದ್ವಿತ್ವವಾಗುವುವು.

ಉದಾ: ಒರ್ಬ=ಒಬ್ಬ, ಇರ್ದು=ಇದ್ದು, ಕಳ್ತಲೆ=ಕತ್ತಲೆ ಮು.

೭೧. ಕನ್ನಡದಲ್ಲಿ ರೂಢವಾಗಿರುವ ಸಂಸ್ಕೃತಶಬ್ದಗಳಿಗೆ ಸಮಸಂಸ್ಕೃತಗಳು ಅಥವಾ ತತ್ಸಮಗಳೆನ್ನುವರು.

ಉದಾ: ಮನುಷ್ಯ, ಬ್ರಾಹ್ಮಣ, ಶೂದ್ರ, ಹಸ್ತ, ಅನ್ನ, ಉದಕ, ಸೂರ್ಯ, ಚಂದ್ರ.

೭೨. ಕನ್ನಡದ ವಿಭಕ್ತಿಪ್ರತ್ಯಯಗಳನ್ನು ಹಚ್ಚುವಾಗ ಎಷ್ಟೋ ಸಂಸ್ಕೃತ ಶಬ್ದಗಳ ಅಂತ್ಯಾಕ್ಷರಗಳಿಗೆ ಲೋಪಾಗಮಾದೇಶವಿಕಾರಗಳು ಆಗುವುವು; ಆದರೂ ಅವಕ್ಕೆ ತತ್ಸಮಗಳೆಂಬ ಹೆಸರು ತಪ್ಪುವುದಿಲ್ಲ.* ಮುಖ್ಯ ವಿಕಾರಗಳು ಯಾವುವೆಂದರೆ:—

(ಅ) ಅನೇಕ ಸ್ವರಗಳುಳ್ಳ ಶಬ್ದಗಳ ಅಂತ್ಯದೀರ್ಘಸ್ವರವು ಹ್ರಸ್ವವಾಗುತ್ತದೆ.

ಉದಾ: ವಿಶ್ವಪಾ=ವಿಶ್ವಪ, ಶಂಖಧ್ಮಾ=ಶಂಖಧ್ಮ, ಉಪತ್ಯಕಾ=ಉಪತ್ಯಕ, ಕುಮಾರೀ=ಕುಮಾರಿ, ವಧೂ=ವಧು, ಸ್ವಯಂಭೂ=ಸ್ವಯಂಭು, ಚಮೂ=ಚಮು.

---

* ಇಂತಹ ಶಬ್ದಗಳನ್ನು ತದ್ಭವಗಳಲ್ಲಿ ಎಣಿಸಬೇಕೆಂದು ಶಬ್ದಾದರ್ಶವೆಂಬ ಮೈಸೂರ ವ್ಯಾಕರಣವು ಹೇಳುತ್ತದೆ. ಆದರೆ ತದ್ಭವಗಳಿಗೂ ದೇಶ್ಯ ಶಬ್ದಗಳಿಗೂ ಸಮಾಸವಾಗಬಾರದೆಂಬ ನಿಯಮದಿಂದ 'ವಧುಮದುವೆ, ಚಮುದೊರೆ, ನದಿಗಂಡ' ಮುಂತಾದ ವಿಲಕ್ಷಣವಾದ ಸಮಾಸಗಳುಂಟಾಗಿ ಕನ್ನಡ ನುಡಿಯು ಹಸಗೆಟ್ಟು ಹೋಗಬಹುದು. ಮತ್ತು ಇದಕ್ಕೆ ಶಬ್ದಮಣಿದರ್ಪಣದ ಆಧಾರವೂ ಇಲ್ಲ.

ಅಪವಾದ–ಆದರೆ ಕೆಲವು ಶಬ್ದಗಳ ಅಂತ್ಯವಾದ ಆಕಾರಕ್ಕೆ ನಿತ್ಯವಾಗಿಯೂ ಕೆಲವುಗಳ ಆಕಾರಕ್ಕೆ ವಿಕಲ್ಪವಾಗಿಯೂ ಎಕಾರಾದೇಶವಾಗುತ್ತದೆ.

ಉದಾ: ನಿತ್ಯಕ್ಕೆ—ಗಂಗಾ =ಗಂಗೆ, ವೀಣಾ =ವೀಣೆ, ಕೃಪಾ =ಕೃಪೆ.

ವಿಕಲ್ಪಕ್ಕೆ—ಕರುಣಾ =ಕರುಣೆ, ಕರುಣ; ದಯಾ =ದಯೆ, ದಯ; ವಿದ್ಯಾ =ವಿದ್ಯೆ, ವಿದ್ಯ; ಭಿಕ್ಷಾ =ಭಿಕ್ಷೆ, ಭಿಕ್ಷ ಮು.

(ಆ) ನಕಾರಕ್ಕೆ ಲೋಪವಾಗುತ್ತದೆ.

ಉದಾ: ರಾಜನ್ =ರಾಜ, ಆತ್ಮನ್ =ಆತ್ಮ, ಬ್ರಹ್ಮನ್=ಬ್ರಹ್ಮ ಕರ್ಮನ್=ಕರ್ಮ, ಪರ್ವನ್ =ಪರ್ವ, ಉಷ್ಮನ್= ಉಷ್ಮ ಮು.

(ಇ) ತ ಸಕಾರಗಳಿಗೆ ದ್ವಿತ್ವವಾಗಿ ಅವುಗಳಿಗೆ ಉಕಾರ ಕೂಡುತ್ತದೆ. ಕೆಲವೆಡೆಯಲ್ಲಿ ಸಕಾರಕ್ಕೆ ವಿಕಲ್ಪದಿಂದ ದ್ವಿತ್ವವಾಗಿ ಉಕಾರ ಕೂಡುತ್ತದೆ. ಕೆಲವೆಡೆಯಲ್ಲಿ ಸಕಾರಕ್ಕೆ ಲೋಪವೂ ಬರುತ್ತದೆ.

ಉದಾ: ದ್ವಿತ್ವಕ್ಕೆ—ವಿದ್ಯುತ್ =ವಿದ್ಯುತ್ತು, ತಟಿತ್ =ತಟಿತ್ತು, ಯಜುಸ್= ಯಜುಸ್ಸು, ವರ್ಚಸ್ =ವರ್ಚಸ್ಸು.

ವಿಕಲ್ಪಕ್ಕೆ—ಮನಸ್ =ಮನ, ಮನಸು, ಮನಸ್ಸು; ತೇಜಸ್ =ತೇಜ, ತೇಜಸ್ಸು; ಧನುಸ್= ಧನು, ಧನುಸ್ಸು; ಪಯಸ್ =ಪಯ, ಪಯಸ್ಸು; ವಯಸ್ =ವಯ ವಯಸು, ವಯಸ್ಸು ಮು, ('ಜಗತ್' ಶಬ್ದವು 'ಜಗ'ವೆಂತಲೂ 'ಜಗತ್ತು' ಎಂತಲೂ ಆಗುವುದು.)

(ಈ) ಕೆಲವು ಅಕಾರಾಂತಗಳು ಎಕಾರಾಂತವಾಗಿಯೂ ನುಡಿಯುವುವು.

ಉದಾ: ಪ್ರಶ್ನ =ಪ್ರಶ್ನೆ, ಪ್ರಶ್ನ; ಅಂಕ =ಅಂಕೆ, ಅಂಕ; ವಧ =ವಧೆ, ವಧ; ಅಭಿಲಾಷ =ಅಭಿಲಾಷೆ, ಅಭಿಲಾಷ; ಛೇದನ =ಛೇದನೆ ಮು.

(ಉ) ಕೆಲವು ಶಬ್ದಗಳ ಅಂತ್ಯವ್ಯಂಜನಗಳಲ್ಲಿ ಅಕಾರ ಸೇರುವುದು.

ಉದಾ: ದಿವ್=ದಿವ, ಸುಮನಸ್ =ಸುಮನಸ, ವೇದವಿದ್ =ವೇದವಿದ, ಸಂಪದ್ =ಸಂಪದ ಮು.

೭೩. ತತ್ಸಮ ಶಬ್ದಕ್ಕೆ ಬಂದ ವಿಕಾರವು ಆ ಶಬ್ದವನ್ನು ಬೇರೆ ಸಂಸ್ಕೃತ ಶಬ್ದದೊಡನೆ ಕೂಡಿಸಿ ಸಮಾಸಮಾಡುವಾಗ ಹೋಗುತ್ತದೆ.

ಉದಾ: 'ನದಿ, ವಧು' ಶಬ್ದಗಳನ್ನು 'ವರ'ಶಬ್ದದೊಡನೆ ಕೂಡಿಸಿ ಸಮಾಸಮಾಡುವಾಗ, 'ನದಿವರ, ವಧುವರ' ಎಂದು ಇಡಲಾಗದು; 'ನದೀವರ, ವಧೂವರ' ಎಂದೇ ಇಡಬೇಕು.

೭೪. ನಾನಾವಿಕಾರಗಳನ್ನು ಹೊಂದಿ ಕನ್ನಡದಲ್ಲಿ ಬಂದ ಸಂಸ್ಕೃತ ಶಬ್ದಗಳಿಗೆ ತದ್ಭವಗಳೆಂಬ ಹೆಸರು.

ಉದಾ: ಸತ್ವರ= ಜಚ್ಚರ, ನರ್ತಕೀ =ನಚ್ಚಣಿ, ದಾಡಿಮ= ದಾಳಿಂಬ, ಮು.

ತದ್ಭವಶಬ್ದಗಳ ಮುಖ್ಯ ವಿಕಾರಗಳು ಯಾವುವೆಂದರೆ:—

(ಅ) ಯಕಾರಕ್ಕೆ ಜಕಾರಾದೇಶವಾಗುತ್ತದೆ.

ಉದಾ: ಯೋಗಿ =ಜೋಗಿ, ಯಾತ್ರಾ= ಜಾತ್ರೆ, ಯತಿ= ಜತಿ, ಯೋಗ=ಜೋಗ, ಯಂತ್ರ =ಜಂತ್ರ ಮು.

(ಆ) ಕರ್ಕಶ ವ್ಯಂಜನಕ್ಕೆ ಮೃದುವ್ಯಂಜನಾದೇಶವಾಗುತ್ತದೆ.

ಉದಾ: ಕಟಕ =ಕಡಗ, ವಚಾ =ಬಜೆ, ಸೂಚೀ =ಸೂಜಿ, ಕಾಚ =ಕಾಜು, ಕಪಟ =ಕವಡು, ಜಟಾ =ಜಡೆ, ಅಟವೀ =ಅಡವಿ, ಭೂತಿ =ಬೂದಿ, ವೀಥೀ =ಬೀದಿ, ಜಾತಿ =ಜಾದಿ, ದೀಪಿಕಾ =ದೀವಿಗೆ ಮು.

(ಇ) ಮಹಾಪ್ರಾಣವು ಅಲ್ಪಪ್ರಾಣವಾಗುತ್ತದೆ.

ಉದಾ: ಖಂಡ =ಕಂಡ, ಖನಿ =ಕಣಿ, ಘಂಟಾ =ಗಂಟೆ, ಲಘು =ಲಗು, ಘುಟಿಕಾ =ಗಳಿಗೆ, ಘರ್ಮ =ಗಮ್ಮ, ಝರಿ =ಜರಿ, ಶುಂಠೀ =ಸುಂಟಿ, ಕಂಠ =ಕಂಟ, ಕಂಥಾ =ಕಂತೆ, ವಿಧು =ಬಿದು, ಆರಂಭ =ಆರಂಬ, ಕುಸುಂಭ =ಕುಸುಬೆ ಮು.

(ಈ) ಶ ಷಕಾರಗಳಿಗೆ ಸಕಾರಾದೇಶವಾಗುತ್ತದೆ.

ಉದಾ: ಶಾಣ =ಸಾಣೆ, ಶಾಪ =ಸಾಪ, ಶೂದ್ರ =ಸೂದ್ರ, ಮುಷಿ =ಮುಸಿ, ಪಾಷಾಣ =ಪಾಸಾಣ, ಕಷಾಯ =ಕಸಾಯ, ಶಶಿ =ಸಸಿ, ಸ್ನುಷಾ =ಸೊಸೆ, ವಿಷ =ಬಿಸ ಮು.

(ಉ) ಟ ಠ ಡ ಲಕಾರಗಳಿಗೆ ಳಕಾರವಾಗುತ್ತದೆ.

ಉದಾ: ಸ್ಫಟಿಕ =ಪಳುಕು, ವೀಟಿಕಾ =ವೀಳೆಯ, ಪೀಠಿಕಾ =ಪೀಳಿಗೆ, ಮಠಿಕಾ =ಮಳಿಗೆ, ದಾಡಿಮ =ದಾಳಿಂಬ, ಕಮಲ =ಕಮಳ ಮು.

(ಊ) ಪ ಫಕಾರಗಳಿಗೆ ಹಕಾರಾದೇಶವಾಗುತ್ತದೆ.

ಉದಾ: ಪಣ =ಹಣ, ಪಿಷ್ಟ =ಹಿಟ್ಟು, ಪೂರ್ಣಿಮಾ =ಹುಣ್ಣಿವೆ, ಪೂರ್ವಾ =ಹುಬ್ಬೆ, ಪೂರಣ =ಹೂರಣ, ಫಲಕ =ಹಲಗೆ, ಫಟಾ =ಹೆಡೆ ಮು.

(ಋ) ಪ ಬ ಮಗಳಿಗೆ ವಕಾರಾದೇಶವಾಗುತ್ತದೆ.

ಉದಾ: ದೀಪಿಕಾ =ದೀವಿಗೆ, ಸಪತ್ನೀ =ಸವತಿ, ವಾಪೀ =ಬಾವಿ, ಸಮ =ಸವ ಕಾಮ =ಕಾವ ಮು.

(ೠ) ವಕಾರಕ್ಕೆ ಬಕಾರಾದೇಶವಾಗುತ್ತದೆ.

ಉದಾ: ವರ್ಣ =ಬಣ್ಣ, ವಲ್ಲೀ =ಬಳ್ಳಿ, ವಿಷಮ =ಬೆಸ, ವೀಥೀ =ಬೀದಿ, ವೇಗ =ಬೇಗ, ವೀರ =ಬೀರ ಮು.

## ಒತ್ತಕ್ಷರಗಳ ವಿಕಾರಗಳು.

(೧) ಒತ್ತಕ್ಷರದೊಳಗಿನ ಒಂದು ವ್ಯಂಜನಕ್ಕೆ ಲೋಪವಾಗುತ್ತದೆ.

ಉದಾ: ಕ್ಷಾರ = ಕಾರ, ಜ್ಞಾನ = ಜಾಣ, ದ್ರೋಣೀ = ದೋಣಿ, ಸ್ನಾನ = ಸಾನ, ಬ್ರಹ್ಮ = ಬೊಮ್ಮ, ಸ್ನುಷೆ = ಸೊಸೆ, ಪ್ರಮಾಣ = ಪವಣು, ಸ್ಫಟಿಕ = ಪಟಿಕ, ಪಳು ಮು.

(೨) ಒತ್ತಕ್ಕರದೊಳಗಿನ ಒಂದು ವ್ಯಂಜನವು ಲುಪ್ತವಾದ ಮೇಲೆ ಉಳಿದ ವ್ಯಂಜನಕ್ಕೆ ಯೋಗ್ಯ ವ್ಯಂಜನದ ಆದೇಶವಾಗುತ್ತದೆ.

ಉದಾ: ಭ್ರಮರ = ಬವರ, ಸ್ಥಾನ = ತಾಣ, ಸ್ಥಿರ = ತಿರ, ಸಂಸ್ಥೆ = ಸಂತೆ, ಸಂಧ್ಯಾ = ಸಂಜೆ, ವಂಧ್ಯಾ = ಬಂಜೆ, ಧ್ಯಾನ = ಜಾನ, ಸ್ಫಿಕ್ಕಾ = ಹಿಕ್ಕೆ, ಪ್ರವಾಲ = ಹವಳ, ಪ್ರಸರ = ಹಸರ, ಪ್ರಸಾದ = ಹಸಾದ, ಅವಸ್ಥೆ = ಅವತೆ ಮು.

(೩) ಒತ್ತಕ್ಕರದೊಳಗಿನ ಒಂದು ವ್ಯಂಜನವು ಲುಪ್ತವಾದ ಬಳಿಕ ಉಳಿದ ವ್ಯಂಜನಕ್ಕೆ ದ್ವಿತ್ವ ಬರುತ್ತದೆ. ಇಲ್ಲವೆ ವ್ಯಂಜನಕ್ಕೆ ಬೇರೆ ವ್ಯಂಜನದ ಆದೇಶ ವಾದ ಮೇಲೆ ದ್ವಿತ್ವವಾಗುತ್ತದೆ.

ಉದಾ: ಅಕ್ಷರ = ಅಕ್ಕರ, ಭಿಕ್ಷೆ = ಬಿಕ್ಕೆ, ಪಕ್ಷ = ಪಕ್ಕ, ಸ್ವರ್ಗ = ಸಗ್ಗ, ವರ್ಧಂತಿ = ವಡ್ಡಂತಿ, ಆರ್ಯ = ಅಜ್ಜ, ನಿತ್ಯ = ನಿಚ್ಚ, ಮೃತ್ಯು = ಮಿತ್ತು, ಸಂಜ್ಞಾ = ಸನ್ನೆ, ಯಜ್ಞ = ಜನ್ನ ಮು.

(೪) ಕೆಲವೆಡೆಯಲ್ಲಿ ಜ್ಞ ವರ್ಣಕ್ಕೆ ಣಕಾರಾದೇಶವಾಗುತ್ತದೆ.

ಉದಾ: ಆಜ್ಞಾ = ಆಣೆ, ರಾಜ್ಞೀ = ರಾಣಿ, ಆಜ್ಞಪ್ತಿ = ಆಣತಿ ಮು.

(೫) ಒತ್ತಕ್ಕರದ ಎರಡು ವ್ಯಂಜನಗಳ ನಡುವೆ ಅ ಇ ಉ ಗಳಲ್ಲಿ ಯಾವುದಾದರೂ ಒಂದು ಸ್ವರವು ಸೇರುತ್ತದೆ.

ಉದಾ: ಯತ್ನ = ಜತನ, ಇಂದ್ರ = ಇಂದಿರ, ವರ್ಷ = ವರುಷ ಮು.

(೬) ಕೆಲವು ಶಬ್ದಗಳ ಕಡೆಯ ಅಕ್ಷರವೇ ಹೋಗುತ್ತದೆ.

ಉದಾ: ಪಲ್ಲವ = ಪಲ್ಲ, ಗೋಧೂಮ = ಗೋದಿ, ಗೋಮಯ = ಗೋಮೆ, ಪ್ರಗ್ರಹ = ಹಗ್ಗ, ಉಪದ್ರವ = ಉಪದ್ರ ಮು.

೭೫. ಅಶಿಕ್ಷಿತ ಜನರು ಪ್ರಯೋಗಿಸುವ ವಿಕೃತರೂಪದ ಶಬ್ದಗಳಿಗೆ ಗ್ರಾಮ್ಯ ಗಳೆನ್ನುವರು.

ಉದಾ: ಇಂಥ = ಹಿಂತ, ಕೂತು = ಕುಂತು, ಹತ್ತಿರ = ಹಂತೀಲಿ, ಕರದಿ = ಕಡ್ಡಿ, ನೋಡಲಿಕ್ಕೆ = ನೋಡಾಕ, ತಿನ್ನಲಿಕ್ಕೆ = ತಿಂಬಾಕ ಮು.

೨೬. ಕನ್ನಡದಲ್ಲಿ ಬಂದು ಸೇರಿದ ಇಂಗ್ಲಿಷ, ಮರಾಠಿ, ಹಿಂದುಸ್ಥಾನಿ ಮುಂತಾದ ಪರಭಾಷೆಗಳ ಶಬ್ದಗಳಿಗೆ ಅನ್ಯದೇಶ್ಯಗಳೆನ್ನುವರು.

ಉದಾ: ಟಿಕೀಟು, ರಿಪೋರ್ಟು, ಟೇಬಲು, ಸಲಾಮು, ಹುಕುಮು, ಸಿಫಾರಿಸು ಮು.

೨೭. ಅರ್ಥಭೇದದಿಂದ ಶಬ್ದಗಳು (೧) ನಾಮ (೨) ಸರ್ವನಾಮ (೩) ವಿಶೇಷಣ (೪) ಕ್ರಿಯಾಪದ (೫) ಅವ್ಯಯ ಎಂದು ಅಯ್ದು ವಿಧ ವಾಗಿವೆ.

## ನಾಮಪ್ರಕರಣ

೨೮. ಒಡವೆಗಳ ಹೆಸರುಗಳೂ ಅವುಗಳ ಗುಣಕ್ರಿಯಾದಿಗಳ ಹೆಸರು ಗಳೂ ನಾಮಗಳು.

ಉದಾ: ಮನುಷ್ಯ, ಗಂಡುಸು, ಹೆಂಗುಸು, ಗಿಡ, ಧಾರವಾಡ, ಸೂರ್ಯ, ಚಂದ್ರ, ನಕ್ಷತ್ರ, ಸ್ವರ್ಗ, ನರಕ, ಸಿಟ್ಟು, ಅಕ್ಕರತೆ, ಸ್ನೇಹ, ಆಟ, ಓಟ, ಚಿಂತೆ, ಯೋಚನೆ ಮು.

೨೯. ನಾಮಗಳಲ್ಲಿ ವಸ್ತುವಾಚಕ, ಭಾವವಾಚಕವೆಂಬ ಎರಡು ಭೇದಗಳುಂಟು.

(ಅ) ಒಡವೆಯ ಹೆಸರುಗಳು ವಸ್ತುವಾಚಕಗಳು.

ಉದಾ: ಮನುಷ್ಯ, ಗಂಡುಸು, ಹೆಂಗುಸು, ಗಿಡ, ಆಕಳು ಮು.

(ಆ) ಒಡವೆಯ ಗುಣಕ್ರಿಯಾದಿಗಳ ಹೆಸರುಗಳು ಭಾವವಾಚಕಗಳು.

ಉದಾ: ಸಿಟ್ಟು, ಅಕ್ಕರತೆ, ದೃಢತ್ವ, ಸ್ಥಿರತ್ವ ಮು.

೩೦. ವಸ್ತುವಾಚಕನಾಮಗಳಲ್ಲಿ ರೂಢನಾಮ, ಅಂಕಿತನಾಮ, ಅನ್ವರ್ಥಕನಾಮ ಎಂದು ಮೂರು ಭೇದಗಳಿವೆ.

(ಅ) ಒಡವೆಯ ಜಾತಿಯನ್ನು ತೋರಿಸುವ ನಾಮಗಳು ರೂಢನಾಮಗಳು.

ಉದಾ: ಮನುಷ್ಯ, ಪಶು, ಪಕ್ಷಿ, ಹುಳು, ಗಿಡ, ಕಲ್ಲು, ಮಣ್ಣು ಮು.

(ಆ) ಒಂದೇ ಬಗೆಯ ಹಲವು ಒಡವೆಗಳಲ್ಲಿ ಒಂದನ್ನೇ ಬೇರೆ ಮಾಡಿ ತೋರಿಸಲಿಕ್ಕೆ ಇಟ್ಟ ಹೆಸರು ಅಂಕಿತನಾಮವು.

ಉದಾ: ರಾಮ, ಗಂಗೆ, ಧಾರವಾಡ, ಸಿಂಧು ಮು.

(ಇ) ಉದ್ಯೋಗ ಗುಣ ಮುಂತಾದವುಗಳಿಂದ ವಸ್ತುವಿಗೆ ಬಂದ ಹೆಸರು ಅನ್ವರ್ಥಕನಾಮವು (ಇದಕ್ಕೆ ವಿಶೇಷಣನಾಮವೆನ್ನಬಹುದು.)

ಉದಾ: ಸುಖಿ, ಮೋಸಗಾರ, ಗಾಣಿಗ, ಶಾಸ್ತ್ರಿ, ಬುದ್ಧಿವಂತ ಮು.

೮೧. ನಾಮಗಳಿಗೆ ಲಿಂಗ, ವಚನ, ವಿಭಕ್ತಿಗಳೆಂಬ ಮೂರು ಲಕ್ಷಣಗಳುಂಟು.

೮೨. ಕನ್ನಡದಲ್ಲಿ ಗಂಡುಸರನ್ನು ಹೇಳುವ ಶಬ್ದಗಳು ಪುಲ್ಲಿಂಗವೆಂದೂ ಹೆಂಗುಸರನ್ನು ಹೇಳುವ ಶಬ್ದಗಳು ಸ್ತ್ರೀಲಿಂಗವೆಂದೂ ಉಳಿದುವು ನಪುಂಸಕಲಿಂಗವೆಂದೂ ಸಾಮಾನ್ಯ ನಿಯಮವು.

(ಅ) ಪುಲ್ಲಿಂಗದ ನಾಮಗಳು:—

ಉದಾ: ಗಂಡುಸು, ಮನುಷ್ಯ, ರಾಮ, ತಿಮ್ಮ ಮು.

### ಅಪವಾದಗಳು.

(೧) 'ಜನ' ಶಬ್ದವು ಏಕವಚನದಲ್ಲಿ ನಪುಂಸಕಲಿಂಗವಾಗುವುದು.

ಉದಾ: ಜನವು.

ಬಹುವಚನದಲ್ಲಿ ಪುಲ್ಲಿಂಗವಾಗುವುದು.

ಉದಾ: ಜನರು.

'ಜನ' ಶಬ್ದದ ಹಿಂದೆ ಕು, ಸು, ಸತ್, ದುರ್ ಎಂಬ ವಿಶೇಷಣಗಳ ಒಂದು ಇದ್ದರೆ ಅದು ಏಕವಚನದಲ್ಲಿಯೂ ಪುಲ್ಲಿಂಗ ಅಥವಾ ಸ್ತ್ರೀಲಿಂಗವಾಗುವುದು.

ಉದಾ: ಕುಜನನು, ಸುಜನನು, ಸಜ್ಜನಳು, ದುರ್ಜನಳು.

(೨) 'ವರ' ಶಬ್ದವು ಪುರುಷವಾಚಕವಾದರೂ ಪುಲ್ಲಿಂಗದಲ್ಲಿಯೂ ನಪುಂಸಕಲಿಂಗದಲ್ಲಿಯೂ ರೂಢವಾಗಿದೆ.

ಉದಾ: ವರನು, ವರವು.

(೩) 'ಸೂರ್ಯ, ಚಂದ್ರ, ಮಂಗಳ' ಮುಂತಾದ ಗ್ರಹವಾಚಕಗಳೂ ವಸಂತಾದಿಶಬ್ದಗಳೂ ಪುಲ್ಲಿಂಗದಲ್ಲಿಯೂ ನಪುಂಸಕಲಿಂಗದಲ್ಲಿಯೂ ರೂಢವಾಗಿವೆ.

ಉದಾ: ಸೂರ್ಯನು, ಸೂರ್ಯವು; ಚಂದ್ರನು, ಚಂದ್ರವು; ಮಂಗಳನು, ಮಂಗಳವು; ವಸಂತನು, ವಸಂತವು; ಮಂದಮಾರುತನು, ಮಂದಮಾರುತವು; ಗ್ರೀಷ್ಮನು, ಗ್ರೀಷ್ಮವು ಮು.

(೪) 'ಮಗು, ಕೂಸು, ಶಿಶು, ಆಳು' ಎಂಬ ಶಬ್ದಗಳು ಹೆಚ್ಚಾಗಿ ನಪುಂಸಕಲಿಂಗದಲ್ಲಿ ಉಪಯೋಗವಾಗುತ್ತವೆ.

ಉದಾ: ಈ ಮಗು ಚೆಂದವಿದೆ, ಆ ಕೂಸು ಅಳುತ್ತದೆ; ಆ ಕೆಲಸಕ್ಕೆ ನಾಲ್ಕಾಳು ಬೇಕಾಗುತ್ತವೆ. ಇತ್ಯಾದಿ.

(ಆ) ಹೆಂಗುಸರ ಹೆಸರುಗಳು ಸ್ತ್ರೀಲಿಂಗದ ನಾಮಗಳು.

ಉದಾ: ಹೆಂಗುಸು, ನಾರಿ, ಲಕ್ಷ್ಮಿ, ನೀಲಿ, ಸಾವಿತ್ರಿ ಮು.

ಅಪವಾದಗಳು

(೧) 'ಕುಟುಂಬ, ಪರಿಗ್ರಹ, ಕಲತ್ರ' ಶಬ್ದಗಳು 'ಹೆಂಡತಿ' ಎಂಬ ಅರ್ಥವುಳ್ಳವಾಗಿದ್ದರೂ ನಪುಂಸಕಲಿಂಗವಾಗಿವೆ.

ಉದಾ: ಕುಟುಂಬವು, ಪರಿಗ್ರಹವು, ಕಲತ್ರವು.

(೨) 'ತೊತ್ತು' ಶಬ್ದವು ಸ್ತ್ರೀಲಿಂಗವಾಚಕವಾದಾಗ್ಯೂ ನಪುಂಸಕಲಿಂಗ ವಾಗಿ ಉಪಯೋಗವಾಗುವುದು ರೂಢಿಯಾಗಿದೆ.

ಉದಾ: ಆ ತೊತ್ತು ಸರಿಯಾಗಿ ಕೆಲಸ ಮಾಡುತ್ತದೆ.

(೩) 'ಕನ್ಯೆ, ಸಿರಿ, ಸರಸ್ವತಿ, ಭೂಮಿ, ಗಂಗೆ, ದೇವತೆ' ಮುಂತಾದ ಶಬ್ದಗಳು ಸ್ತ್ರೀಲಿಂಗದಲ್ಲಿಯೂ ನಪುಂಸಕಲಿಂಗದಲ್ಲಿಯೂ ರೂಢವಾಗಿವೆ.

ಉದಾ: ಸಿರಿ ಮೆಚ್ಚುವಳು, ಸಿರಿ ಬಂತು; ಸರಸ್ವತಿ ಒಲಿಯುವಳು, ಸರಸ್ವತಿ ಒಲಿಯುವುದು; ಭೂಮಿ ದೊಡ್ಡವಳು; ಭೂಮಿ ದೊಡ್ಡದು; ಗಂಗೆ ಹರಿಯುತ್ತಾಳೆ, ಗಂಗೆ ಹರಿಯುತ್ತದೆ; ದೇವತೆ ವರವ ಕೊಟ್ಟಳು, ದೇವತೆ ವರವ ಕೊಟ್ಟಿತು.

(ಇ) ಮನುಷ್ಯರನ್ನು ಬಿಟ್ಟು ಉಳಿದ ಶಬ್ದಗಳು ಪ್ರಾಣಿವಾಚಕಗಳಾಗಲಿ ಆಗದೆ ಇರಲಿ ನಪುಂಸಕಲಿಂಗದಲ್ಲಿಯೆ ಪ್ರಯೋಗವಾಗುತ್ತವೆ.

ಉದಾ: ಮಂಗ, ಕೋಣ, ಎತ್ತು, ಎಮ್ಮೆ, ಆಕಳು, ಗಿಡು, ಬಳ್ಳಿ, ಕಲ್ಲು, ಮಣ್ಣು, ನೆಲ ಮು.

೮೩. ಪದಗಳು ಏಕವಚನ ಬಹುವಚನ ಎಂದು ಎರಡು ವಿಧವಾಗಿರುವವು.

(ಅ) ಒಂದೇ ವಸ್ತುವನ್ನು ಹೇಳುವ ಪದವು ಏಕವಚನದಲ್ಲಿರುವುದು.

ಉದಾ: ಮನುಷ್ಯನು, ಹೆಂಗುಸು, ಗಿಡವು ಮು.

(ಆ) ಒಂದಕ್ಕಿಂತ ಹೆಚ್ಚು ವಸ್ತುಗಳನ್ನು ಹೇಳುವ ಪದವು (ಅನೇಕ ಅಥವಾ) ಬಹುವಚನದಲ್ಲಿರುತ್ತದೆ.

ಉದಾ: ಮನುಷ್ಯರು, ಹೆಂಗುಸರು, ಗಿಡುಗಳು.

೮೪. ವಾಕ್ಯದಲ್ಲಿ ಶಬ್ದಗಳ ಕ್ರಿಯಾಸಂಬಂಧವನ್ನು ತೋರಿಸಲಿಕ್ಕೆ ಶಬ್ದಗಳಿಗೆ ಹಚ್ಚುವ ಪ್ರತ್ಯಯಗಳಿಗೆ 'ವಿಭಕ್ತಿಗಳು' ಎಂಬ ಹೆಸರು. ಅವುಗಳಲ್ಲಿ ಷಷ್ಠಿ ಸಂಬೋಧನಗಳನ್ನು ಬಿಟ್ಟು ಉಳಿದುವುಗಳಿಗೆ ಕ್ರಿಯಾಸಂಬಂಧ-

ವಿರುವುದರಿಂದ ಅವಕ್ಕೆ ಮಾತ್ರ ಕಾರಕಗಳೆನ್ನುತ್ತಾರೆ. ಷಷ್ಠಿಯು ಸಂಬಂ ವನ್ನು ಸೂಚಿಸುತ್ತದೆ. ಸಂಬೋಧನವು ಕರೆಯುವುದರಲ್ಲಿ ಮಾತ್ರ ಪ್ರಯೋ ವಾಗುತ್ತದೆ.

ವಿಭಕ್ತಿಗಳು ಎಂಟು ಇರುವುವು. ಅವು ಯಾವುವೆಂದರೆ:—

| ಅನುಕ್ರಮ. | ಹೆಸರು. | ಕಾರಕಾರ್ಥ* | ಪ್ರತ್ಯಯ. |
|---|---|---|---|
| ೧. | ಪ್ರಥಮೆ | ಕರ್ತೃ | —§ |
| ೨. | ದ್ವಿತೀಯೆ | ಕರ್ಮ | ಅ, ಅನ್ನು. |
| ೩. | ತೃತೀಯೆ | ಕರಣ | ಇಂದ. |
| ೪. | ಚತುರ್ಥಿ | ಸಂಪ್ರದಾನ | ಗೆ, ಇಗೆ, ಕ್ಕೆ, ಅ |
| ೫. | ಪಂಚಮಿ | ಅಪಾದಾನ | ಇಂದ. |
| ೬. | ಷಷ್ಠಿ | ಸಂಬಂಧ | ಅ. |
| ೭. | ಸಪ್ತಮಿ | ಅಧಿಕರಣ | ಅಲ್ಲಿ. |
| ೮. | ಸಂಬೋಧನ | ಕರೆಯುವಿಕೆ | ಏ. ಇರಾ. |

೮೫. ಮೇಲಿನ ನಿಯಮದಲ್ಲಿ ಹೇಳಿದ ವಿಭಕ್ತಿಪ್ರತ್ಯಯಗಳು ಶಬ್ದ ಏಕವಚನಕ್ಕೂ ಬಹುವಚನಕ್ಕೂ ಬರುತ್ತವೆ. ಆದರೆ ನಡುವೆ ಬರುವ ಆ ಗಳಿಂದ ಏಕವಚನ ಬಹುವಚನಗಳ ವಿಭಕ್ತಿರೂಪಗಳಲ್ಲಿ ಭೇದ ತೋರುತ್ತ "ಇರಾ" ಪ್ರತ್ಯಯವು ಸಂಬೋದನ ಬಹುವಚನಕ್ಕೆ ಮಾತ್ರ ಬರುತ್ತದೆ.

೮೬. ಚತುರ್ಥಿಗೆ ನಾಲ್ಕು ಪ್ರತ್ಯಯಗಳು ಇವೆ. ಅವುಗಳಲ್ಲಿ " ಪ್ರತ್ಯಯವು ಅಕಾರಾಂತ ನಪುಂಸಕಲಿಂಗದ ಏಕವಚನಕ್ಕೆ ಬರುತ್ತದೆ. "ಅ ಪ್ರತ್ಯಯವು ಉಕಾರಾಂತ ಸರ್ವನಾಮ ವಿಶೇಷಣಗಳ ಏಕವಚನಕ್ಕೆ ಬರುತ್ತ

---

* ಒಂದು ವಿಭಕ್ತಿಗೆ ಒಂದೇ ಕಾರಕಾರ್ಥವೆಂಬ ನಿಯಮವಿಲ್ಲ. ಆದರೆ ಪ ಯಾಗಿ ಬರುವ ಕಾರಕಾರ್ಥವನ್ನು ಹೇಳುವ ರೂಢಿ ಬಿದ್ದಿದೆ.

§ ಕನ್ನಡದಲ್ಲಿ ಪ್ರಥಮಾವಿಭಕ್ತಿಗೆ ನಿಜವಾಗಿ ಪ್ರತ್ಯಯವಿಲ್ಲ. ಆದರೆ ಹಳಗನ್ನ ವ್ಯಾಕರಣಕಾರರು ಪ್ರಥಮಾವಿಭಕ್ತಿ ಪ್ರತ್ಯಯವು 'ಮ್' ಎಂಬುದೆಂದೂ ಅದು ರಾಂತ ಶಬ್ದಗಳ ಹೊರತು ಉಳಿದ ಕಡೆಗೆಲ್ಲ ಲೋಪಹೊಂದುವುದೆಂದೂ ಹೇಳುತ್ತಾ ಈಗಲಾದರೂ ಪ್ರಥಮಾ ವಿಭಕ್ತಿಯಲ್ಲಿ ಯಾವ ಪ್ರತ್ಯಯವೂ ಇಲ್ಲದೆ ಮಾತಿನಲ್ಲಿಯ ಬರವಣಿಗೆಯಲ್ಲಿಯೂ ಶಬ್ದಗಳನ್ನು ಇಡುತ್ತೇವೆ, ಉದಾ: 'ಸ್ವರ ಪರವಾಗುವುದು, ಬಂದನು, ಕುದುರೆ ಓಡುತ್ತದೆ, ಕಲ್ಲು ಗಟ್ಟಿಯಾಗಿದೆ' ಇತ್ಯಾದಿ. ಹೊಸಗನ್ನಡ ವ್ಯಾಕರ ಗಳಲ್ಲಿ ಹೇಳುವ 'ಉ' ಎಂಬುದು ಪ್ರತ್ಯಯವಲ್ಲ; ಹಳಗನ್ನಡ ಶಬ್ದಗಳು ಹೊಸಗ ರೂಪವನ್ನು ಹೊಂದುವಾಗ ಕೊನೆಗೆ ಬರುವ ಆಗಮವು. ರೂಢಿಯಿಂದ ಅದನ್ನ ಶಬ್ದಗಳಿಗೆ ಹಚ್ಚುತ್ತಿರುವುದರಿಂದ ಅದನ್ನೆ ಪ್ರಥಮಾವಿಭಕ್ತಿ ಪ್ರತ್ಯಯವೆಂದು ಹೇಳುತ್ತಾ

ಉಳಿದ ಶಬ್ದಗಳಲ್ಲಿ ಆಗಮುವನ್ನು ಹೇಳಿದಲ್ಲಿಯೂ ಪ್ರಕೃತ್ಯಂತ ಸ್ವರಕ್ಕೆ ಲೋಪ ಬರುವಲ್ಲಿಯೂ 'ಇಗೆ' ಪ್ರತ್ಯಯ ಬರುತ್ತದೆ. ಈ ಎರಡೂ ಕಾರ್ಯಗಳು ಆಗದಿದ್ದಲ್ಲಿ 'ಗೆ' ಪ್ರತ್ಯಯ ಬರುತ್ತದೆ.

## ನಾಮಗಳಿಗೆ ವಿಭಕ್ತಿಪ್ರತ್ಯಯಗಳನ್ನು ಹಚ್ಚುವ ನಿಯಮಗಳು.

೮೭. *ಅಕಾರಾಂತ ಪುಲ್ಲಿಂಗವೂ ಸ್ತ್ರೀಲಿಂಗವೂ-(ಅ) ಏಕವಚನ ದಲ್ಲಿ ಪ್ರಕೃತಿಪ್ರತ್ಯಯಗಳ ನಡುವೆ ನಕಾರಾಗಮವಾಗುತ್ತದೆ. (ಆ) ಬಹುವಚನ ದಲ್ಲಿ ರೇಫಾಗಮ ಇಲ್ಲವೆ 'ರುಗಳು' ಎಂಬ ಆಗಮ ಬರುತ್ತದೆ. ಮತ್ತು 'ಅಣ್ಣ, ಅಕ್ಕ' ಮೊದಲಾದ ಬಂಧುವಾಚಕಗಳಿಗೆ 'ಅಂದಿರು' ಎಂಬ ಆಗಮವು ಬರುವುದು. ಒಮ್ಮೊಮ್ಮೆ 'ಅಂದಿರುಗಳು' ಮತ್ತು 'ಗಳು' ಎಂಬ ಆಗಮಗಳೂ ಬರುವುವು.

ಉದಾ: ಪುಲ್ಲಿಂಗ—ನರ ಶಬ್ದವು: ಏಕವಚನ.

| ವಿಭಕ್ತಿ | ಪ್ರಕೃತಿ | | ಆಗಮ | | ಪ್ರತ್ಯಯ | | ವಿಭಕ್ತಿರೂಪ |
|---|---|---|---|---|---|---|---|
| ೧. | ನರ | + | ನ್ | + | ಉ | = | ನರನು. |
| ೨. | ನರ | + | ನ್ | + | ಅ | = | ನರನ. |
| | ನರ | + | ನ್ | + | ಅನ್ನು | = | ನರನನ್ನು |
| ೩. | ನರ | + | ನ್ | + | ಇಂದ | = | ನರನಿಂದ. |
| ೪. | ನರ | + | ನ್ | + | ಇಗೆ | = | ನರನಿಗೆ. |
| ೫. | ನರ | + | ನ್ | + | ಇಂದ | = | ನರನಿಂದ. |
| ೬. | ನರ | + | ನ್ | + | ಅ | = | ನರನ. |
| ೭. | ನರ | + | ನ್ | + | ಅಲ್ಲಿ | = | ನರನಲ್ಲಿ. |
| ೮. | ನರ | + | ನ್ | + | ಎ | = | ನರನೇ. |

ಪುಲ್ಲಿಂಗ—'ನರ' ಶಬ್ದ: ಬಹುವಚನ.

(೧) ನರ+ರ್+ಉ=ನರರು, ನರ+ರುಗಳ್+ಉ=ನರರುಗಳು; ಇದೇ ಪ್ರಕಾರ (೨) ನರರ, ನರರನ್ನು, ನರರುಗಳ, ನರರುಗಳನ್ನು; (೩) ನರರಿಂದ

---

* ಅಕಾರವು ಅಂತ್ಯದಲ್ಲಿ ಅಂದರೆ ಕಡೆಯಲ್ಲಿ ಇರುವ ಶಬ್ದಗಳಿಗೆ ಅಕಾರಾಂತಗಳು ಎನ್ನುವರು. ಉದಾ: ನರ, ರಾಮ, ಅಪ್ಪ, ಶಿವ ಮು. ಹೀಗೇ ಇಕಾರಾಂತ ಉಕಾರಾಂತ ಮುಂತಾದವುಗಳನ್ನು ತಿಳಿಯಬೇಕು.

ನರರುಗಳಿಂದ; (೪) ನರರಿಗೆ, ನರರುಗಳಿಗೆ; (೫) ನರರಿಂದ, ನರರುಗಳಿಂದ; (೬)ನ ನರರುಗಳ, (೭) ನರರಲ್ಲಿ, ನರರುಗಳಲ್ಲಿ; (೮) ನರರೇ, ನರರುಗಳೇ, ನರ ನರರುಗಳಿರಾ.

## ಸ್ತ್ರೀಲಿಂಗ—ಅಕ್ಕ ಶಬ್ದವು.

ಏಕವಚನ: (೧) ಅಕ್ಕ+ನ್+ಉ=ಅಕ್ಕನು; ಇದೇ ಮೇರೆಗೆ (೨) ಅಕ್ಕನು ಅಕ್ಕನನ್ನು; (೩) ಅಕ್ಕನಿಂದ; (೪) ಅಕ್ಕನಿಗೆ; (೫) ಅಕ್ಕನಿಂದ; (೬) ಅಕ್ಕ (೭) ಅಕ್ಕನಲ್ಲಿ; (೮) ಅಕ್ಕನೇ.

ಬಹುವಚನ; (೧) ಅಕ್ಕ+ಅಂದಿರ್+ಉ=ಅಕ್ಕಂದಿರು, ಅಕ್ಕ+ಅಂದಿರುಗಳ್+ ಉ=ಅಕ್ಕಂದಿರುಗಳು, ಅಕ್ಕ+ಗಳ್+ಉ=ಅಕ್ಕಗಳು; ಹೀಗೇ ಮುಂದೆ. ( ಅಕ್ಕಂದಿರ, ಅಕ್ಕಂದಿರನ್ನು, ಅಕ್ಕಂದಿರುಗಳ, ಅಕ್ಕಂದಿರುಗಳನ್ನು, ಅಕ್ಕಗಳ; ಅ) ಳನ್ನು; (೩) ಅಕ್ಕಂದಿರಿಂದ, ಅಕ್ಕಂದಿರುಗಳಿಂದ. ಅಕ್ಕಗಳಿಂದ ಮು.

ಅಪವಾದ (೧)—ಮಗ* ಮುಂತಾದ ಪುಂಸ್ತ್ರೀಲಿಂಗಗಳಲ್ಲಿ ನಡೆಯು ಅಕಾರಾಂತ ಶಬ್ದಗಳಿಗೂ, ಅನ್ಯದೇಶೀಯ ಅಂಕಿತನಾಮಗಳಾದ ಅಕಾರಾಂ ಶಬ್ದಗಳಿಗೂ ಸ್ತ್ರೀಲಿಂಗದಲ್ಲಿ ಳಕಾರಾಗಮವಾಗುವುದು.

ಉದಾ: (೧) ಮಗಳು, (೨) ಮಗಳ, ಮಗಳನ್ನು, (೩) ಮಗಳಿಂದ ಇತ್ಯಾ ಇದರಂತೆ 'ಮನುಷ್ಯ, ಶಿಷ್ಯ, ಆರ್ಯ' ಮುಂತಾದ ಶಬ್ದಗಳು ನಡೆಯುವವು.

ಅನ್ಯದೇಶೀಯಕ್ಕೆ—(೧) ಎಲಿಜಾಬೆಥಳು, (೨) ಎಲಿಜಾಬೆಥಳ, ಎಲಿಜಾ ಳನ್ನು, (೩) ಎಲಿಜಾಬೆಥಳಿಂದ ಇತ್ಯಾದಿ.

ಅಪವಾದ (೨)—'ಗಂಡ' ಶಬ್ದಕ್ಕೆ ಗಳು' ಆಗಮವಾಗುವು 'ಅಂದಿರು ಅಂದಿರುಗಳು, ಅರು' ಆಗಮಗಳಲ್ಲಿ ಒಂದು ಬರುವುದು.

ಉದಾ: ಗಂಡಂದಿರು, ಗಂಡಂದಿರುಗಳು, ಗಂಡರು ಮು. 'ಮಗ' ಶಬ್ದದ ವಚನಗಳು 'ಮಕ್ಕಳು, ಮಕ್ಕಳನ್ನು' ಮುಂತಾಗಿ ಆಗುತ್ತವೆ.

### ೮೮. ಅಕಾರಾಂತ ನಪುಂಸಕ ಲಿಂಗವು:—

(ಅ) ಏಕವಚನದಲ್ಲಿ ಪ್ರಥಮಾ ದ್ವಿತೀಯಾ ಸಂಬೋಧನಗಳಲ್ಲಿ ಪ್ರ ಪ್ರತ್ಯಯಗಳ ನಡುವೆ ವಕಾರಾಗಮವಾಗುತ್ತದೆ. ತೃತೀಯಾ ಪಂಚ ಷಷ್ಠೀ ಸಪ್ತಮಿಗಳಲ್ಲಿ ದಕಾರಾಗಮವಾಗುತ್ತದೆ. ಚತುರ್ಥಿಗೆ ಆಗಮ

(ಆ) ಬಹುವಚನದಲ್ಲಿ ಎಲ್ಲ ವಿಭಕ್ತಿಗಳಿಗೆ 'ಗಳು' ಆಗಮವಾಗು



* ಶಬ್ದಾನುಶಾಸನ ಸೂತ್ರ ೧೮೬.

ಉದಾ: 'ಮರ' ಶಬ್ದವು.

ಏಕವಚನ: (೧) ಮರ + ವ್ + ಉ = ಮರವು; (೨) ಮರ + ವ್ + ಅ = ಮರವ, ಮರ + ವ್ + ಅನ್ನು = ಮರವನ್ನು; (೩) ಮರ + ದ್ + ಇಂದ = ಮರದಿಂದ; (೪) ಮರ + ಕ್ಕೆ = ಮರಕ್ಕೆ; (೫) ಮರದಿಂದ; (೬) ಮರದ; (೭) ಮರದಲ್ಲಿ; (೮) ಮರವೇ.

ಬಹುವಚನ: (೧) ಮರ + ಗಳ್ + ಉ = ಮರಗಳು; (೨) ಮರಗಳ, ಮರಗಳನ್ನು; (೩) ಮರಗಳಿಂದ; (೪) ಮರಗಳಿಗೆ; (೫) ಮರಗಳಿಂದ; (೬) ಮರಗಳ; (೭) ಮರಗಳಲ್ಲಿ; (೮) ಮರಗಳೇ.

ಅಪವಾದ—'ಕೋಡಗ, ಮಂಗ, ಹಂಗ, ಕೋಣ, ತೋಳ, ಬೆಳವ, ...ಗರುಡ' ಮುಂತಾದ ಕೆಲವು ಶಬ್ದಗಳಿಗೆ ಏಕವಚನದಲ್ಲಿ ನಕಾರಾಗಮವಾಗುತ್ತದೆ.

ಏಕವಚನ: (೧) ಮಂಗನು; (೨) ಮಂಗನ, ಮಂಗನನ್ನು; (೩) ಮಂಗನಿಂದ; (೪) ಮಂಗನಿಗೆ; (೫) ಮಂಗನಿಂದ; (೬) ಮಂಗನ; (೭) ಮಂಗನಲ್ಲಿ; (೮) ಮಂಗನೇ.

ಬಹುವಚನ: (೧) ಮಂಗಗಳು; (೨) ಮಂಗಗಳನ್ನು; (೩) ಮಂಗಗಳಿಂದ ಮು.

೮೯. **ಆಕಾರಾಂತ* ಶಬ್ದಗಳು**: ಆಕಾರಾಂತ ಶಬ್ದಗಳು ನಪುಂಸಕ ...ವಾದರೆ ಆಕಾರಾಂತ ನಪುಂಸಕಲಿಂಗದ ಸಾಮಾನ್ಯ ವಿಭಕ್ತಿ ನಿಯಮದಂತೆ ...ಯುತ್ತವೆ. ಪುಲ್ಲಿಂಗ ಅಥವಾ ಸ್ತ್ರೀಲಿಂಗವಾದರೆ ಏಕವಚನದಲ್ಲಿ ಅಕಾ...ರಾಂತ ಪುಲ್ಲಿಂಗದ ಅಥವಾ ಸ್ತ್ರೀಲಿಂಗದ ನಿಯಮದಂತೆಯೂ ಬಹುವಚನ... ಆಕಾರಾಂತ ನಪುಂಸಕಲಿಂಗದ ಬಹುವಚನದ ನಿಯಮದಂತೆಯೂ ...ಯುತ್ತವೆ. ಉದಾ:

ನಪುಂಸಕಲಿಂಗ—'ಜ್ಯಾ' ಶಬ್ದವು.

ಏಕವಚನವು: (೧) ಜ್ಯಾವು; (೨) ಜ್ಯಾವ, ಜ್ಯಾವನ್ನು; (೩) ಜ್ಯಾದಿಂದ; (೪) ...ಕ್ಕೆ; (೫) ಜ್ಯಾದಿಂದ; (೬) ಜ್ಯಾದ; (೭) ಜ್ಯಾದಲ್ಲಿ; (೮) ಜ್ಯಾವೇ.

ಬಹುವಚನವು: (೧) ಜ್ಯಾಗಳು; (೨) ಜ್ಯಾಗಳ, ಜ್ಯಾಗಳನ್ನು; (೩) ಜ್ಯಾಗ...ದ; (೪) ಜ್ಯಾಗಳಿಗೆ; (೫) ಜ್ಯಾಗಳಿಂದ; (೬) ಜ್ಯಾಗಳ; (೭) ಜ್ಯಾಗಳಲ್ಲಿ; (೮) ...ಗಳೇ, ಜ್ಯಾಗಳಿರಾ.

---

* ದೀರ್ಘಸ್ವರಾಂತನಾಮಗಳು ಕನ್ನಡದಲ್ಲಿಲ್ಲ. ಆದರೆ ಸಂಸ್ಕೃತ ಮುಂತಾದ ಪರ... ಪ್ರಕೃತಿಗಳಿಂದ ಕನ್ನಡದಲ್ಲಿ ಸೇರಿದ ಕೆಲವು ಶಬ್ದಗಳು ದೀರ್ಘಸ್ವರಾಂತಗಳಾಗಿರುತ್ತವೆ. ...ದಾ: ಜ್ಯಾ, ತ್ರಿಜ್ಯಾ, ಗಯಾ, ವಿಕ್ಟೋರಿಯಾ, ಮುಲ್ಲಾ, ಸ್ತ್ರೀ, ಗ್ಯಾಲಿಲಿಯೋ, ...ನೀಯೋ. ಇಂತಹ ಅನ್ಯಭಾಷಾ ಶಬ್ದಗಳನ್ನು ಉಪಯೋಗಿಸುವಾಗ ಅವಕ್ಕೆ ಪ್ರತ್ಯಯ ...ಗುತ್ತಿ ಹಚ್ಚದೆ ಅವುಗಳ ಮುಂದೆ 'ಎಂಬವನು' 'ಎಂಬವಳು' ಮುಂತಾದ ಶಬ್ದಗಳನ್ನು ... ಅವುಗಳಿಗೆ ಪ್ರತ್ಯಯಗಳನ್ನು ಹಚ್ಚುವುದೂ ರೂಢಿಯಲ್ಲಿದೆ. ಉದಾ: 'ವಿಕ್ಟೋ... ಎಂಬವಳಿಗೆ' ಇತ್ಯಾದಿ.

### ಪುಲ್ಲಿಂಗ—ಮುಲ್ಲಾ

ಏಕವಚನ: (೧) ಮುಲ್ಲಾನು; (೨) ಮುಲ್ಲಾನ, ಮುಲ್ಲಾನನ್ನು; (೩) ಮು ನಿಂದ; (೪) ಮುಲ್ಲಾನಿಗೆ; (೫) ಮುಲ್ಲಾನಿಂದ; (೬) ಮುಲ್ಲಾನ; (೭) ಮುಲ್ಲಾ (೮) ಮುಲ್ಲಾನೇ.

ಬಹುವಚನ: (೧) ಮುಲ್ಲಾಗಳು; (೨) ಮುಲ್ಲಾಗಳ, ಮುಲ್ಲಾಗ (೩) ಮುಲ್ಲಾಗಳಿಂದ; (೪) ಮುಲ್ಲಾಗಳಿಗೆ; (೫) ಮುಲ್ಲಾಗಳಿಂದ; (೬) ಮುಲ್ಲಾ (೭) ಮುಲ್ಲಾಗಳಲ್ಲಿ; (೮) ಮುಲ್ಲಾಗಳೇ, ಮುಲ್ಲಾಗಳಿರಾ.

೯೦. ತಾಲವ್ಯಸ್ವರಾಂತ (ಇ, ಈ, ಎ, ಏ, ಐಕಾರಾಂತ) ಶಬ್ದಗ ಏಕವಚನದಲ್ಲಿ ಚತುರ್ಥಿಯ ಹೊರತು ಉಳಿದ ವಿಭಕ್ತಿಗಳಿಗೆ ಯಕಾರಾ ವಾಗುತ್ತದೆ. ಬಹುವಚನದಲ್ಲಿ 'ಗಳು' ಆಗಮವಾಗುತ್ತದೆ.

ಉದಾ: 'ಕಲಿ' ಶಬ್ದವು,

ಏಕವಚನ: (೧) ಕಲಿ + ಯ್ + ಉ = ಕಲಿಯು; (೨) ಕಲಿಯ, ಕಲಿಯ (೩) ಕಲಿಯಿಂದ; (೪) ಕಲಿಗೆ; (೫) ಕಲಿಯಿಂದ; (೬) ಕಲಿಯ; (೭) ಕಲಿಯ (೮) ಕಲಿಯೇ.

ಇದೇ ಪ್ರಕಾರ, ಸ್ತ್ರೀ, ತಂದೆ, ಏ, ರೈ ಮುಂತಾದ ಶಬ್ದಗಳನ್ನು ನಡಿಸಿರಿ.

ಬಹುವಚನ: (೧) ಕಲಿಗಳು; (೨) ಕಲಿಗಳ, ಕಲಿಗಳನ್ನು; (೩) ಕಲಿಗ (೪) ಕಲಿಗಳಿಗೆ; (೫) ಕಲಿಗಳಿಂದ; (೬) ಕಲಿಗಳ; (೭) ಕಲಿಗಳಲ್ಲಿ; (೮) ಕಲಿ ಕಲಿಗಳಿರಾ.

ಇದೇ ಪ್ರಕಾರ, ಕುರಿ, ದೊರೆ, ರೈ ಮುಂತಾದವುಗಳನ್ನು ನಡಿಸಿರಿ.

ಬಹುವಚನದಲ್ಲಿ ಸ್ತ್ರೀಲಿಂಗಗಳಿಗೆ 'ಅರು' ಆಗಮವಾಗುವುದು. 'ತಾಯಿ' ಶಬ್ದಕ್ಕೆ ವಿಕಲ್ಪದಿಂದ 'ಗಳು' ಆಗಮವೂ ಧನಿಶಬ್ದಕ್ಕೆ ' ಆಗಮವೂ ಆಗುತ್ತದೆ. 'ಹೆಂಡತಿ' ಶಬ್ದದ ಬಹುವಚನದ ರೂಪ 'ಹೆಂಡತಿಯರು' ಎಂದುಆಗದೆ (೧) 'ಹೆಂಡಿರು, (೨) ಹೆಂಡಿರನ್ನು, ಹೆಂಡಿ ಮುಂತಾದುವು ಆಗುತ್ತವೆ. ಇದಲ್ಲದೆ ಸಾಮಾನ್ಯ ಪ್ರಯೋಗದಿಂದ ಬ ವಾಚಕಗಳಿಗೆ 'ಅಂದಿರ್' ಆಗಮವೂ ಬರುತ್ತದೆ. ಉದಾ:

ಸ್ತ್ರೀಲಿಂಗ—'ಮಡದಿ' ಶಬ್ದ.

(೧) ಮಡದಿ + ಉ = ಮಡದಿ + ಅರ್+ಉ = ಮಡದಿ + ಯ್* + ಅರ್ + ಮಡದಿಯರು; (೨) ಮಡದಿಯರ, ಮಡದಿಯರನ್ನು; (೩) ಮಡದಿಯರಿಂದ;



* ಸಂಧಿಯ ನಿಯಮವನ್ನು ನೋಡು.

ಮಡದಿಯರಿಗೆ; (೫) ಮಡದಿಯರಿಂದ; (೬) ಮಡದಿಯರ; (೭) ಮಡದಿಯರಲ್ಲಿ; (೮) ಮಡದಿಯರೇ, ಮಡದಿಯರಿರಾ.

## ಸ್ತ್ರೀಲಿಂಗ ಬಂಧುವಾಚಕ—'ತಾಯಿ' ಶಬ್ದ.

(೧) ತಾಯಿಗಳು, ತಾಯಿಯರು, ತಾಯಿಯಂದಿರು ಮು.

## ಪುಲ್ಲಿಂಗ—'ಧನಿ' ಶಬ್ದ.

(೧) ಧನಿಯರು; (೨) ಧನಿಯರನ್ನು; (೩) ಧನಿಯರಿಂದ; (೪) ಧನಿಯರಿಗೆ ಮು.

## ೯೧. ಉ ಊ ಋ ಒ ಓ ಔಕಾರಾಂತ ಶಬ್ದಗಳು.

(ಅ) ಏಕವಚನದಲ್ಲಿ ತೃತೀಯಾ ಪಂಚಮೀ ಷಷ್ಠೀ ಸಪ್ತಮೀ ವಿಭಕ್ತಿಗಳಿಗೆ 'ಇನ್' ಆಗಮವಾಗುತ್ತದೆ. ಆದರೆ 'ಹಗಲು ಇರುಳು' ಶಬ್ದಗಳನ್ನು ಬಿಟ್ಟು, ಹಳಗನ್ನಡ ವ್ಯಂಜನಾಂತ ಶಬ್ದಗಳ ಕಡೆಯ ವ್ಯಂಜನದಲ್ಲಿ ಉಕಾರ ಸೇರಿ ಉಕಾರಾಂತಗಳಾದ ಶಬ್ದಗಳಿಗೆ 'ಇನ್' ಆಗಮವನ್ನು ಹಚ್ಚಬಾರದು.* ವಕಾರಾಗಮ ಬರುವಲ್ಲಿಯೂ ತೃತೀಯಾ ವಿಭಕ್ತಿಯಲ್ಲಿಯೂ 'ಹಗಲು ಇರುಳು' ಶಬ್ದಗಳಲ್ಲಿಯೂ ಇನಾಗಮವು ವಿಕಲ್ಪವಾಗಿ ಬರುತ್ತದೆ. ಉದಾ.

## ನಿತ್ಯ ಉಕಾರಾಂತ† 'ಹಸು' ಶಬ್ದ.

(೧) ಹಸು + ಉ = ಹಸು + ವ್ + ಉ = ಹಸುವು; (೨) ಹಸುವ, ಹಸುವನ್ನು; (೩) ಹಸು + ವ್ + ಇನ್ + ಇಂದ = ಹಸುವಿನಿಂದ, ಹಸು + ವ್ + ಇಂದ = ಹಸುವಿಂದ; (೪) ಹಸುವಿಗೆ; (೫) ಹಸುವಿಂದ, ಹಸುವಿನಿಂದ; (೬) ಹಸುವ, ಹಸುವಿನ; (೭) ಹಸುವಲ್ಲಿ, ಹಸುವಿನಲ್ಲಿ; (೮) ಹಸುವೇ.

ಹೀಗೆ 'ಕರು, ಗುರು, ಕರ್ತೃ, ಭೂ, ಗೋ, ಗ್ಲೌ' ಮುಂತಾದುವುಗಳು ನಡೆಯುವುವು.

## ಅನಿತ್ಯ ಉಕಾರಾಂತ 'ಮಾತು' ಶಬ್ದ.

(೧) ಮಾತು + ಉ = ಮಾತು; (೨) ಮಾತನ್ನು; (೩) ಮಾತಿಂದ, ಮಾತಿನಿಂದ; (೪) ಮಾತಿಗೆ; (೫) ಮಾತಿನಿಂದ; (೬) ಮಾತಿನ; (೭) ಮಾತಿನಲ್ಲಿ; (೮) ಮಾತೇ.

ಹೀಗೆ ಆಡು, ಉಕ್ಕು, ಉಗ್ಗು, ಮುಂತಾದುವು ನಡೆಯುವುವು.

## 'ಹಗಲು' ಶಬ್ದವು (ಹಳಗನ್ನಡದಲ್ಲಿ ವ್ಯಂಜನಾಂತ).

(೧) ಹಗಲು; (೨) ಹಗಲನ್ನು; (೩) ಹಗಲಿಂದ, ಹಗಲಿನಿಂದ; (೪) ಹಗಲಿಗೆ; (೫) ಹಗಲಿಂದ, ಹಗಲಿನಿಂದ; (೬) ಹಗಲಿನ, ಹಗಲ; (೭) ಹಗಲಿನಲ್ಲಿ, ಹಗಲಲ್ಲಿ; (೮) ಹಗಲೇ.

ಹೀಗೆ 'ಇರುಳು' ಶಬ್ದವು ನಡೆಯುವುದು.

---

* ಶಬ್ದಮಣಿದರ್ಪಣಸೂತ್ರ ೧೨೪, ೧೧೯. † ಸಂಧಿಯ ೩೬ನೆಯ ಪ್ರಕರಣವನ್ನು ನೋಡು.

ಇನಾಗಮವಿಲ್ಲದ 'ಊರು' ಶಬ್ದವು (ಹಳಗನ್ನಡದಲ್ಲಿ ವ್ಯಂಜನಾಂತ)
(೧) ಊರು; (೨) ಊರನ್ನು, ಊರ; (೩) ಊರಿಂದ; (೪) ಊರಿಗೆ; ಊರಿಂದ; (೬) ಊರ; (೭) ಊರಲ್ಲಿ; (೮) ಊರೇ.

ಹೀಗೆ 'ಹಾಲು, ಕಾಳು, ನೀರು' ಮುಂತಾದುವು ನಡೆಯುವುವು.

(ಆ) ಬಹುವಚನದಲ್ಲಿ 'ಗಳು' ಆಗಮವಾಗುತ್ತದೆ. ಉದಾ:

'ಹಸು' ಶಬ್ದವು.

(೧) ಹಸುಗಳು; (೨) ಹಸುಗಳನ್ನು; (೩) ಹಸುಗಳಿಂದ; (೪) ಹಸುಗಳಿಗೆ; ಹಸುಗಳಿಂದ; (೬) ಹಸುಗಳ; (೭) ಹಸುಗಳಲ್ಲಿ; (೮) ಹಸುಗಳೇ, ಹಸುಗಳಿರಾ.

ಹೀಗೆ ಕರು, ಗುರು, ಭೂ, ಕರ್ತೃ, ಗೋ, ಗ್ಲೌ, ನೌ ಮುಂತಾದ ಶಬ್ದ ನಡೆಯುವುವು.

ಅಪವಾದ—ಗಂಡುಸು, ಹೆಂಗುಸು ಶಬ್ದಗಳಿಗೆ 'ಅರ್' ಆಗಮವಾಗುತ್ತ
ಉದಾ: (೧) ಗಂಡುಸರು; (೨) ಗಂಡುಸರನ್ನು; (೩) ಗಂಡುಸರಿಂದ ಮು.

೯೨. ವ್ಯಂಜನಾಂತಗಳು—ಹೊಸಗನ್ನಡದಲ್ಲಿ 'ಕಯ್, ಮೆಯ್ ನೆಯ್, ಸುಯ್' ಈ ನಾಲ್ಕು ವ್ಯಂಜನಾಂತ ಶಬ್ದಗಳಿವೆ. ಇವಕ್ಕೆ ಏಕವ ದಲ್ಲಿ ಹಿಂದೆ ಹೇಳಿದ ೪೧ನೆಯ ಸಂಧಿ ನಿಯಮದಂತೆ ವಿಭಕ್ತಿಪ್ರತ್ಯಯ ಹತ್ತುವುವು. ಚತುರ್ಥಿಗೆ 'ಗೆ' ಪ್ರತ್ಯಯ ಬರುವುದು. ಬಹುವಚನ 'ಗಳು' ಆಗಮವಾಗುವುದು..

ಉದಾ:

'ಕಯ್' ಶಬ್ದ.

ಏಕವಚನ— (೧) ಕಯ್ + ಉ = ಕಯ್ + ಯ್ + ಉ = ಕಯ್ಯು; ಕಯ್ಯನ್ನು; (೩) ಕಯ್ಯಿಂದ; (೪) ಕಯ್ಗೆ; (೫) ಕಯ್ಯಿಂದ; (೬) ಕಯ್ಯ; (೭) ಕಯ (೮) ಕಯ್ಯೇ.

ಬಹುವಚನ— (೧) ಕಯ್ಗಳು; (೨) ಕಯ್ಗಳನ್ನು; (೩) ಕಯ್ಗಳಿಂದ ಕಯ್ಗಳಿಗೆ; (೫) ಕಯ್ಗಳಿಂದ; (೬) ಕಯ್ಗಳ; (೭) ಕಯ್ಗಳಲ್ಲಿ; (೮) ಕಯ್ ಕಯ್ಗಳಿರಾ.

---

* 'ಕಯ್, ಮೆಯ್' ಇವುಗಳನ್ನು ಐಕಾರಾಂತಗಳೆಂದೂ ತಿಳಿದುಕೊಳ್ಳಬಹು ಉದಾ: ಕೈ, ಮೈ. ಆಗ ಇವುಗಳನ್ನು 'ಕೈ (ಕೈಯು), ಕೈಯನ್ನು, ಕೈಯಿಂದ, ಇತ್ಯಾದಿಯಾಗಿ ನಡೆಸುವರು.

೯೩. ರೂಢಿಯಲ್ಲಿರುವ ಕೆಲವು ವಿಭಕ್ತಿರೂಪಗಳ ವಿವರವು:

(ಅ) ಹಿರಿಯರಿಗೂ ಮಾನ್ಯರಿಗೂ ಅಧಿಕಾರಿಗಳಿಗೂ ಸನ್ಮಾನ ಕೊಡುವುದಾದರೆ, ನಾಮಗಳ ಷಷ್ಠೀರೂಪಗಳಿಗೆ 'ಅವ' ಎಂಬ ಸರ್ವನಾಮದ ಬಹುವಚನದ ರೂಪಗಳನ್ನು ಹಚ್ಚುವುದುಂಟು.

ಉದಾ: ಅಪ್ಪನವರು, ಅವ್ವನವರು, ಶ್ರೀಗಳವರು, ದೊರೆಗಳವರು, ಸಾಹೇಬರವರು ಮು.

ಇಂತಹ ನಾಮಗಳ ಬಹುವಚನಗಳಾದರೂ ಸನ್ಮಾನಾರ್ಥದಲ್ಲಿ ಬರುವುವು.

ಉದಾ: ರಾಯರು, ಪ್ರಭುಗಳು, ದೊರೆಗಳು, ಸಾಹೇಬರು, ತಂದೆಗಳು, ತಾಯಿಗಳು, ಸ್ವಾಮಿಗಳು ಮು.

(ಆ) ರೂಢಿಯಲ್ಲಿ ಪುಲ್ಲಿಂಗ ಸ್ತ್ರೀಲಿಂಗಗಳ ಪ್ರಥಮೆಯ ಏಕವಚನದ ವಿಭಕ್ತಿ ಪ್ರತ್ಯಯಕ್ಕೂ ನಪುಂಸಕಲಿಂಗದ ಉಭಯವಚನಗಳ ವಿಭಕ್ತಿಪ್ರತ್ಯಯಗಳಿಗೂ ವಿಕಲ್ಪದಿಂದ ಲೋಪವಾಗುವುದು.

ಉದಾ: ಮಗನು ಹುಟ್ಟಿದನು = ಮಗ ಹುಟ್ಟಿದನು; ಬಾದಶಹಾನು ಹೇಳಿದನು = ಬಾದಶಹಾ ಹೇಳಿದನು; ಅವ್ವನು ಕೊಟ್ಟಳು = ಅವ್ವ ಕೊಟ್ಟಳು; ಗುರುವು ಹೇಳಿದನು = ಗುರು ಹೇಳಿದನು; ಗಿಡವು ಅದೆ = ಗಿಡ ಅದೆ; ಗಿಡಗಳು ಇರುವುವು = ಗಿಡ ಇರುವುವು; ದನಗಳು ಬಂದವು = ದನ ಬಂದವು ಮು.

(ಇ) ಪದ್ಯದಲ್ಲಿ ದ್ವಿತೀಯಾ ಚತುರ್ಥಿ ಸಪ್ತಮೀ ವಿಭಕ್ತಿಗಳ ಕಡೆಯ ದ್ವಿತ್ವಕ್ಕೆ ವಿಕಲ್ಪವಾಗಿ ಲೋಪವಾಗುತ್ತದೆ. ಉದಾ:

ದ್ವಿತೀಯೆಗೆ—ಕಥೆಯನ್ನು = ಕಥೆಯನು; ಸಂವಾದವನ್ನು = ಸಂವಾದವನು ಮು.

ಚತುರ್ಥಿಗೆ—ವಚನಕ್ಕೆ = ವಚನಕೆ, ಅದಕ್ಕೆ = ಅದಕೆ ಮು.

ಸಪ್ತಮಿಗೆ—ಶಾಸ್ತ್ರೋತ್ಕರಗಳಲ್ಲಿ = ಶಾಸ್ತ್ರೋತ್ಕರಗಳಲಿ; ಮನೆಯಲ್ಲಿ = ಮನೆಯಲಿ; ತಾಪದಲ್ಲಿ = ತಾಪದಲಿ ಮು.

(ಈ) ಸಪ್ತಮಿಯ 'ಅಲ್ಲಿ' ಪ್ರತ್ಯಯದ ಸ್ಥಳದಲ್ಲಿ 'ಒಳಗೆ' ಪ್ರತ್ಯಯವು ವಿಕಲ್ಪದಿಂದ ಬರುತ್ತದೆ.

ಉದಾ: ಓಲಗದಲ್ಲಿ = ಓಲಗದೊಳಗೆ; ಲೋಕದಲ್ಲಿ = ಲೋಕದೊಳಗೆ ಮು.

(ಉ) ಸಂಬೋಧನವಿಭಕ್ತಿಯ ಅಂತ್ಯಸ್ವರವು ವಿಕಲ್ಪದಿಂದ ಹ್ರಸ್ವವಾಗುವುದು; ಇದಲ್ಲದೆ ಸಂಬೋಧನೆಯ ಪ್ರತ್ಯಯಕ್ಕೆ ವಿಕಲ್ಪದಿಂದ ಲೋಪಬರುವುದು; ಲೋಪವಾದ ಮೇಲೆ ಉಳಿದ ಮೂಲ ಶಬ್ದದ ಅಂತ್ಯಸ್ವರವು ವಿಕಲ್ಪದಿಂದ ದೀರ್ಘವಾಗುವುದು.

ಉದಾ: ರಾಮನೇ = ರಾಮನೆ; ಅರಸುಗಳೇ = ಅರಸುಗಳೆ; ವನಸ್ಥಳಗಳಿರಾ = ವನಸ್ಥಳಗಳಿರ; ಅರಸ = ಅರಸಾ; ಇಂದುಮುಖಿ = ಇಂದುಮುಖೀ; ಗುರು=ಗುರೂ ಮು.

## ಸರ್ವನಾಮಪ್ರಕರಣ

೯೪. ವಾಕ್ಯದೊಳಗೆ ನಾಮಪದದ ಸ್ಥಳದಲ್ಲಿ ಬರುವ ಶಬ್ದವು ಸ ನಾಮವೆನಿಸುತ್ತದೆ.

ಉದಾ: ಬೆಂಕಿಯಲ್ಲಿ ನೀರು ಬಿದ್ದುದರಿಂದ ಅದು ನಂದಿಹೋಯಿತು. ಈ ವ ದಲ್ಲಿ 'ಅದು' ಎಂಬುದು ಬೆಂಕಿಯೆಂಬ ನಾಮದ ಸ್ಥಳದಲ್ಲಿ ಬಂದಿದೆ. ಆದಕಾರಣ 'ಅ ಎಂಬುದು ಸರ್ವನಾಮವೆನಿಸುತ್ತದೆ. ಇದೇ ಪ್ರಕಾರ ಆತನು, ಅವನು, ಈತನು, ಇ ಈಕೆ, ಇವಳು, ನಾನು, ನೀನು ಮುಂತಾದುವು ಸರ್ವನಾಮಗಳಾಗಿವೆ.

೯೫. ಸರ್ವನಾಮಗಳು ಮೂರು ವಿಧವಾಗಿವೆ. ಯಾವುವೆಂದರೆ: (೧) ಉತ್ತಮಪುರುಷ, (೨) ಮಧ್ಯಮಪುರುಷ, (೩) ಪ್ರಥಮಪುರುಷ.

ಉದಾಹರಣ:

ಉತ್ತಮಪುರುಷ—ನಾನು, ನಾವು, ಮಧ್ಯಮಪುರುಷ—ನೀನು, ನೀವು.

ಪ್ರಥಮಪುರುಷ—ಅವನು, ಅವಳು, ಅವರು, ಅದು, ಅವು, ಇವನು, ಇ ಇವರು, ಇದು, ಇವು, ಆತನು, ಆಕೆ, ಈತನು, ಈಕೆ, ತಾನು, ತಾವು.

೯೬. ಪ್ರಥಮಪುರುಷಾರ್ಥಕ ಸರ್ವನಾಮಗಳಲ್ಲಿ ಪ್ರಶ್ನಾರ್ಥ ದರ್ಶಕ, ಆತ್ಮಾರ್ಥಕಗಳೆಂಬ ಮೂರು ಮುಖ್ಯ ಭೇದಗಳೂ ಸಾಮಾ ರ್ಥಕ, ಸಂಬಂಧಾರ್ಥಕಗಳೆಂಬ ಎರಡು ಒಳಭೇದಗಳೂ ಉಂಟು.

೯೭. ಪ್ರಶ್ನೆ ಕೇಳುವಾಗ ಉಪಯೋಗಿಸಲ್ಪಡುವ ಸರ್ವನಾ ಪ್ರಶ್ನಾರ್ಥಕ ಸರ್ವನಾಮವೆನ್ನುವರು.

ಉದಾ: ಏನು, ಆವನು, ಯಾವನು,* ಆವಳು, ಯಾವಳು, ಆರು, ಯಾ ಆವುದು, ಯಾವುದು, ಅವವು, ಯಾವವು.

೯೮. ಏನನ್ನಾದರೂ ತೋರಿಸುವಾಗ ಉಪಯೋಗಿಸಲ್ಪಡುವ ಸ ನಾಮಕ್ಕೆ ದರ್ಶಕಸರ್ವನಾಮವೆನ್ನುವರು. ಇದು ಸಮೀಪದರ್ಶಕ, ದ ದರ್ಶಕವೆಂದು ಎರಡು ವಿಧವಾಗಿದೆ.

---

* ಆವನು, ಆವಳು, ಆರು, ಆವುದು, ಇವು ಮೂಲರೂಪಗಳು. ಇವುಗಳಲ್ಲಿ ರದೊಳಗೆ ಯಕಾರ ಕೂಡಿ, ಯಾವನು, ಯಾವಳು, ಮುಂತಾದುವುಗಳುಂಟಾ ಯಾವನು ಮುಂತಾದುವು ಸಾಮಾನ್ಯ ಪ್ರಯೋಗದ ರೂಪಗಳಾಗಿವೆ.

ಉದಾ:

ಸಮೀಪಕ್ಕೆ—ಇವನು, ಇವಳು, ಇವರು, ಈತನು, ಈಕೆ, ಇದು, ಇವು.

ದೂರದರ್ಶಕಕ್ಕೆ—ಅವನು, ಅವಳು, ಅವರು, ಆತನು, ಆಕೆ, ಅದು, ಅವು.

೯೯. ಸ್ವಂತದ ಸಲುವಾಗಿ ಉಪಯೋಗಿಸಲ್ಪಡುವ ಸರ್ವನಾಮಕ್ಕೆ ಆತ್ಮಾರ್ಥಕಸರ್ವನಾಮವೆನ್ನುವರು.

ಉದಾ: ತಾನು, ತಾವು.

೧೦೦. ಅನೇಕ ವಸ್ತುಗಳಲ್ಲಿ ಯಾವುದಾದರೊಂದು ಇಲ್ಲವೆ ಹಲವು ಎಂಬರ್ಥವ ಹೇಳುವ ಸರ್ವನಾಮಗಳೇ ಸಾಮಾನ್ಯಾರ್ಥಕಸರ್ವನಾಮಗಳು. ಸಾಮಾನ್ಯಾರ್ಥಕಸರ್ವನಾಮಗಳೆಂಬ ಬೇರೆ ಶಬ್ದಗಳೇನೂ ಇಲ್ಲ. ಪ್ರಶ್ನಾರ್ಥಕಸರ್ವನಾಮ, ಸಂಖ್ಯಾವಿಶೇಷಣ, 'ಬೇರೆ, ಮತ್ತು, ಇನ್ನು' ಮುಂತಾದ ಕೆಲವು ಅವ್ಯಯ ಶಬ್ದಗಳು ಒಂದಕ್ಕೊಂದು ಕೂಡುವುದರಿಂದ ಸಾಮಾನ್ಯಾರ್ಥವನ್ನು ಹೇಳುವ ಸರ್ವನಾಮಗಳಾಗುವುವು.

ಉದಾಹರಣಗಳು:

ಪ್ರಶ್ನಾರ್ಥಕಸರ್ವನಾಮಗಳಿಗೆ ಸಂಖ್ಯಾವಾಚಕವಿಶೇಷಣಗಳು ಕೂಡಿ ಆದಂತಹವು—ಯಾವನೊಬ್ಬನು, ಯಾರೊಬ್ಬರು, ಏನೊಂದು, ಯಾವಳೊಬ್ಬಳು ಮು.

ಅವ್ಯಯಗಳಿಗೆ ಸಂಖ್ಯಾವಾಚಕಗಳು ಕೂಡಿ ಆದಂತಹವು— ಮತ್ತೊಬ್ಬನು, ಇನ್ನೊಬ್ಬಳು, ಬೇರೊಂದು, ಹೀಗೊಂದು ಮು.

ಪ್ರಶ್ನಾರ್ಥಕಗಳಿಗೆ ನಿಪಾತ ಕೂಡಿ ಆದಂತಹವು—ಯಾರೋ, ಏನೋ, ಯಾರೂ, ಏನೂ, ಯಾವಳೂ.

ಸಂಖ್ಯಾವಾಚಕಕ್ಕೆ ಸಂಖ್ಯಾವಾಚಕವೇ ಕೂಡಿ ಆದಂತಹವು—ಒಬ್ಬಾನೊಬ್ಬನು, ಒಬ್ಬಾನೊಬ್ಬಳು, ಒಂದಾನೊಂದು ಮು.

೧೦೧. ಪ್ರಶ್ನಾರ್ಥಕ, ದರ್ಶಕ ಸರ್ವನಾಮಗಳೆರಡೂ ಒಂದನ್ನೊಂದು ಅಗಲದಂತಹ ಸಂಬಂಧದಿಂದ ವಾಕ್ಯದಲ್ಲಿ ಪ್ರಯೋಗಿಸಲ್ಪಟ್ಟರೆ, ಅವಕ್ಕೆ ಸಂಬಂಧಾರ್ಥಕಸರ್ವನಾಮಗಳೆಂಬ ಹೆಸರು ಬರುತ್ತದೆ.

ಉದಾ: ಯಾವನು ಮಾಡುವನೋ ಅವನು ಉಣ್ಣುವನು. ಈ ವಾಕ್ಯದಲ್ಲಿ 'ಯಾವನು' 'ಅವನು' ಎಂಬಿವು ಸಂಬಂಧಾರ್ಥಕಸರ್ವನಾಮಗಳು.

೧೦೨. ಸರ್ವನಾಮಗಳಿಗೆ ನಾಮಗಳಂತೆ ಲಿಂಗ, ವಚನ, ವಿಭಕ್ತಿಗಳೆಂಬ ಮೂರು ಲಕ್ಷಣಗಳುಂಟು; ಆದರೆ ಉತ್ತಮ ಮಧ್ಯಮ ಪುರುಷಾರ್ಥಕಸರ್ವ

ನಾಮಗಳಿಗೂ ಆತ್ಮಾರ್ಥಕಸರ್ವನಾಮಕ್ಕೂ ಲಿಂಗಭೇದವಿಲ್ಲ. ಸರ್ವನಾಮಗಳಿಗೆ ಸಂಬೋಧನ ವಿಭಕ್ತಿ ರೂಢವಾಗಿಲ್ಲ.

ಉದಾಹರಣಗಳು:

ಲಿಂಗಭೇದಕ್ಕೆ—ಅವನು ಗಂಡುಸು, ಅವಳು ಹೆಂಗುಸು, ಅದು ಕಲ್ಲು.

ಲಿಂಗಭೇದವಿಲ್ಲದವಕ್ಕೆ—ನಾನು ಗಂಡುಸು, ನಾನು ಹೆಂಗುಸು, ನಾನು ಕಲ್ಲು; ನೀನು ಗಂಡುಸು, ನೀನು ಹೆಂಗುಸು, ನೀನು ಕಲ್ಲು; ತಾನು ಗಂಡುಸು, ತಾನು ಹೆಂಗುಸು, ತಾನು ಕಲ್ಲು.

ವಚನಭೇದಕ್ಕೆ—ಅವನು ಗಂಡುಸು, ಅವರು ಗಂಡುಸರು; ಅವಳು ಹೆಂಗುಸು, ಅವರು ಹೆಂಗುಸರು; ಅದು ಕಲ್ಲು, ಅವು ಕಲ್ಲುಗಳು; ನಾನು ಗಂಡುಸು, ನಾವು ಗಂಡುಸರು.

## ಸರ್ವನಾಮಗಳ ವಿಭಕ್ತಿರೂಪಗಳು.

೧೦೩. ಅಕಾರಾಂತ ಪುಲ್ಲಿಂಗವೂ ಸ್ತ್ರೀಲಿಂಗವೂ:

ಏಕವಚನದಲ್ಲಿ ಪುಲ್ಲಿಂಗಕ್ಕೆ ನಕಾರಾಗಮವೂ ಸ್ತ್ರೀಲಿಂಗಕ್ಕೆ ಳಕಾರಾಗಮವೂ ಆಗುವುದು; ಬಹುವಚನದಲ್ಲಿ ಎರಡೂ ಲಿಂಗಗಳಿಗೆ ರೇಫಾಗಮವು ಇಲ್ಲವೆ 'ರುಗಳು' ಆಗಮವು ಆಗುವುದು.

ಉದಾಹರಣಗಳು:

ಅಕಾರಾಂತ ಪುಲ್ಲಿಂಗ ಸ್ತ್ರೀಲಿಂಗದ 'ಅವ' ಶಬ್ದವು.

| ವಿಭಕ್ತಿ. | ಏಕವಚನ: ಪು. | ಸ್ತ್ರೀ. | ಬಹುವಚನ: | |
|---|---|---|---|---|
| ೧. | ಅವನು, | ಅವಳು, | ಅವರು, | ಅವರುಗಳು |
| ೨. | ಅವನನ್ನು, | ಅವಳನ್ನು, | ಅವರನ್ನು, | ಅವರುಗಳನ್ನು |
| | ಅವನ, | ಅವಳ, | ಅವರ, | ಅವರುಗಳ |
| ೩. | ಅವನಿಂದ, | ಅವಳಿಂದ, | ಅವರಿಂದ, | ಅವರುಗಳಿಂದ |
| ೪. | ಅವನಿಗೆ, | ಅವಳಿಗೆ, | ಅವರಿಗೆ, | ಅವರುಗಳಿಗೆ |
| ೫. | ಅವನಿಂದ, | ಅವಳಿಂದ, | ಅವರಿಂದ, | ಅವರುಗಳಿಂದ |
| ೬. | ಅವನ, | ಅವಳ, | ಅವರ, | ಅವರುಗಳ |
| ೭. | ಅವನಲ್ಲಿ, | ಅವಳಲ್ಲಿ, | ಅವರಲ್ಲಿ, | ಅವರುಗಳಲ್ಲಿ |



ಇದೇ ಪ್ರಕಾರ 'ಇವ' ಶಬ್ದವನ್ನು ನಡಿಸುವುದು.

## ಅಪವಾದಗಳು.

(೧) 'ಆತ, ಈತ' ಶಬ್ದಗಳು ಏಕವಚನದಲ್ಲಿ ಮಾತ್ರ 'ಅವ' ಶಬ್ದದಂತೆಯೆ ನಡೆಯುವುವು. ಅವುಗಳ ಬಹುವಚನದ ರೂಪಗಳು ಹೊಸಗನ್ನಡದಲ್ಲಿ ಇಲ್ಲ. ಕೆಲವರು 'ಅವ, ಇವ' ಶಬ್ದಗಳ ಬಹುವಚನಗಳಾದ 'ಅವರು, ಇವರು' ಎಂಬವುಗಳನ್ನು 'ಆತ, ಈತ' ಶಬ್ದಗಳ ಬಹುವಚನಗಳ ಸ್ಥಳದಲ್ಲಿ ಪ್ರಯೋಗಿಸುವರು.

(೨) 'ಯಾವ' ಶಬ್ದವು ಏಕವಚನದಲ್ಲಿ 'ಅವ' ಶಬ್ದದಂತೆ ನಡೆಯುವುದು; ಆದರೆ ಬಹುವಚನದಲ್ಲಿ ವಿಕಾರ ಹೊಂದಿ 'ಯಾರು, ಯಾರನ್ನು' ಮುಂತಾದ ರೂಪಗಳನ್ನು ಹೊಂದುವುದು.

೧೦೪. ಅನಿತ್ಯ ಉಕಾರಾಂತಗಳಾದ 'ಅದು, ಇದು, ಯಾವುದು' ಶಬ್ದಗಳು:

ಏಕವಚನದಲ್ಲಿ ತೃತೀಯಾ ಪಂಚಮೀ ಷಷ್ಠೀ ಸಪ್ತಮಿಗಳಿಗೆ 'ಅರು' ಆಗಮವಾಗುತ್ತದೆ. ಬಹುವಚನದಲ್ಲಿ ಉಪಾಂತ್ಯ ದಕಾರಕ್ಕೆ ವಕಾರಾದೇಶವಾಗುವುದು. ಬಳಿಕ ಪ್ರಥಮಾ ದ್ವಿತೀಯಾ ಚತುರ್ಥಿಗಳಿಗೆ ವಿಕಲ್ಪವಾಗಿ, ತೃತೀಯಾ ಪಂಚಮೀ ಷಷ್ಠೀ ಸಪ್ತಮಿಗಳಿಗೆ ನಿತ್ಯವಾಗಿ 'ಗಳು' ಆಗಮವಾಗುತ್ತದೆ.

ಉದಾಹರಣ—'ಅದು' ಶಬ್ದವು.

| ವಿಭಕ್ತಿ: | ಏಕವಚನ: | ಬಹುವಚನ: |
|---|---|---|
| ೧ | ಅದು | ಅವು, ಅವುಗಳು |
| ೨ | ಅದನ್ನು | ಅವನ್ನು, ಅವುಗಳನ್ನು |
| ೩ | ಅದರಿಂದ | ಅವುಗಳಿಂದ |
| ೪ | ಅದಕ್ಕೆ | ಅವಕ್ಕೆ, ಅವುಗಳಿಗೆ |
| ೫ | ಅದರಿಂದ | ಅವುಗಳಿಂದ |
| ೬ | ಅದರ | ಅವುಗಳ |
| ೭ | ಅದರಲ್ಲಿ | ಅವುಗಳಲ್ಲಿ |

೧೦೫. 'ಏನು' ಶಬ್ದವು ಏಕವಚನದಲ್ಲಿ ಮಾತ್ರ ನಡೆಯುವುದು. ಅದರ ರೂಪಗಳು ಯಾವುವೆಂದರೆ:

(೧) ಏನು; (೨) ಏನ, ಏನನ್ನು; (೩) ಏತರಿಂದ, ಯಾತರಿಂದ; (೪) ಏತಕ್ಕೆ, ಯಾತಕ್ಕೆ, ಏಕೆ, ಯಾಕೆ; (೫) ಏತರಿಂದ, ಯಾತರಿಂದ; (೬) ಏತರ, ಯಾತರ; (೭) ಏತರಲ್ಲಿ, ಯಾತರಲ್ಲಿ.

೧೦೬. ಏಕಾರಾಂತ ಸ್ತ್ರೀಲಿಂಗಗಳಾದ 'ಆಕೆ, ಈಕೆ' ಶಬ್ದಗಳು ಸಾಮಾನ್ಯ ಸಂಧಿಯ ನಿಯಮಗಳಂತೆ ಏಕವಚನದಲ್ಲಿ ನಡೆಯುವುವು. ಇವುಗಳ ಬಹುವಚನದ ರೂಪಗಳು ಹೊಸಗನ್ನಡದಲ್ಲಿ ಇಲ್ಲ.

ಉದಾಹರಣಗಳು.

(೧) ಆಕೆಯು, ಈಕೆಯು; (೨) ಆಕೆಯ, ಆಕೆಯನ್ನು; ಈಕೆಯ, ಈಕೆಯನ್ನು; (೩) ಆಕೆಯಿಂದ, ಈಕೆಯಿಂದ ಮು.

೧೦೭. 'ನಾನ್, ನೀನ್, ತಾನ್' ಶಬ್ದಗಳು:

ಎರಡೂ ವಚನಗಳಲ್ಲಿ ದ್ವಿತೀಯ ಮುಂತಾದ ವಿಭಕ್ತಿಗಳಲ್ಲಿ ಪ್ರಕೃತಿಯ ಉಪಾಂತ್ಯಸ್ವರವು ಹ್ರಸ್ವವಾಗುತ್ತದೆ. ಬಹುವಚನದಲ್ಲಿ ಪ್ರಥಮಾವಿಭಕ್ತಿಯಲ್ಲಿ ಪ್ರಕೃತಿಯ ಅಂತ್ಯವಾದ ನಕಾರಕ್ಕೆ ವಕಾರಾದೇಶವೂ, ಉಳಿದ ವಿಭಕ್ತಿಗಳಲ್ಲಿ ಮಕಾರಾದೇಶವೂ ಆಗುತ್ತದೆ. ಚತುರ್ಥಿಗೆ 'ಗೆ' ಪ್ರತ್ಯಯ ಬರುತ್ತದೆ. ಆಗ ಎರಡೂ ವಚನಗಳಲ್ಲಿ ಅಕಾರಾಗಮವಾಗುತ್ತದೆ. ದ್ವಿತೀಯಾ ತೃತೀಯಾ ಪಂಚಮೀ ಷಷ್ಠೀ ಸಪ್ತಮೀ ವಿಭಕ್ತಿಗಳ ಎರಡೂ ವಚನಗಳಲ್ಲಿ ಅಂತ್ಯವ್ಯಂಜನಕ್ಕೆ ದ್ವಿತ್ವ ಬರುತ್ತದೆ.

ಉದಾಹರಣ—'ತಾನ್' ಶಬ್ದ.

| | ಏಕವಚನ: | ಬಹುವಚನ: |
|---|---|---|
| ೧ | ತಾನು | ತಾವು |
| ೨ | ತನ್ನ, ತನ್ನನ್ನು | ತಮ್ಮ, ತಮ್ಮನ್ನು |
| ೩ | ತನ್ನಿಂದ | ತಮ್ಮಿಂದ |
| ೪ | ತನಗೆ | ತಮಗೆ |
| ೫ | ತನ್ನಿಂದ | ತಮ್ಮಿಂದ |
| ೬ | ತನ್ನ | ತಮ್ಮ |
| ೭ | ತನ್ನಲ್ಲಿ | ತಮ್ಮಲ್ಲಿ |

## ವಿಶೇಷಣ ಪ್ರಕರಣ

೧೦೮. ಒಡವೆಯನ್ನೂ ಅದರ ಗುಣಸಂಖ್ಯಾದಿ ಲಕ್ಷಣಗಳಲ್ಲಿ ಯಾವುದಾದರೊಂದನ್ನೂ ಒಮ್ಮೆಗೇ ತಿಳಿಸುವ ಶಬ್ದಕ್ಕೆ ವಿಶೇಷಣವೆಂಬ ಹೆಸರು. ಅಥವಾ ವಸ್ತುವನ್ನು ವರ್ಣಿಸುವ ಶಬ್ದಕ್ಕೆ ವಿಶೇಷಣವೆಂಬ ಹೆಸರು.

ಉದಾ: ಕುರುಡ, ತುಂಟ, ಸಣ್ಣ, ಪುಟ್ಟ, ಹಿರಿದು, ಕಿರಿದು ಮು.

೧೦೯. ವಿಶೇಷಣದಿಂದ ವರ್ಣಿಸಲ್ಪಡುವ ವಸ್ತುವಿಗೆ ವಿಶೇಷ್ಯವೆನ್ನುವರು.

ಉದಾ: 'ದೊಡ್ಡ ಮನುಷ್ಯ, ಪುಟ್ಟ ಕೂಸು.' ಇಲ್ಲಿ 'ಮನುಷ್ಯ, ಕೂಸು' ಎಂಬವು 'ದೊಡ್ಡ, ಪುಟ್ಟ' ಎಂಬೀ ವಿಶೇಷಣಗಳಿಂದ ವರ್ಣಿಸಲ್ಪಟ್ಟ ಕಾರಣ ವಿಶೇಷ್ಯಗಳೆನಿಸುತ್ತವೆ.

೧೧೦. (ಅ) ವಿಶೇಷ್ಯಗಳ ಮುಂದೆ ಬಂದಾಗ ವಿಶೇಷಣಗಳಿಗೂ ನಾಮಗಳಂತೆ ಲಿಂಗವಚನವಿಭಕ್ತಿಗಳು ಬರುತ್ತವೆ. ಅವು ವಿಶೇಷ್ಯದ ಲಿಂಗವಚನವಿಭಕ್ತಿಗಳಿಗೆ ಸರಿಯಾಗಿರುತ್ತವೆ.

ಉದಾ: ರಾಮನು ಕರಿಯನು, ಕೃಷ್ಣೆ ಕರಿಯಳು, ಅವು ಕರಿಯವು ಮು.

(ಆ) ವಿಶೇಷ್ಯದ ಮುಂದೆ ಬಂದ ವಿಶೇಷಣಗಳಿಗೆ ಉತ್ತರವಿಶೇಷಣಗಳೆನ್ನುವರು. ಮೇಲಿನ ಉದಾಹರಣಗಳಲ್ಲಿ ಕರಿಯನು, ಕರಿಯಳು, ಕರಿಯವು ಇವು ಮೂರು ಉತ್ತರವಿಶೇಷಣಗಳಾಗಿವೆ.

೧೧೧. ವಿಶೇಷಣಗಳಲ್ಲಿ ಅರ್ಥಭೇದದಿಂದ (೧) ಗುಣವಾಚಕ, (೨) ಸಂಖ್ಯಾವಾಚಕ, (೩) ಸಂಖ್ಯಾಪೂರಕ, (೪) ಪರಿಣಾಮವಾಚಕ, (೫) ಸಾಮಾನ್ಯಸಂಖ್ಯಾವಾಚಕ, (೬) ಪ್ರಕಾರಾರ್ಥಕ, ಮುಂತಾದ ಹಲವು ವಿಭಾಗಗಳನ್ನು ಮಾಡಬಹುದು.*

೧೧೨. ಗುಣವಾಚಕಗಳು—ವಸ್ತುವನ್ನೂ ಅದರ ಗುಣವನ್ನೂ ಒಮ್ಮೆಗೇ ಸೂಚಿಸುವ ವಿಶೇಷಣಗಳು, ಎಂದರೆ ಗುಣದಿಂದ ಒಡವೆಗೆ ಬಂದ ಹೆಸರುಗಳು† ಗುಣವಾಚಕಗಳು.

ಉದಾ: ಕುರುಡ, ಕುಂಟ, ದಡ್ಡ, ಜಾಣ, ಚೆಲುವ, ಸಣ್ಣ, ಪುಟ್ಟ, ಒಳ್ಳೆ, ಸವಿಯಾದ, ಹಣವುಳ್ಳ, ಬುದ್ಧಿವಂತ, ಸೊಕ್ಕಿನ, ಸಿಟ್ಟಿನ, ಹೆಮ್ಮೆಯ, ಇತ್ಯಾದಿ.

೧೧೩. ಸಂಖ್ಯಾವಾಚಕಗಳು—ವಸ್ತುಗಳನ್ನೂ ಅವುಗಳ ಸಂಖ್ಯೆಯನ್ನೂ ಒಮ್ಮೆಗೇ ಸೂಚಿಸುವ ವಿಶೇಷಣಗಳು ಸಂಖ್ಯಾವಾಚಕಗಳು.

ಉದಾ: ಒಂದು, ಎರಡು, ಮೂರು, ನೂರು, ಸಾವಿರ, ಒಂದೂವರೆ, ಎರಡೂಮುಕ್ಕಾಲು, ಮೂರುಕಾಲು ಮು.

---

* ಇವಲ್ಲದೆ ರೂಪಭೇದದಿಂದ ವಿಶೇಷಣಗಳಲ್ಲಿ ಕೃದಂತ (ಕೃದ್ವಾಚಕ) ವಿಶೇಷಣ, ತದ್ಧಿತ ವಿಶೇಷಣ, ಬಹುವ್ರೀಹಿವಿಶೇಷಣ ಎಂಬ ಭೇದಗಳಾಗುವುವು. ಅವನ್ನು ಆ ಆ ಪ್ರಕರಣಗಳಲ್ಲಿ ನೋಡಿರಿ.

† ಈ ತರದ ಎರಡನೆಯ ವ್ಯಾಖ್ಯೆಗಳನ್ನು ಮುಂದಿನ ವಿಶೇಷಣಗಳಿಗೆ ಶಿಕ್ಷಕರು ವಿದ್ಯಾರ್ಥಿಗಳಿಂದ ಹೊರಡಿಸಬೇಕು.

೧೧೪. **ಸಂಖ್ಯಾಪೂರಕ**—ವಸ್ತುಗಳನ್ನೂ ಅವುಗಳ ಸ್ಥಾನದ ಕ್ರಮವನ್ನೂ ಒಮ್ಮೆಗೇ ಸೂಚಿಸುವ ವಿಶೇಷಣಗಳು ಸಂಖ್ಯಾಪೂರಕ ಅಥವಾ ಕ್ರಮವಾಚಕಗಳು.

ಉದಾ: ಒಂದನೆಯ, ಎರಡನೆಯ, ನೂರನೆಯ, ಅಷ್ಟನೆಯ ಮು.

೧೧೫. **ಪರಿಮಾಣವಾಚಕಗಳು**— ವಸ್ತುಗಳನ್ನೂ ಅವುಗಳ ಪರಿ ವನ್ನೂ ಇಲ್ಲವೆ ಅಳತೆಯನ್ನೂ ಒಮ್ಮೆಗೇ ಸೂಚಿಸುವ ವಿಶೇಷಣಗಳು ಮಾಣ ವಾಚಕಗಳು.

ಉದಾ: ಅಷ್ಟು, ಇಷ್ಟು, ಎಷ್ಟು, ಒಂದಿಷ್ಟು, ಇಷ್ಟೊಂದು, ಬಹಳೊಂದು, ಇ ಮತ್ತಿಷ್ಟು, ಹೇರು, ಸೇರು, ಖಂಡಗ, ಕಯ್ತುಂಬ, ಬಾಯ್ತುಂಬ, ಕಯ ನಡುಮಟ್ಟ, ಇಮ್ಮಡಿ, ಮುಮ್ಮಡಿ, ನಾಲ್ಕುಪಾಲು, ಎರಡುಪಾಲು ಮು.

೧೧೬. **ಸಾಮಾನ್ಯಸಂಖ್ಯಾವಾಚಕಗಳು**—ವಸ್ತುಗಳನ್ನೂ ಅವು ಸಂಖ್ಯೆಯನ್ನೂ ಇಲ್ಲವೆ ಪರಿಮಾಣವನ್ನೂ ಸರಾಸರಿಯಾಗಿ ಸೂಚಿಸುವ ವಿ ಣಗಳು ಸಾಮಾನ್ಯಸಂಖ್ಯಾವಾಚಕಗಳು.

ಉದಾ: ಎಲ್ಲ, ಯಾವತ್ತು, ಸಕಲ, ಸಮಸ್ತ, ತುಸು, ಬಹಳ, ಹೆಚ್ಚು, ಕ ಸ್ವಲ್ಪ, ಅನೇಕ, ಅಷ್ಟೊಂದು, ಇಷ್ಟೊಂದು, ಮತ್ತಿಷ್ಟು, ದೊಡ್ಡ, ಸಣ್ಣ ಮು.

೧೧೭. **ಪ್ರಕಾರಾರ್ಥಕವಿಶೇಷಣಗಳು**— ವಸ್ತುಗಳನ್ನೂ ಅವು ಬಗೆಯನ್ನೂ ಒಮ್ಮೆಗೇ ಸೂಚಿಸುವ ವಿಶೇಷಣಗಳು ಪ್ರಕಾರಾರ್ಥಕಗಳು.

ಉದಾ: ಅಂಥ, ಇಂಥ, ಎಂಥ, ಆ ಬಗೆಯ, ಈ ಬಗೆಯ, ಒಂದು ಪ್ರಕಾ ಆ ತರದ, ಈ ತರದ, ಅಂತಹ, ಇಂತಹ, ಎಂತಹ ಮು.

೧೧೮. **ಸ್ಥಳವಾಚಕಗಳು**—ವಸ್ತುಗಳನ್ನೂ ಅವುಗಳ ಸ್ಥಲವ ಅಥವಾ ದಿಕ್ಕನ್ನೂ ಒಮ್ಮೆಗೇ ಸೂಚಿಸುವ ಶಬ್ದಗಳು ಸ್ಥಲಸೂಚಕ ಅಥ ದಿಗ್ವಾಚಕ ವಿಶೇಷಣಗಳಾಗಿ ಉಪಯೋಗವಾಗುತ್ತವೆ.

ಉದಾ: ಅತ್ತಣ, ಮೇಲಿನ, ಮೇಲಣ, ಕೆಳಗಿನ, ಕೆಳಗಣ, ಅಲ್ಲಿಯ, ಅಲ್ಲಿ ಇಲ್ಲಿಯ, ಇಲ್ಲಿಯಣ ಮು.

೧೧೯. **ಕಾಲಸೂಚಕಗಳು**—ವಸ್ತುಗಳನ್ನೂ ಅವುಗಳ ವೇಳೆಯ ಒಮ್ಮೆಗೇ ಸೂಚಿಸುವ ಶಬ್ದಗಳು ಕಾಲಸೂಚಕ ವಿಶೇಷಣಗಳಾಗಿ ಉಪಯೋ ವಾಗುತ್ತವೆ.

ಉದಾ: ಆಗಿನ, ಈಗಿನ, ಅಂದಿನ, ಇಂದಿನ, ನಿನ್ನಿನ, ಮೊನ್ನಿನ, ನಾಳಿನ, ಅವ ಎಂದಿನ ಮು.

## ವಿಶೇಷಣಗಳ ವಿಭಕ್ತಿರೂಪಗಳು.

೧೨೦. ಅಕಾರಾಂತಪುಲ್ಲಿಂಗ ವಿಶೇಷಣಗಳು ಅಕಾರಾಂತಪುಲ್ಲಿಂಗ ನಾಮಗಳ ನಿಯಮದಿಂದ ವಿಭಕ್ತಿಪ್ರತ್ಯಯಗಳನ್ನು ಹೊಂದುತ್ತವೆ. ಉದಾ:

'ಬಲ್ಲಿದ' ಶಬ್ದ.

(೧) ಬಲ್ಲಿದನು, ಬಲ್ಲಿದರು; (೨) ಬಲ್ಲಿದನ, ಬಲ್ಲಿದನನ್ನು, ಬಲ್ಲಿದರ, ಬಲ್ಲಿದರನ್ನು; (೩) ಬಲ್ಲಿದನಿಂದ, ಬಲ್ಲಿದರಿಂದ ಮು.

ಹೀಗೇ 'ಒಳ್ಳಿದ, ಕುಂಟ, ಕುರುಡ, ಕಂಚುಗಾರ, ಮಾತುಗ, ಚೆಲುವ, ಹಿರಿಯ, ಕಿರಿಯ' ಮುಂತಾದುವು ನಡೆಯುವುವು.

೧೨೧. ಅಕಾರಾಂತವಿಶೇಷಣಗಳನ್ನು ಸ್ತ್ರೀಲಿಂಗದಲ್ಲಿ ನಡಿಸುವುದಾದರೆ, ಅವಕ್ಕೆ ಇ, ಎ, ತಿ ಮುಂತಾದ ಸ್ತ್ರೀ ಪ್ರತ್ಯಯಗಳಲ್ಲಿ ಯಾವುದು ಉಕ್ತವೋ ಅದನ್ನು ಹಚ್ಚಿ, ಇ ಎಕಾರಾಂತ ಸ್ತ್ರೀಲಿಂಗ ನಾಮಗಳಂತೆ ನಡಿಸಬೇಕು.

ಹೇಗೆಂದರೆ:—ಬಿಳಿಕ=ಬಿಳಿಕಿ, ಮುದುಕ=ಮುದುಕಿ, ಕರಿಕ=ಕರಿಕಿ, ನಿಡುಗಣ್ಣ=ನಿಡುಗಣ್ಣೆ, ಜಾಣ=ಜಾಣೆ, ಕುರುಡ=ಕುರುಡೆ, ಹೆಳವ=ಹೆಳವೆ, ಕಂಚುಗಾರ=ಕಂಚುಗಾರ್ತಿ, ಬೀಗ=ಬೀಗತಿ, ಗಾಡಿಕಾರ=ಗಾಡಿಕಾರ್ತಿ ಮು.

'ಜಾಣೆ' ಶಬ್ದ.

(೧) ಜಾಣೆಯು, ಜಾಣೆಯರು; (೨) ಜಾಣೆಯ, ಜಾಣೆಯನ್ನು, ಜಾಣೆಯರ, ಜಾಣೆಯರನ್ನು; (೩) ಜಾಣೆಯಿಂದ, ಜಾಣೆಯರಿಂದ ಮು.

ಅಪವಾದ—'ಬಲ್ಲಿದ, ಒಳ್ಳಿದ, ಹೊಸಬ, ಹಳಬ, ಹಿರಿಯ, ಕಿರಿಯ, ಕರಿಯ, ಬಿಳಿಯ, ಅಸಿಯ, ನಿಡಿಯ, ಎಳೆಯ, ಇನಿಯ' ಮುಂತಾದವುಗಳಿಗೆ ಏಕವಚನದಲ್ಲಿ ಳಕಾರಾಗಮವಾಗುವುದು. ಬಹುವಚನವು ಪುಲ್ಲಿಂಗದಂತೆ ಆಗುವುದು. ಉದಾ:

'ಬಲ್ಲಿದ' ಶಬ್ದ.

(೧) ಬಲ್ಲಿದಳು, ಬಲ್ಲಿಜರು; (೨) ಬಲ್ಲಿದಳ, ಬಲ್ಲಿದಳನ್ನು, ಬಲ್ಲಿದರ, ಬಲ್ಲಿದರನ್ನು; (೩) ಬಲ್ಲಿದಳಿಂದ, ಬಲ್ಲಿದರಿಂದ ಮು.

೧೨೨. 'ಕುರುಡ, ಕುಂಟ, ಮುರಕ, ಹರಕ, ಕಿವುಡ' ಮುಂತಾದ ಅಕಾರಾಂತವಿಶೇಷಣಗಳು ನಪುಂಸಕಲಿಂಗದಲ್ಲಿ ಅಕಾರಾಂತನಪುಂಸಕ ನಾಮಗಳ ನಿಯಮದಂತೆ ವಿಭಕ್ತಿಪ್ರತ್ಯಯಗಳನ್ನು ಹೊಂದುವವು ಉದಾ:

'ಮುರಕ'ಶಬ್ದ.

(೧) ಮುರಕವು, ಮುರಕಗಳು; (೨) ಮುರಕವ, ಮುರಕವನ್ನು, ಮು॥ ಮುರಕಗಳನ್ನು; (೩) ಮುರಕದಿಂದ, ಮುರಕಗಳಿಂದ ಮು.

೧೨೩. 'ಕರಿದು, ಬಿಳಿದು, ಎಳದು, ಪಳದು, ಕಿರಿದು, ಕ॥ ಮುಂತಾದ ಕೆಲವು ನಪುಂಸಕವಿಶೇಷಣಗಳು ಏಕವಚನದಲ್ಲಿ ಇದ್ದಂತೆ. ಬಹುವಚನದಲ್ಲಿ 'ಕರಿಯುವು, ಬಿಳಿಯುವು' ಮುಂತಾದ ರೂಪಗ॥. ಹೊಂದಿಯೂ ನಡೆಯುವವು.

ಉದಾ: ಏಕವಚನ: ಕರಿದು, ಬಿಳಿದನ್ನು, ಕಿರಿದರಲ್ಲಿ ಇತ್ಯಾದಿ;
ಬಹುವಚನ: ಕರಿಯುವು, ಹಿರಿಯುವುಗಳಲ್ಲಿ ಇತ್ಯಾದಿ.

೧೨೪. 'ದೊಡ್ಡ, ಸಣ್ಣ, ಹೊಸ, ಹಳೆ, ಚಿಕ್ಕ, ಪುಟ್ಟ' ಮು॥ ವಿಶೇಷಣಗಳನ್ನು ಯಾವ ಲಿಂಗದಲ್ಲಿ ನಡಿಸಬೇಕೋ, ಆ ಲಿಂಗದ ದ॥ ರ್ಶಕ ಸರ್ವನಾಮದ ವಿಭಕ್ತಿರೂಪಗಳನ್ನು ಅವುಗಳಿಗೆ ಜೋಡಿಸಬೇಕು. ಜೋಡಿಸುವಾಗ ಪ್ರಕೃತಿಯ ಅಂತ್ಯಸ್ವರಕ್ಕೆ ಲೋಪ ಬರುವುದು.

ಉದಾ: 'ದೊಡ್ಡ' ಪುಲ್ಲಿಂಗದಲ್ಲಿ, ಏಕವಚನ: ದೊಡ್ಡ + ಅವನು = ದೊಡ್ಡ॥ ಮು. ಸ್ತ್ರೀಲಿಂಗದಲ್ಲಿ: ದೊಡ್ಡವಳು, ದೊಡ್ಡವಳಿಗೆ ಮು. ಬಹುವಚನ (ಸ್ತ್ರೀ॥ ಪುಲ್ಲಿಂಗ): ದೊಡ್ಡವರು, ದೊಡ್ಡವರ ಇತ್ಯಾದಿ. ನಪುಂಸಕಲಿಂಗ ಏಕವಚನ: ದೊ॥ ದೊಡ್ಡದನ್ನು ಮು. ಬಹುವಚನ: ದೊಡ್ಡವು, ದೊಡ್ಡವುಗಳಿಗೆ ಮು.

ಅಪವಾದ—ಹೊಸ, ಹಳಶಬ್ದಗಳ ಪುಲ್ಲಿಂಗ ಸ್ತ್ರೀಲಿಂಗಗಳ ವಿಭಕ್ತಿ॥ ಗಳೊಳಗಿನ ವಕಾರಕ್ಕೆ ಬಕಾರಾದೇಶವಾಗುವುದು. ಉದಾ:

'ಹೊಸ' ಶಬ್ದ.

| | ಏಕವಚನ: | | ಬಹುವಚನ: |
|---|---|---|---|
| | ಪುಲ್ಲಿಂಗ | ಸ್ತ್ರೀಲಿಂಗ | ಪುಂ–ಸ್ತ್ರೀಲಿಂಗ |
| ೧. | ಹೊಸಬನು, | ಹೊಸಬಳು, | ಹೊಸಬರು. |
| ೨. | ಹೊಸಬನನ್ನು, | ಹೊಸಬಳನ್ನು, | ಹೊಸಬರನ್ನು ಮು. |

೧೨೫. 'ಒಂದು' ಶಬ್ದವು ಪುಲ್ಲಿಂಗದಲ್ಲಿಯೂ ಸ್ತ್ರೀಲಿಂಗದಲ್ಲಿಯೂ॥ ಯುವಾಗ ಅದಕ್ಕೆ 'ಒಬ್ಬ' ಎಂಬ ರೂಪವು ಬರುತ್ತದೆ. ಈ ರೂಪಕ್ಕೆ॥ ಪ್ರತ್ಯಯಗಳನ್ನು ಹಚ್ಚುವಾಗ ಏಕವಚನದಲ್ಲಿ ಪುಲ್ಲಿಂಗಕ್ಕೆ ನಕಾರಾಗ॥

ಸ್ತ್ರೀಲಿಂಗಕ್ಕೆ ಳಕಾರಾಗಮವೂ ಆಗುವುದು. ಬಹುವಚನದಲ್ಲಿ ಉಭಯಲಿಂಗಗಳಿಗೂ ರೇಫಾಗಮವಾಗುವುದು. ಉದಾ:

'ಒಬ್ಬ' ಶಬ್ದ.

| ಏಕವಚನ: ಪುಲ್ಲಿಂಗ. | ಸ್ತ್ರೀಲಿಂಗ. | ಬಹುವಚನ: |
|---|---|---|
| ಒಬ್ಬನು | ಒಬ್ಬಳು | ಒಬ್ಬರು * |
| ಒಬ್ಬನ, ಒಬ್ಬನನ್ನು | ಒಬ್ಬಳ, ಒಬ್ಬಳನ್ನು | ಒಬ್ಬರನ್ನು |
| ಒಬ್ಬನಿಂದ | ಒಬ್ಬಳಿಂದ | ಒಬ್ಬರಿಂದ ಮು. |

೧೨೬. 'ಎರಡು' ಮುಂತಾದ ಶಬ್ದಗಳು ಪುಲ್ಲಿಂಗಸ್ತ್ರೀಲಿಂಗಗಳಲ್ಲಿ ನಡೆಯುವಾಗ 'ಎರಡ'ಕ್ಕೆ 'ಇಬ್ಬ,' 'ಮೂರ'ಕ್ಕೆ 'ಮೂವ', 'ನಾಲ್ಕ'ಕ್ಕೆ 'ನಾಲ್ವ,' 'ಅಯ್ದ'ಕ್ಕೆ 'ಅಯ್ವ' 'ಆರ'ಕ್ಕೆ 'ಆರುವ', 'ಏಳ'ಕ್ಕೆ 'ಏಳ್ವ', 'ಎಂಟ'ಕ್ಕೆ 'ಎಣ್ಬ,' 'ಒಂಬತ್ತ'ಕ್ಕೆ 'ಒಂಬಯ್ವ' ಅಥವಾ 'ಒಂಬದಿಂದ' ಅಥವಾ 'ತೊಂಬ,' 'ಹತ್ತ'ಕ್ಕೆ, 'ಪದಿಂಬ, ಹಯಿಂಬ' ಎಂಬಾದೇಶಗಳು ಆಗುತ್ತವೆ. ಈ ಯಾದೇಶದ ರೂಪಗಳಿಗೆ ಬಹುವಚನದ 'ಅರು' ಪ್ರತ್ಯಯವನ್ನು ಹಚ್ಚಿ ವಿಭಕ್ತಿಪ್ರತ್ಯಯಗಳನ್ನು ಹಚ್ಚಬೇಕು. ಇವಕ್ಕೆ ಏಕವಚನವಿಲ್ಲ.

ಉದಾ: (೧) ಇಬ್ಬರು; (೨) ಇಬ್ಬರನ್ನು; (೩) ಇಬ್ಬರಿಂದ; (೪) ಇಬ್ಬರಿಗೆ; (೫) ಇಬ್ಬರಿಂದ; (೬) ಇಬ್ಬರ; (೭) ಇಬ್ಬರಲ್ಲಿ ಇತ್ಯಾದಿ.

೧೨೭ ಕೆಲ, ಹಲ, ಎಲ್ಲ† ಈ ಶಬ್ದಗಳು ನಿತ್ಯ ಬಹುವಚನದಲ್ಲಿ ನಡೆಯುತ್ತವೆ. ಈ ಶಬ್ದಗಳನ್ನು ನಪುಂಸಕಲಿಂಗದಲ್ಲಿ ನಡಿಸಬೇಕಾದರೆ 'ಅದು' ಶಬ್ದದ ಬಹುವಚನದ ರೂಪಗಳನ್ನೂ ಪುಲ್ಲಿಂಗದಲ್ಲಿ ಅಥವಾ ಸ್ತ್ರೀಲಿಂಗದಲ್ಲಿ ನಡಿಸಬೇಕಾದರೆ 'ಅವ' ಶಬ್ದದ ಬಹುವಚನದ ರೂಪಗಳನ್ನೂ ಇವಕ್ಕೆ (ಕೆಲ ಮುಂತಾದವುಗಳಿಗೆ) ಹಚ್ಚಬೇಕು; ಆಗ ಪ್ರಕೃತಿಯ ಅಂತ್ಯಸ್ವರಕ್ಕೆ ಲೋಪ ಬರುತ್ತದೆ.

---

* ಇದು ಮಾನಾರ್ಥಕ ಬಹುವಚನವೆಂದು ತಿಳಿಯಬೇಕು, ವ್ಯಕ್ತಿವಾಚಕ ಬಹುವಚನವಲ್ಲ.

† ಎಲ್ಲ, ಸಕಲ, ಸಮಸ್ತ ಮುಂತಾದ ಕೆಲವು ಅಕಾರಾಂತಗಳಿಗೆ ತೃತೀಯಾದಿವಿಭಕ್ತಿಗಳಲ್ಲಿ ಸಮುದಾಯಾರ್ಥದ ಏಕವಚನದ ರೂಪಗಳಾದರೂ ಆಗುವುವು. ಉದಾ: ಎಲ್ಲದಿಂದ, ಎಲ್ಲದರ, ಎಲ್ಲದರಲ್ಲಿ; ಸಕಲದರಿಂದ, ಸಕಲದರ, ಸಕಲದರಲ್ಲಿ ಮು.

## ಉದಾಹರಣಗಳು—ನಪುಂಸಕಲಿಂಗವು.

(೧) ಕೆಲವು; (೨) ಕೆಲವನ್ನು; (೩) ಕೆಲವುಗಳಿಂದ; (೪) ಕೆಲವಕ್ಕೆ; (೫) ಕೆಲ ಳಿಂದ; (೬) ಕೆಲವುಗಳ; (೭) ಕೆಲವುಗಳಲ್ಲಿ.

### ಪುಲ್ಲಿಂಗವೂ ಸ್ತ್ರೀಲಿಂಗವೂ.

(೧) ಕೆಲರು, ಕೆಲವು; (೨) ಕೆಲವರ, ಕೆಲವರನ್ನು; (೩) ಕೆಲವರಿಂದ; (೪) ವರಿಗೆ; (೫) ಕೆಲವರಿಂದ; (೬) ಕೆಲವರ; (೭) ಕೆಲವರಲ್ಲಿ.

ಅಪವಾದ—'ಎಲ್ಲ' ಶಬ್ದದ ರೂಪಗಳಲ್ಲಿ ಸ್ವಲ್ಪ ಹೆಚ್ಚು ಕಡಿಮೆಯುಂ

### ನಪುಂಸಕಲಿಂಗ

(೧) ಎಲ್ಲವು, ಎಲ್ಲ; (೨) ಎಲ್ಲವ, ಎಲ್ಲವನ್ನು, ಎಲ್ಲವುಗಳ, ಎಲ್ಲವುಗ (೩) ಎಲ್ಲವುಗಳಿಂದ; (೪) ಎಲ್ಲವಕ್ಕೆ, ಎಲ್ಲಕ್ಕೆ; (೫) ಎಲ್ಲವುಗಳಿಂದ; (೬) ಎಲ್ಲವು (೭) ಎಲ್ಲವುಗಳಲ್ಲಿ.

### ಪುಲ್ಲಿಂಗವೂ ಸ್ತ್ರೀಲಿಂಗವೂ.

(೧) ಎಲ್ಲವರು, ಎಲ್ಲರು; (೨) ಎಲ್ಲವರ, ಎಲ್ಲರ, ಎಲ್ಲವರನ್ನು, ಎಲ್ಲರನ್ನು ಎಲ್ಲವರಿಂದ, ಎಲ್ಲರಿಂದ; (೪) ಎಲ್ಲವರಿಗೆ, ಎಲ್ಲರಿಗೆ; (೫) ಎಲ್ಲವರಿಂದ, ಎಲ್ಲರಿಂದ; ಎಲ್ಲವರ, ಎಲ್ಲರ; (೭) ಎಲ್ಲವರಲ್ಲಿ, ಎಲ್ಲರಲ್ಲಿ.

೧೨೮. 'ಅಷ್ಟು, ಇಷ್ಟು, ಎಷ್ಟು' ಶಬ್ದಗಳು ನಿತ್ಯ ಬಹುವಚನ ರುತ್ತವೆ. ಇವು 'ಅದು' ಶಬ್ದದ ಏಕವಚನದಂತೆ ನಪುಂಸಕಲಿಂಗದಲ್ಲಿ ಯುತ್ತವೆ. ಇವುಗಳ ಪುಂ-ಸ್ತ್ರೀಲಿಂಗ ವಿಭಕ್ತಿರೂಪಗಳು ಹೊಸಗನ್ನಡ ಇಲ್ಲ.* ಅವಶ್ಯವಿದ್ದರೆ 'ಮಂದಿ' ಶಬ್ದದ ಏಕವಚನದ ರೂಪಗಳನ್ನು ಅಥ 'ಜನ' ಶಬ್ದದ ಬಹುವಚನದ ರೂಪಗಳನ್ನು ಇವಕ್ಕೆ ಹಚ್ಚಿಕೊಳ್ಳಬೇಕು. ಉ:

### ನಪುಂಸಕಲಿಂಗ.

(೧) ಅಷ್ಟು; (೨) ಅಷ್ಟನ್ನು; (೩) ಅಷ್ಟರಿಂದ; (೪) ಅಷ್ಟಕ್ಕೆ; (೫) ಅಷ್ಟ (೬) ಅಷ್ಟರ; (೭) ಅಷ್ಟರಲ್ಲಿ.

### ಪುಂ-ಸ್ತ್ರೀಲಿಂಗ.

(೧) ಅಷ್ಟು ಮಂದಿ, ಅಷ್ಟು ಜನರು; (೨) ಅಷ್ಟು ಮಂದಿಯನ್ನು, ಅಷ್ಟು ರನ್ನು ಮು.

* ಹಳಗನ್ನಡದಲ್ಲಿ ಅನಿಬರು, ಇನಿಬರು, ಎನಿಬರು ಎಂಬ ರೂಪಗಳಾಗುವ ಇವನ್ನೇ ಹೊಸಗನ್ನಡದಲ್ಲಿ ಉಪಯೋಗಿಸಿದರೂ ಕೋಸವಲ್ಲ.

೧೨೯. ಷಷ್ಠ್ಯಂತ* ವಿಶೇಷಣವನ್ನು ನಪುಂಸಕಲಿಂಗದಲ್ಲಿ ನಡಿಸುವುದಾದರೆ ಅದಕ್ಕೆ 'ಅದು' ಅಥವಾ 'ಉದು' ಶಬ್ದದ ರೂಪಗಳನ್ನೂ ಪುಲ್ಲಿಂಗದಲ್ಲಿ ಅಥವಾ ಸ್ತ್ರೀಲಿಂಗದಲ್ಲಿ ನಡಿಸುವುದಾದರೆ 'ಅವ' ಶಬ್ದದ ಪುಲ್ಲಿಂಗದ ಅಥವಾ ಸ್ತ್ರೀಲಿಂಗದ ರೂಪಗಳನ್ನೂ ಹಚ್ಚಬೇಕು.

ಉದಾಹರಣಗಳು:

ಏಕವಚನ: (೧) ಒಯ್ಯಾರದದು, ಒಯ್ಯಾರದವನು, ಒಯ್ಯಾರದವಳು; (೨) ಒಯ್ಯಾರದದನ್ನು, ಒಯ್ಯಾರದವನನ್ನು, ಒಯ್ಯಾರದವಳನ್ನು ಮು.

ಬಹುವಚನ: (೧) ಒಯ್ಯಾರದವು, ಒಯ್ಯಾರದವರು; (೨) ಒಯ್ಯಾರದವರನ್ನು, ಒಯ್ಯಾರದವುಗಳನ್ನು, ಒಯ್ಯಾರದವರನ್ನು ಮು.

೧೩೧. ಕಾಲಸೂಚಕ ಕೃದಂತವಿಶೇಷಣಗಳನ್ನು ಯಾವ ಲಿಂಗದಲ್ಲಿ ನಡಿಸಬೇಕೋ ಆ ಲಿಂಗದ ದೂರದರ್ಶಕಸರ್ವನಾಮದ ವಿಭಕ್ತಿರೂಪಗಳನ್ನು ಅವಕ್ಕೆ ಹಚ್ಚಬೇಕು.

ಉದಾ: ಮಾಡುವದು, ಮಾಡುವವು, ಮಾಡುವವನು, ಮಾಡುವವಳು, ಮಾಡುವವರು ಮಾಡಿದುದು, † ಮಾಡಿದವು, ಮಾಡದದು, † ಮಾಡದವು ಮು.

(ಅ) ಈ ಕೃದಂತಗಳನ್ನು ಹಳಗನ್ನಡದ ಪದ್ಧತಿಯಿಂದ ನಡಿಸಿದರೆ ಕೆಳಗೆ ಬರೆದಂತೆ ವಿಭಕ್ತಿರೂಪಗಳಾಗುವುವು. ಅವನ್ನೂ ಹೊಸಗನ್ನಡದಲ್ಲಿ ಉಪಯೋಗಿಸಬಹುದು.

ಉದಾಹರಣಗಳು:

ಪುಲ್ಲಿಂಗವೂ ಸ್ತ್ರೀಲಿಂಗವೂ: (೧) ಮಾಡಿದನು, ಮಾಡಿದಳು, ಮಾಡಿದರು; (೨) ಮಾಡಿದನನ್ನು, ಮಾಡಿದಳನ್ನು, ಮಾಡಿದರನ್ನು; (೩) ಮಾಡಿದನಿಂದ, ಮಾಡಿದಳಿಂದ, ಮಾಡಿದರಿಂದ ಮು.

ನಪುಂಸಕಲಿಂಗ: (೧) ಮಾಡಿದುದು, ಮಾಡಿದುವು; (೨) ಮಾಡಿದುದನ್ನು, ಮಾಡಿದುವನ್ನು; (೩) ಮಾಡಿದುದರಿಂದ ಮಾಡಿದುವರಿಂದ ಮು.

---

* ಗುಣವಾಚಕ ವಿಶೇಷಣಗಳ ಉದಾಹರಣಗಳಲ್ಲಿ ಇವುಗಳನ್ನು ಉಲ್ಲೇಖಿಸಿರುವೆ. ಅಲ್ಲಿ ನೋಡಿರಿ. † ದವರ್ಣಾಂತ ಕೃದ್ವಾಚಕಕ್ಕೆ "ಅದು ಶಬ್ದದ" ಏಕವಚನದ ರೂಪವು ಪರವಾದರೆ, ಪೂರ್ವಶಬ್ದದ ಅಂತ್ಯಸ್ವರಕ್ಕೂ ಪರಶಬ್ದದ ಆದಿಸ್ವರಕ್ಕೂ ವಿಕಲ್ಪವಾಗಿ ಲೋಪವಾಗುವುದು.

## ಆಖ್ಯಾತಪ್ರಕರಣ.

೧೩೧. ಇರುವಿಕೆ, ಬರುವಿಕೆ, ಮಾಡುವಿಕೆ ಮುಂತಾದ ಕ್ರಿಯೆಗಳ ಹೇಳುವಂತಹ ಆಖ್ಯಾತಪ್ರತ್ಯಯವುಳ್ಳ ಪದಗಳಿಗೆ ಕ್ರಿಯಾಪದಗಳ ಇಲ್ಲವೆ ಆಖ್ಯಾತಪದಗಳೆಂದು ಹೆಸರು.

ಉದಾ: ಇರುತ್ತಾನೆ, ಮಾಡಿದನು, ಪಡುವನು, ಬರೆದಾನು, ಹೊಂದನು, ಮು.

೧೩೨. ಕ್ರಿಯಾಪದದ ಮೂಲಕ್ಕೆ ಧಾತುವೆಂಬ ಹೆಸರು.

ಉದಾ: 'ಮಾಡು, ನುಡಿ, ಆಗು' ಮುಂತಾದ ಮೂಲ ಶಬ್ದಗಳೇ ಧಾತುಗಳು

೧೩೩. ಧಾತುಗಳಲ್ಲಿ **ಸಹಜ, ಸಂಯುಕ್ತ, ಪ್ರತ್ಯಯಾಂತ** ಎಂ ಮೂರು ವಿಧ:—

(ಅ) ಪ್ರತ್ಯಯಗಳಿಲ್ಲದ ಕನ್ನಡದ ಮೂಲಧಾತುಗಳು '**ಸಹಜ**' ಎಂಬ

ಉದಾ: ಮಾಡು, ನುಡಿ, ಇರು ಮು.

(ಆ) ಎರಡು ಧಾತುಗಳು ಕೂಡಿ ಒಂದೇ ಶಬ್ದವಾಗಿ ಉಪಯೋಗ ಗುವವು '**ಸಂಯುಕ್ತ**' ಧಾತುಗಳು.

ಉದಾ: ಓಡಾಡು, ಬರೆಕೊಳ್ಳು, ಕರೆತರು, ಅಲುಗಾಡು ಮು.

(ಇ) ಕನ್ನಡ ಅಥವಾ ಸಂಸ್ಕೃತ ನಾಮಗಳಿಗೆ 'ಇಸು' ಪ್ರತ್ಯಯ ಹಚ್ಚುವುದರಿಂದಲೂ, ಪ್ರೇರಣಾರ್ಥಕದಲ್ಲಿ ಧಾತುಗಳಿಗೆ 'ಇಸು' ಪ್ರತ್ಯಯ ಹಚ್ಚುವುದರಿಂದಲೂ, ಕೆಲ ನಾಮಗಳಿಗೆ 'ಆಗು' ಎಂಬ ಪ್ರತ್ಯಯ ಹಚ್ಚುವುದರಿಂದಲೂ, ಆಗುವ ಧಾತುಗಳು '**ಪ್ರತ್ಯಯಾಂತ**'ಗಳು.

ಉದಾ: ಕನ್ನಡಿಸು, ಸಂಹರಿಸು, ಬರಿಸು, ಸಿಟ್ಟಾಗು ಇತ್ಯಾದಿ.

೧೩೪. ಅರ್ಥಭೇದದಿಂದ ಧಾತುಗಳು ಮೂರು ವಿಧವಾಗಿವೆ:— **ಸಕರ್ಮಕ**, (ಆ) **ಅಕರ್ಮಕ**, (ಇ) (ಪ್ರಯೋಜಕ ಅಥವಾ) **ಪ್ರೇ ರ್ಥಕ**.

(ಅ) ಕರ್ಮವುಳ್ಳ* ಕ್ರಿಯೆಯನ್ನು ಹೇಳುವ ಧಾತುಗಳು ಸಕರ್ಮ ಗಳು. ಸಕರ್ಮಕಧಾತುಗಳ ಹಿಂದೆ 'ಆರನ್ನು, ಏನನ್ನು' ಎಂಬ ಪ್ರಶ್ನೆ ನ್ನಿಟ್ಟರೆ ಉತ್ತರ ಬರುತ್ತದೆ. ಆ ಉತ್ತರವೇ ಕರ್ಮವು.

ಉದಾ: ಮಾಡು, ನುಡಿ, ಹೇಳು ಮು.

---

* ಕರ್ಮದ ವ್ಯಾಖ್ಯೆಯನ್ನು ಕಾರಕ ಪ್ರಕರಣದಲ್ಲಿ ನೋಡು.

(ಅ) ಕರ್ಮವಿಲ್ಲದ* ಧಾತು ಅಕರ್ಮಕವು. ಅದರ ಹಿಂದೆ 'ಆರನ್ನು, ಏನನ್ನು' ಎಂಬ ಪ್ರಶ್ನೆಗಳನ್ನಿಟ್ಟರೆ ಉತ್ತರ ಬರುವುದಿಲ್ಲ.

ಉದಾ: ಆಗು, ಇರು, ಹೊಳೆ, ಬೆಳೆ, ಬೇ ಮು.

(ಇ) ಒಬ್ಬನು ಕ್ರಿಯೆಯನ್ನು ತಾನೇ ಮಾಡದೆ ಮತ್ತೊಬ್ಬನಿಂದ ಮಾಡಿಸುವನು ಎಂಬರ್ಥವನ್ನು ಹೇಳುವ ಧಾತು ಪ್ರಯೋಜಕವು ಅಥವಾ ಪ್ರೇರಣಾರ್ಥಕವು.

ಉದಾ: ಮಾಡಿಸು, ಹೇಳಿಸು, ಕುಣಿಸು ಮು.

೧೩೫. ಧಾತುಗಳನ್ನು ಕ್ರಿಯಾಪದಗಳನ್ನಾಗಿ ಮಾಡುವಾಗ ಕ್ರಿಯಾವಿಭಕ್ತಿಪ್ರತ್ಯಯ†ಗಳನ್ನು ಹಚ್ಚಬೇಕು. ಈ ಪ್ರತ್ಯಯಗಳು ಉತ್ತಮಪುರುಷ, ಮಧ್ಯಮಪುರುಷ, ಪ್ರಥಮಪುರುಷ ಎಂಬ ಮೂರು ಪುರುಷಗಳನ್ನು ಸೂಚಿಸುತ್ತವೆ. ಪ್ರತಿಯೊಂದು ಪುರುಷದಲ್ಲಿ ಏಕವಚನ, ಬಹುವಚನಗಳ ಪ್ರತ್ಯಯಗಳು ಬೇರೆ, ಬೇರೆ ಇರುತ್ತವೆ. ಇವಲ್ಲದೆ ಪ್ರಥಮಪುರುಷದ ಏಕವಚನದಲ್ಲಿ ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕಲಿಂಗಗಳ ಪ್ರತ್ಯಯಗಳು ಬೇರೆಬೇರೆಯಾಗಿರುತ್ತವೆ. ಬಹುವಚನದಲ್ಲಿ ನಪುಂಸಕಲಿಂಗದ ಪ್ರತ್ಯಯಗಳು ಉಳಿದುವುಗಳಿಂದ ಬೇರೆಯಾಗಿವೆ.

'ನಾನು, ನಾವು' ಇವುಗಳನ್ನು ಸೂಚಿಸುವ ಪ್ರತ್ಯಯಗಳು ಉತ್ತಮಪುರುಷದವು. 'ನೀನು, ನೀವು' ಇವುಗಳನ್ನು ಸೂಚಿಸುವುವು ಮಧ್ಯಮಪುರುಷದವು. 'ಅವನು, ಅವಳು, ಅದು, ಅವರು' ಇವುಗಳನ್ನು ಸೂಚಿಸುವುವು ಪ್ರಥಮ ಪುರುಷದವು—ಎಂದು ತಿಳಿಯತಕ್ಕದ್ದು.

ಉದಾ: ಉತ್ತಮಪುರುಷ: ಏಕವಚನ: ನಾನು ಹೋಗುತ್ತೇನೆ. ಬಹುವಚನ: ನಾವು ಹೋಗುತ್ತೇವೆ. ಮಧ್ಯಮಪುರುಷ: ನೀನು ಹೋಗುತ್ತೀ, ನೀವು ಹೋಗುತ್ತೀರಿ. ಪ್ರಥಮಪುರುಷ: ಅವನು ಹೋಗುತ್ತಾನೆ, ಅವಳು ಹೋಗುತ್ತಾಳೆ, ಅದು ಹೋಗುತ್ತದೆ, ಅವರು ಹೋಗುತ್ತಾರೆ, ಅವು ಹೋಗುತ್ತವೆ—ಇತ್ಯಾದಿ.

೧೩೬. ಕ್ರಿಯಾಪದಗಳ ಅರ್ಥಗಳು—ಕ್ರಿಯಾಪದಗಳಿಗೆ ಕಾಲ, (ಸಂಭಾವನಾ ಅಥವಾ) ಸಂಶಯ, ನಿಷೇಧ, ವಿಧಿ, ಎಂದು ನಾಲ್ಕು ಅರ್ಥಗಳಿವೆ.

---

* ಕರ್ಮವಿಲ್ಲದ ಧಾತುವಿಗೆ ಫಲಾತ್ಮಕವಾದ ಬೇರೆ ಕ್ರಿಯೆ ಇರುವದಿಲ್ಲ. ಕರ್ತೃವನ್ನು ಆಶ್ರಯಿಸಿರುವ ಕ್ರಿಯೆಯೇ ಕರ್ಮವಾಗುವದು. ಉದಾ: ಅಕ್ಕಿ ಬೇಯುತ್ತದೆ. ಇಲ್ಲಿ ಬೇಯೋಣವೆಂದರೆ ಜೀರ್ಣವಾಗೋಣವೇ ಕರ್ತೃವಿನ ವ್ಯಾಪಾರವು. ಅದಕ್ಕೆ ಫಲಾತ್ಮಕವಾದ ಮತ್ತೊಂದು ವ್ಯಾಪಾರವಿಲ್ಲ. ಆದುದರಿಂದ 'ಬೇ' ಎಂಬುದು ಅಕರ್ಮಕಧಾತು.

† ಇವಕ್ಕೆ ಆಖ್ಯಾತಪ್ರತ್ಯಯಗಳೆಂದೂ ಹೆಸರುಂಟು.

೧೩೭. ಕಾಲಾರ್ಥಕ ಕ್ರಿಯಾಪದಗಳು ವರ್ತಮಾನ, ಭೂತ, ಭ
ಷ್ಯತ್ತುಗಳೆಂಬ ಮೂರು ಕಾಲಗಳನ್ನು ಸೂಚಿಸುತ್ತವೆ.

(ಅ) ವರ್ತಮಾನಕಾಲವೆಂದರೆ ಈಗ ನಡೆಯುವ ಕಾಲವು; ಭ
ವೆಂದರೆ ಹೋದ ಕಾಲ; ಭವಿಷ್ಯತ್ತು ಎಂದರೆ ಮುಂದೆ ಬರುವ ಕಾಲ.

ಉದಾ: ವರ್ತಮಾನ ಕಾಲ: ಮಾಡುತ್ತೇನೆ; ಭೂತ: ಮಾಡಿದನು; ಭವಿ
ಬರುವುದು–ಇತ್ಯಾದಿ.

೧೩೮. ಕ್ರಿಯೆ ಸಂಭವಿಸಬಹುದೆಂದು ಹೇಳುವುದೇ ಸಂಶಯ
ಇಲ್ಲಿ ಕ್ರಿಯೆಯು ಸಂಭವಿಸಲಿಕ್ಕಿಲ್ಲವೆಂಬ ಸಂದೇಹವೂ ಅಡಕವಾಗಿ

ಉದಾ: ಮಾಡಿಯಾನು, ನುಡಿದಾನು, ಇದ್ದೇನು ಮು.

೧೩೯. ಕ್ರಿಯೆ ಸಂಭವಿಸುವುದಿಲ್ಲವೆಂದು ಹೇಳುವುದು ನಿಷೇಧ
ಉದಾ: ಮಾಡನು, ನುಡಿಯೆನು ಮು.

೧೪೦ ಅಪ್ಪಣೆ, ಬೇಡಿಕೊಳ್ಳುವುದು, ಹರಕೆ, ಒಪ್ಪಿಗೆ, ಕಟ್ಟಳೆ ಮು
ಅರ್ಥಗಳನ್ನು ಹೇಳುವುದು ವಿಧ್ಯರ್ಥ.

ಉದಾ: ಮಾಡು, ರಕ್ಷಿಸು, ಬನ್ನಿರಿ, ದಯಮಾಡಿರಿ, ಕಲಿಯಲಿ, ಬಾಳು

೧೪೧. ಈ ಪ್ರಕಾರ ಕ್ರಿಯಾಪದಗಳು ವರ್ತಮಾನ, ಭೂತ, ಭವಿ
ಸಂಶಯ, ನಿಷೇಧ, ವಿಧಿ ಎಂದು ಆರು ವಿಧವಾಗಿವೆ. ಪ್ರತಿಯೊಂದು
ಕ್ರಿಯಾಪದಗಳ ಪ್ರತ್ಯಯಗಳು ಬೇರೆ ಬೇರೆ ಇವೆ. ಆ ಪ್ರತ್ಯಯಗಳ
ವನ್ನು ಹಿಂದೆ (೧೩೫ನೆಯ ನಿಯಮದಲ್ಲಿ) ಹೇಳಿದ್ದೇವೆ. ಪ್ರತ್ಯಯಗಳ
ಯನ್ನು ಮುಂದಿನ ಪುಟದಲ್ಲಿ ಕೊಟ್ಟಿದ್ದೇವೆ.

೧೪೨. (ಮುಂದಿನ ಪುಟದಲ್ಲಿ ನೋಡಿರಿ.)

೧೪೩. ಈ ಮೇರೆಗೆ ಕ್ರಿಯಾಪದಗಳಿಗೆ ಅರ್ಥ, ಕಾಲ, ಪು
ಲಿಂಗ, ವಚನಗಳೆಂಬ ಅಯ್ದು ಲಕ್ಷಣಗಳಿವೆ.

## ವರ್ತಮಾನಕಾಲವು.

೧೪೪. ಧಾತುವಿಗೆ ವರ್ತಮಾನಕಾಲದ ಆಖ್ಯಾತಪ್ರತ್ಯಯಗಳು
ವಾದರೆ, ನಡುವೆ 'ಉತ್ತ' ಎಂಬ ಆಗಮುವಾಗುವುದು. ಮತ್ತೂ ಈ ಆಗ
ಪರವಾದ ಉ... ಧಾತುವಿನ ಅಂತ್ಯಸ್ವರಕ್ಕೆ ಲೋಪ ಬರುವುದು.

## ೧೫೨. ಆಖ್ಯಾತಪ್ರತ್ಯಯಗಳ ಪಟ್ಟಿ.

| | ಪುರುಷಾರ್ಥಕ | ಸರ್ವನಾಮಗಳು | ಸಂಭವಾರ್ಥ | | | ಸಂಶಯ | ನಿಷೇಧ | ವಿಧಿ |
|---|---|---|---|---|---|---|---|---|
| | | | ವರ್ತಮಾನ ಕಾಲ | ಭೂತ ಕಾಲ | ಭವಿಷ್ಯತ್ಕಾಲ | | | |
| ಏಕವಚನ | ೧ ಉತ್ತಮ ಪುರುಷ | ನಾನು | ಏನೆ | ಎನು | ಎನು | ಏನು | ಎನು | ಉವೆ |
| | ೨ ಮಧ್ಯಮ ಪುರುಷ | ನೀನು | ಈ<br>ಈಯೆ | ಎ | ಎ | ಈ<br>ಈಯೆ | ಎ | ಉವುದು<br>ಉವದು |
| | ೩ ಪ್ರ. ಪುಲ್ಲಿಂಗ | ಅವನು | ಆನೆ | ಅನು | ಅನು | ಆನು | ಅನು | ಅಲಿ |
| | ಸ್ತ್ರೀಲಿಂಗ | ಅವಳು | ಆಳೆ | ಅಳು | ಅಳು | ಆಳು | ಅಳು | |
| | ನಪುಂಸಕ | ಅದು | ಅದೆ<br>ಇದೆ | ಇತು | ಅದು<br>ಉದು | ಈತು | ಅದು | |
| ಬಹುವಚನ | ಉತ್ತಮ | ನಾವು | ಏವೆ | ಎವು | ಎವು | ಏವು | ಎವು | ಉವ (ಉವಾ)<br>ಓಣ |
| | ಮಧ್ಯಮ | ನೀವು | ಈರಿ | ಇರಿ | ಇರಿ | ಈರಿ | ಅರಿ | ಇರಿ |
| | ಪ್ರ. ಪು.<br>ಸ್ತ್ರೀ. | ಅವರು | ಆರೆ | ಅರು | ಅಗು | ಆರು | ಅರು | ಅಲಿ |
| | ನ. | ಅವು | ಅವೆ<br>ಇವೆ | ಅವು<br>ಉವು | ಅವು<br>ಉವು | ಆವು | ಅವು | |

ಧಾತುಗಳ ಮುಂದೆ ಯಕಾರಾಗಮವಾಗುವುದು. ಈ ನಿಯಮವು ಭವಿ
ಷ್ಯತ್ ಕಾಲಗಳಲ್ಲಿ ಬರುವ ಸ್ವರಾದಿ ಆಗಮಗಳಿಗೂ ಹತ್ತುವುದು.

ಉದಾಹರಣಗಳು: ಉಕಾರಾಂತಧಾತು—ಮಾಡು.

(೧) ಮಾಡು + ಏನೆ = ಮಾಡು + ಉತ್ತ + ಏನೆ = ಮಾಡುತ್ತೇನೆ, ಮಾಡು + ಏವೆ = ಮಾಡು + ಉತ್ತ + ಏವೆ = ಮಾಡುತ್ತೇವೆ; (೨) ಮಾಡುತ್ತೀ, ಮಾಡು[illegible] ಮಾಡುತ್ತೀರಿ; (೩) ಮಾಡುತ್ತಾನೆ, ಮಾಡುತ್ತಾಳೆ, ಮಾಡುತ್ತಾರೆ, ಮಾ[illegible] ಮಾಡುತ್ತಿದೆ; ಮಾಡುತ್ತವೆ, ಮಾಡುತ್ತಿವೆ.

ಹೀಗೆ ಅಡು, ಹೇಳು, ಕೂಗು ಮುಂತಾದವುಗಳನ್ನು ನಡಿಸಿರಿ.

ಇಕಾರಾಂತಧಾತು—ನುಡಿ.

(೧) ನುಡಿ + ಏನೆ = ನುಡಿ + ಉತ್ತ + ಏನೆ = ನುಡಿ + ಯ್* + ಉತ್ತ + [illegible] ನುಡಿಯುತ್ತೇನೆ, ನುಡಿಯುತ್ತೇವೆ; (೨) ನುಡಿಯುತ್ತೀ, ನುಡಿಯುತ್ತೀಯೆ; ನು[illegible] ತ್ತೀರಿ; (೩) ನುಡಿಯುತ್ತಾನೆ, ನುಡಿಯುತ್ತಾಳೆ, ನುಡಿಯುತ್ತಾರೆ, ನುಡಿಯು[illegible] ನುಡಿಯುತ್ತಿದೆ, ನುಡಿಯುತ್ತವೆ, ನುಡಿಯುತ್ತಿವೆ.

ಹೀಗೆ ಕಾ, ಕೀ, ನೋ, ಬೇ, ಹೊಡೆ ಮುಂತಾದವುಗಳನ್ನು ನಡಿಸಿರಿ.

## ಭೂತಕಾಲವು.

೧೪೫. ಭೂತಕಾಲದ ಪುರುಷಪ್ರತ್ಯಯಗಳು ಧಾತುವಿಗೆ ಪರವಾ[illegible] ಉಕಾರಾಂತಧಾತುವಿನ ಮುಂದೆ 'ಇದ' ಆಗಮವೂ ಉಳಿದ ಧಾ[illegible] ಮುಂದೆ ದ ಆಗಮವೂ ಆಗುತ್ತದೆ. ಭೂತನಪುಂಸಕೈಕವಚನಕ್ಕೆ ಮಾತ್ರ[illegible] ಮವಿಲ್ಲ.

ಉದಾ:

ಉಕಾರಾಂತಧಾತು—ಮಾಡು.

(೧) ಮಾಡು + ಎನು = ಮಾಡು + ಇದ = ಎನು = ಮಾಡಿದೆನು, ಮಾಡಿದೆ[illegible] ಮಾಡಿದೆ, ಮಾಡಿದಿರಿ; (೩) ಮಾಡಿದನು, ಮಾಡಿದಳು, ಮಾಡಿದರು; ಮಾ[illegible] ಇತು = ಮಾಡಿತು; ಮಾಡು + ಉವು = ಮಾಡು + ಇದ + ಉವು = ಮಾಡಿದುವು.

ಹೀಗೆ ನೋಡು, ಕೂಗು ಮುಂತಾದ ಧಾತುಗಳನ್ನು ನಡಿಸಿರಿ.

ಇಕಾರಾಂತಧಾತು—ನುಡಿ.

(೧) ನುಡಿ + ಎನು = ನುಡಿ + ದ + ಎನು = ನುಡಿದೆನು, ನುಡಿದೆವು; (೨) [illegible] ನುಡಿದಿರಿ; (೩) ನುಡಿದನು, ನುಡಿದಳು, ನುಡಿದರು; ನುಡಿ + ಇತು = ನುಡಿ + ಯ್ ಇತು = ನುಡಿಯಿತು; ನುಡಿ + ಉವು = ನುಡಿ + ದ + ಉವು + ನುಡಿದುವು.

ಹೀಗೆ ಕರೆ, ಹೊಡೆ, ಕಾ, ಎಸೆ ಮುಂತಾದ ಧಾತುಗಳನ್ನು ನಡಿಸಿರಿ.

* ಸಂಧಿಯ ೩೭ನೆಯ ನಿಯಮವನ್ನು ನೋಡು.

## ಭವಿಷ್ಯತ್ಕಾಲವು.

೧೪೬. ಧಾತುವಿಗೆ ಭವಿಷ್ಯತ್ತಿನ ಪ್ರತ್ಯಯಗಳು ಪರವಾದರೆ, ನಡುವೆ 'ಉವ' ಆಗಮವಾಗುತ್ತದೆ.

ಉದಾ:

ಉಕಾರಾಂತಧಾತು-ಮಾಡು.

(೧) ಮಾಡು + ಎನು = ಮಾಡು + ಉವ + ಎನು = ಮಾಡುವೆನು, ಮಾಡುವೆವು; (೨) ಮಾಡುವೆ, ಮಾಡುವಿರಿ; (೩) ಮಾಡುವನು, ಮಾಡುವಳು, ಮಾಡುವರು; ಮಾಡುವದು, ಮಾಡುವುದು, ಮಾಡುವುವು, ಮಾಡುವವು.

ಹೀಗೆ ಬಾಳು, ಕೂಗು, ಕೂಡು ಮುಂತಾದವುಗಳನ್ನು ನಡಿಸು.

ಇಕಾರಾಂತಧಾತು—ನುಡಿ.

(೧) ನುಡಿ + ಎನು = ನುಡಿ + ಉವ + ಎನು = ನುಡಿಯುವೆನು, ನುಡಿಯುವೆವು; (೨) ನುಡಿಯುವೆ, ನುಡಿಯುವಿರಿ; (೩) ನುಡಿಯುವನು, ನುಡಿಯುವಳು, ನುಡಿಯುವರು; ನುಡಿಯುವುದು, ನುಡಿಯುವುವು.

## ಸಂಶಯಾರ್ಥವು.

೧೪೭. ಸಂಶಯಾರ್ಥದಲ್ಲಿ ಧಾತುಗಳ ಮುಂದೆ ಆಖ್ಯಾತಪ್ರತ್ಯಯಗಳು ಸೇರುವಾಗ ಭೂತಕಾಲದಲ್ಲಿ ಆಗುವಂತೆ ಹಲವು ವಿಕಾರಗಳಾಗುತ್ತವೆ.

(೧) ಉಕಾರಾಂತವಲ್ಲದ ಧಾತುಗಳ ಮುಂದೆ 'ದ' ಆಗಮವು ಬರುತ್ತದೆ. ಆಗ ಆ ಆಗಮಕ್ಕೆ ಭೂತಕಾಲದಲ್ಲಿ ಆಗುವ ವಿಕಾರಗಳು ಇಲ್ಲಿಯೂ ಬರುತ್ತವೆ.

ಉದಾ: ನುಡಿ—ನುಡಿದಾನು; ಕೊಲ್ಲು—ಕೊಂದಾನು; ನಿಲ್ಲು—ನಿಂತಾನು; ಗೆಲ್ಲು—ಗೆದ್ದಾನು.

(೨) ಉಕಾರಾಂತಧಾತುಗಳಲ್ಲಿ (ಅ) 'ಉ' ಲೋಪವಾಗದೇ ಇದ್ದ ಧಾತುಗಳ ಮುಂದೆ ''ಇಯ್'' ಆಗಮವು ಬರುವುದು. (ಆ) 'ಉ' ಲೋಪವಾಗಿ ವಿಕಾರಹೊಂದುವ ಧಾತುಗಳ ಮುಂದೆ ಯಾವ ಆದೇಶವಿಲ್ಲ: ಭೂತಕಾಲದ ವಿಕಾರಗಳು ಮಾತ್ರ ಇಲ್ಲಿಯೂ ಆಗುವುವು.

ಉದಾ: (ಅ) ಕೇಳು—ಕೇಳಿಯಾನು; (ಆ) ಕೆಡು—ಕೆಟ್ಟಾನು ಇತ್ಯಾದಿ.

## ನಿಷೇಧಾರ್ಥವು.

೧೪೮ ನಿಷೇಧಾರ್ಥದಲ್ಲಿ ಧಾತುವಿಗೆ ಪ್ರತ್ಯಯಗಳು ಯಾವ ಆಗಮವೂ ಇಲ್ಲದೆ ಹತ್ತುವುವು. ಆಗ ಸಾಮಾನ್ಯಸಂಧಿಯ ನಿಯಮಗಳಂತೆ ಸಂಧಿಯಾಗುತ್ತದೆ.

ಉದಾ:

ಉಕಾರಾಂತಧಾತು—ಮಾಡು.

(೧) ಮಾಡು* + ಎನು = ಮಾಡೆನು, ಮಾಡೆವು; (೨) ಮಾಡೆ, ಮಾಡ
(೩) ಮಾಡನು, ಮಾಡಳು, ಮಾಡರು; ಮಾಡದು, ಮಾಡವು.

ಹೀಗೆ ನೋಡು, ತೂಗು ಮುಂತಾದವುಗಳನ್ನು ನಡಿಸುವುದು.

ಇಕಾರಾಂತಧಾತು—ನುಡಿ.

(೧) ನುಡಿ + ಎನು = ನುಡಿ + ಯ್ + ಎನು = ನುಡಿಯೆನು, ನುಡಿಯೆವು; (೨) ನುಡಿಯೆ, ನುಡಿಯರಿ; (೩) ನುಡಿಯನು, ನುಡಿಯಳು, ನುಡಿಯರು, ನುಡಿಯ ನುಡಿಯವು.

ಹೀಗೆ ಕಾ, ಕೀ, ನೋ, ಕರೆ, ಹೊಡೆ ಮುಂತಾದವುಗಳನ್ನು ನಡಿಸುವುದು.

ತರು, ಬರು ಧಾತುಗಳ ಅಕಾರಕ್ಕೆ ನಿಷೇಧಾರ್ಥದಲ್ಲಿ ಆಕಾರದೇ ವಾಗುವುದು.

ಉದಾ: ತಾರೆನು, ಬಾರಳು, ತಾರವು, ಬಾರರು, ಇತ್ಯಾದಿ.

ವಿಧ್ಯರ್ಥವು.

೧೪೯. ವಿಧ್ಯರ್ಥದ ಪ್ರತ್ಯಯಗಳು ಏನೂ ವಿಶೇಷ ವಿಕಾರವಿಲ್ಲ ಧಾತುಗಳಿಗೆ ಹತ್ತುವುವು. ಮಧ್ಯಮಪುರುಷದ ಏಕವಚನದಲ್ಲಿ ಪ್ರತ್ಯಯ ಸಾಮಾನ್ಯವಾಗಿ ಲೋಪವಾಗುವುದು; ಮತ್ತು ಆಗ ವಿಕಲ್ಪವಾಗಿ ಕೊನೆ ಅಕಾರಾದೇಶವೂ ಆಗುವುದು. 'ಅ' ಪ್ರತ್ಯಯವು ಎಲ್ಲ ಧಾತುಗಳಿ ಹತ್ತುವುದು.

'ಉದು' ಹತ್ತಿದ ರೂಪವು ಮಧ್ಯಮಪುರುಷದ ಎರಡೂ ವಚನಗಳ ಸೂಚಿಸುವುದು.

ಉದಾ:

ಉಕಾರಾಂತಧಾತು—ಮಾಡು.

(೧) ಮಾಡು + ಉವೆ = ಮಾಡುವೆ, ಮಾಡುವ, † (೨) ಮಾಡು, ಮಾಡ ಮಾಡುವುದು, ಮಾಡಿರಿ; (೩) ಮಾಡಲಿ.

ಹೀಗೆ ನೋಡು, ಬಾಳು ಮುಂತಾದವುಗಳನ್ನು ನಡಿಸಿರಿ.

---

* ಸಂಧಿಯ ೩೪ನೆಯ ನಿಯಮವನ್ನು ನೋಡು. † ಮಾಡೋಣ (= ಮಾಡುವ ಎಂಬ ರೂಪವೂ ಉತ್ತಮಪುರುಷ ಬಹುವಚನದಲ್ಲಿ ಬಹುಶಃ ಮಾತಿನಲ್ಲಿಯೂ ಕ್ವಚಿತ್ತಾಗಿ ಬರೆವಣಿಗೆಯಲ್ಲಿಯೂ ಉಪಯೋಗವಾಗುತ್ತದೆ.

## ಇಕಾರಾಂತ ಧಾತು—ನುಡಿ.

(೧) ನುಡಿ+ಉವೆ=ನುಡಿಯುವೆ, ನುಡಿಯುವ; (೨) ನುಡಿ, ನುಡಿಯು, ನುಡಿಯುವುದು, ನುಡಿಯಿರಿ; (೩) ನುಡಿಯಲಿ.

ಹೀಗೆ ಕರೆ, ನಡೆ ಮುಂತಾದವುಗಳನ್ನು ನಡಿಸುವುದು.

### ಮಧ್ಯಮಪುರುಷೈಕವಚನಕ್ಕೆ ಉದಾಹರಣೆಗಳು:

ಏಕಾಕ್ಷರಿ—ಕಾ=ಕಾಯಿ, ಕೀ=ಕೀಯಿ, ಬಾ=ಬಾಯಿ, ನೋ=ನೋಯಿ, ಬೇ=ಬೇಯಿ, ಸಾ=ಸಾಯಿ ಮು.

ಯಕಾರಾಂತಕ್ಕೆ—ಒಯ್=ಒಯ್ಯಿ, ಅರಯ್=ಅರಯ್ಯಿ, ಬಯ್=ಬಯ್ಯಿ, ಸುಯ್=ಸುಯ್ಯಿ, ಹೊಯ್=ಹೊಯ್ಯಿ, ಕೊಯ್=ಕೊಯ್ಯಿ ಮು.

ಯಕಾರಾಂತವಲ್ಲದ ವ್ಯಂಜನಾಂತಕ್ಕೆ—ಇರ್=ಇರು, ಕೇಳ್=ಕೇಳು.

ಓ ಧಾತುವಿಗೆ—ಓ=ಓವು.

## ವಿಕೃತ ಕ್ರಿಯಾಪದಗಳು.

೧೫೦. ಎಷ್ಟೋ ಧಾತುಗಳ ಆಖ್ಯಾತರೂಪಗಳು 'ಮಾಡು, ನುಡಿ' ಧಾತುಗಳಿಗೆ ಹೇಳಿದ ಸಾಮಾನ್ಯ ನಿಯಮಗಳಂತೆ ಸಿದ್ಧವಾಗುವುದಿಲ್ಲ; ವಿಶೇಷ ವಿಕಾರಗಳನ್ನು ಹೊಂದುತ್ತವೆ. ಇದರಿಂದ ಅಂತಹ ಆಖ್ಯಾತ ರೂಪಗಳಿಗೆ ವಿಕೃತ ಕ್ರಿಯಾಪದಗಳೆಂಬ ಹೆಸರು ಬಂದಿದೆ.

ಉದಾ: ಕೊಟ್ಟನು, ಉಂಬನು, ಬಾರನು ಮು.

೧೫೧. 'ಓ' ಧಾತುವಿಗೆ ಸ್ವರಾದಿಪ್ರತ್ಯಯಗಳು ಪರವಾದಲ್ಲೆಲ್ಲ ನಿತ್ಯವಾಗಿ ವಕಾರಾಗಮವಾಗುತ್ತದೆ.

ಉದಾ: ಓವುತ್ತೇನೆ, ಓವಿದುವು, ಓವೀರಿ, ಓವಲಿ ಇತ್ಯಾದಿ.

## ವಿಕೃತ ವರ್ತಮಾನಕಾಲವು.

೧೫೨. ವರ್ತಮಾನಕಾಲದಲ್ಲಿ ಕ್ರಿಯಾಪದಗಳಿಗೆ ವಿಕಾರವಿಲ್ಲ. ಆದರೆ ಇರು ಧಾತುವಿನಿಂದ ಕೆಲವು ವಿಕೃತವರ್ತಮಾನ ರೂಪಗಳಾಗುತ್ತವೆ.

ಉದಾ: (೧) ಇದ್ದೇನೆ, ಇದ್ದೇವೆ; (೨) ಇದ್ದೀ, ಇದ್ದೀರಿ; (೩) ಇದ್ದಾನೆ, ಇದ್ದಾಳೆ, ಇದ್ದಾರೆ; ಇದೆ, ಅದೆ, ಇವೆ, ಅವೆ.

---

* ಈ ರೂಪಗಳ ಉತ್ಪತ್ತಿ: ಇರ್ ಧಾತುವಿಗೆ ದ ಎಂಬ ಭೂತಕಾಲದ ಆಗಮವನ್ನು ಹಚ್ಚಿದರೆ ಇರ್ದ ಎಂಬ ಭೂತಕೃದ್ವಾಚಕವು ಸಿದ್ಧವಾಗುವದು. ಇದಕ್ಕೆ ಹೊಸಗನ್ನಡದಲ್ಲಿ ಇದ್ದ ಎಂಬ ರೂಪವು ಬರುವದು. ಈ ರೂಪಕ್ಕೆ ಏನೆ ಮುಂತಾದ ವರ್ತಮಾನ ಪುರುಷ ಪ್ರತ್ಯಯಗಳನ್ನು ಹಚ್ಚಿದರೆ, ಇದ್ದೇನೆ ಮುಂತಾದ ರೂಪಗಳಾಗುತ್ತವೆ. ಇದರಂತೆ ನಪುಂಸಕಲಿಂಗದ ರೂಪಗಳು ಇದ್ದದೆ, ಇದ್ದವೆ ಎಂದಾಗಬೇಕು. ಆದರೆ ಈ ರೂಪಗಳ ಮಧ್ಯ ವರ್ಣಕ್ಕೆ ಲೋಪ ಬಂದು ಇದೆ, ಇವೆ ಎಂಬ ರೂಪಗಳಾಗಿವೆ. ಬಳಿಕ ಈ ರೂಪಗಳ ಆದಿ ಸ್ವರಗಳಿಗೆ ಅಕಾರಾದೇಶವಾಗಿ ಅದೆ, ಅವೆ ಆಗಿವೆ.

## ವಿಕೃತಭೂತಕ್ರಿಯಾಪದಗಳು.

೧೫೫. (ಅ) ಭೂತಕಾಲದಲ್ಲಿ ವಿಕಾರಹೊಂದುವ ಧಾತುಗಳು ಇವೆ; ಅವೆಲ್ಲ ಸಂಶಯಾರ್ಥದಲ್ಲಿಯೂ ವಿಕಾರಹೊಂದುತ್ತವೆ ಅವಕ್ಕೆ ಆಖ್ಯಾತ ಪ್ರತ್ಯಯಗಳು ಪರವಾದರೆ, ನಡುವೆ ದವರ್ಣಾಗಮವಾಗುತ್ತದೆ. ಕೆಲವು ಧಾತುಗಳಿಗೆ ನಪುಂಸಕೈಕವಚನದಲ್ಲಿ ದವರ್ಣಾಗಮವಾಗದೆ, ವಿಕಾರವಾಗುವದು. ಅದರಿಂದ ೬೧-೬೨ ಪುಟಗಳಲ್ಲಿ ಕೊಟ್ಟ ಪಟ್ಟಿ ಭೂತ ನಪುಂಸಕೈಕವಚನವನ್ನು ಸಿದ್ಧಮಾಡಿ ಬರೆದಿದೇವೆ ಮತ್ತು ದವ ಗಮವನ್ನು ಧಾತುವಿಗೆ ಹಚ್ಚಿ, ಸಿದ್ಧ ಮಾಡಿದ ಸಾಮಾನ್ಯ† (ಭೂತಕೃದ್ವಾ ರೂಪಗಳನ್ನು ಪಟ್ಟಿಯಲ್ಲಿ ತೋರಿಸಿದ್ದೇವೆ. ಅವಕ್ಕೆ ಭೂತಕಾಲದ ಪ್ರ ಗಳನ್ನು ಹಚ್ಚಿ ಸಂಶಯಾರ್ಥದ ಕ್ರಿಯಾಪದಗಳನ್ನೂ ಸಿದ್ಧಮಾಡಬೇಕು ಧಾತುಗಳ ಭೂತಕ್ರಿಯಾನ್ಯೂನಗಳಿಗೂ ವಿಕಾರವಾಗುವ ಕಾರಣ ಅ ಪಟ್ಟಿಯಲ್ಲಿ ಕೊಟ್ಟಿದ್ದೇವೆ.

(ಆ) ಕೆಲವು ಧಾತುಗಳಿಗೆ ಭೂತದ ದವರ್ಣಾಗಮ ಪರವಾ ತೋರುವ ಸಾಮಾನ್ಯ ವಿಕಾರವು ಯಾವುವೆಂದರೆ:

ದವರ್ಣಾಗಮವು ಪರವಾದ ಎರಡು ಮಾತ್ರೆಗಳುಳ್ಳ ಗು, ಡು ವರ್ಣಾಂತಧಾತುಗಳ ಅಂತ್ಯಸ್ವರಕ್ಕೆ ಲೋಪ ಬರುವುದು. ಉಪಾಂತ್ಯವಾದ ವರ್ಗತೃತೀಯ ವ್ಯಂಜನಕ್ಕೆ ಪ್ರಥಮ ವ್ಯಂಜನದ ವಾಗುವುದು. ಬಳಿಕ ಆಗಮದ ದಕಾರವೂ ಅದೇ ಪ್ರಥಮಾಕ್ಷರದ ವನ್ನು ಧರಿಸುವುದು.

ಉದಾ: ನಗು+ದ=ನಗ್+ದ=ನಕ್+ಕ್=ನಕ್ಕ, ಇಡು+ದ= ದ=ಇಟ್+ದ=ಇಟ್+ಟ=ಇಟ; ಮುದು=ಮುತ್ತು ಮು.

ಇದಲ್ಲದೆ ಇನ್ನೂ ಕೆಲವು ಸಾಮಾನ್ಯ ವಿಕಾರಗಳುಂಟು. ಅವನ್ನೆಲ್ಲ ೬೧-೬೨) ಪಟ್ಟಿಯಲ್ಲಿ ತೋರಿಸಿದ ಉದಾಹರಣಗಳಿಂದ ತಿಳಿದುಕೊಳ್ಳ

## ವಿಕೃತಭವಿಷ್ಯತ್ಕ್ರಿಯಾಪದಗಳು.

೧೫೮. '(ಅನ್ನು) ಎನ್ನು, ತಿನ್ನು, ಉಣ್ಣು, ಕೊಳ್ಳು, ಕಾಣು' ಧಾತು ಭವಿಷ್ಯತ್ತಿನ 'ಉವ' ಆಗಮವು ಪರವಾದರೆ, ಏನೂ ವಿಕಾರವಾಗದೆ, '(ಅನ್

---

† ಧಾತುಗಳಿಗೆ ಕಾಲಸೂಚಕಾಗಮಗಳನ್ನು ಹಚ್ಚಿದ್ದರಿಂದ ಉಂಟಾಗುವ ರೂ ಸಾಮಾನ್ಯ ರೂಪಗಳು. ಇವಕ್ಕೆ ಸಂಭವಾರ್ಥದ ಪುರುಷಪ್ರತ್ಯಯಗಳು ಹತ್ತುವವು.

ಎನ್ನುವ, ತಿನ್ನುವ, ಉಣ್ಣುವ, ಕೊಳ್ಳುವ, ಕಾಣುವ' ಎಂಬ ರೂಪಗಳು (ಕೃದ್ವಾಚಕಗಳು) ಆಗುವುವು. ಇವಕ್ಕೆ ಭವಿಷ್ಯತ್ತಿನ ಪುರುಷಪ್ರತ್ಯಯ*ಗಳನ್ನು ಹಚ್ಚಿದರೆ ಆ ಕಾಲದ ಕ್ರಿಯಾಪದಗಳು ಸಿದ್ಧವಾಗುವುವು.

ಆದರೆ ಈ ಧಾತುಗಳಿಗೆ ಹಳಗನ್ನಡದ ಭವಿಷ್ಯತ್ಕಾಲದ 'ವ' ಆಗಮವು ಪರವಾದರೆ, ಪ್ರಕೃತಿಯ ಕಡೆಯ ಮೂರು ವರ್ಣಗಳಿಗೆ ಅನುಸ್ವಾರಾದೇಶವೂ, ಆಗಮದ ವಕಾರಕ್ಕೆ ಬಕಾರಾದೇಶವೂ ಆಗಿ, '(ಅಂಬ,) ಎಂಬ, ತಿಂಬ, ಉಂಬ ಕೊಂಬ, ಕಾಂಬ,' ಎಂಬ ಸಾಮಾನ್ಯ ರೂಪಗಳು ಸಿದ್ಧವಾಗುವುವು. ಇವಕ್ಕೆ ಭವಿಷ್ಯತ್ತಿನ ಪುರುಷಪ್ರತ್ಯಯಗಳನ್ನು ಹಚ್ಚಲು, '(ಅಂಬೆನು,) ಎಂಬೆನು, ತಿಂಬೆನು, ಉಂಬೆನು, ಕೊಂಬೆನು, ಕಾಂಬನು,' ಮುಂತಾದ ಭವಿಷ್ಯತ್ತಿನ ಕ್ರಿಯಾಪದಗಳಾಗುವುವು.

೧೫೫. 'ಸಮರ್ಥನಾಗು' ಎಂಬ ಅರ್ಥದ 'ಆರು' ಎಂಬ ಧಾತುವಿನ ಭವಿಷ್ಯತ್ಕಾಲದ ರೂಪಗಳು ಮತ್ತು ನಿಷೇಧ ರೂಪಗಳು ಮಾತ್ರ ಹೊಸಗನ್ನಡದಲ್ಲಿ ಬಳಕೆಯಲ್ಲಿವೆ. ಭವಿಷ್ಯತ್ಕಾಲದ ರೂಪಗಳು ವರ್ತಮಾನಕಾಲದ ಅರ್ಥವನ್ನು ಸೂಚಿಸುತ್ತವೆ.

ಭವಿಷ್ಯತ್ಕಾಲದ ರೂಪಗಳು:—(೧) ಅಪೆನು, ಅಪೆವು; (೨) ಅಪೆ, ಅಪಿರಿ; (೩) ಆಪನು, ಆಪಳು, ಆಪದು; ಆಪರು, ಆಪವು.

ನಿಷೇಧ ರೂಪಗಳು:— (೧) ಆರೆನು, ಆರೆವು; (೨) ಆರೆ, ಆರಿರಿ; (೩) ಆರನು, ಆರಳು, ಆರದು, ಆರರು, ಆರವು.

## ವಿಕೃತನಿಷೇಧಕ್ರಿಯಾಪದಗಳು.

೧೫೬. 'ತರು, ಬರು' ಧಾತುಗಳಿಗೆ ನಿಷೇಧ ಪ್ರತ್ಯಯಗಳು ಪರವಾದರೆ ಧಾತುವಿನ ಅಕಾರವು ದೀರ್ಘವಾಗುವದು. (ಈ ನಿಯಮವು ಮುಂದೆ ಕೃದಂತ ಪ್ರಕರಣದಲ್ಲಿ ವಿವರಿಸಲ್ಪಡುವ ಕ್ರಿಯಾನ್ಯೂನಕೃದ್ವಾಚಕ ಕ್ರಿಯಾನಾಮಗಳಿಗೂ ಹತ್ತುವುದು.)

ಉದಾ: (೧) ತಾರೆನು, ತಾರೆವು; (೨) ತಾರೆ, ತಾರಿರಿ; (೩) ತಾರನು, ತಾರಳು, ತಾರರು; ತಾರದು, ತಾರವು.

೧೫೭. ಒಲಿಯೆಂಬರ್ಥದ 'ಒಲ್' ಧಾತುವಿನ ನಿಷೇಧಾರ್ಥದ ಕ್ರಿಯಾಪದ ರೂಪಗಳು ಮಾತ್ರ ಈಗ ಬಳಕೆಯಲ್ಲಿರುವುವು: (೧) ಒಲ್ಲೆನು, ಒಲ್ಲೆವು; (೨) ಒಲ್ಲೆ, ಒಲ್ಲರಿ; (೩) ಒಲ್ಲನು, ಒಲ್ಲಳು, ಒಲ್ಲರು; ಒಲ್ಲದು, ಒಲ್ಲವು.

* ಆಖ್ಯಾತಪ್ರತ್ಯಯ ಅಥವಾ ಕ್ರಿಯಾ ವಿಭಕ್ತಿಪ್ರತ್ಯಯಗಳಿಗೆ ಪುರುಷಪ್ರತ್ಯಯಗಳೆಂದೂ ಹೆಸರು ಇರುತ್ತದೆ.

## ವಿಕೃತಭೂತರೂಪಗಳ ಪಟ್ಟಿಯು

| ಧಾತು | ಭೂತನ್ಯೂನ | ಭೂತ ಕೃದ್ವಾಚಕ | ಭೂತ ಆಖ್ಯಾತ ಪ್ರಥಮಪುರುಷ ನಪುಂಸಕೈಕವಚನ | ಉದಾಹರಣೆಗೆ ಅನುಸಾರವಾದ ಧಾತುಗಳು |
|---|---|---|---|---|
| ೧. ಬಿರಿ | ಬಿರಿದು<br>ಬಿರಿತು | ಬಿರಿದ<br>ಬಿರಿತ | ಬಿರಿದಿತು<br>ಬಿರಿಯಿತು | ಅಲೆ, ಬಲಿ, ಅರಿ, ಮುನಿ, ಮರೆ, ಎಸೆ, ಕಿಸಿ, ಕುಸಿ, ದುಡಿ, ಪಡೆ, ನುಸಿ, ಮಸೆ, ಹಸಿ, ಹುಸಿ, ಹೊಸೆ. |
| ೨. ಕುರಿ | ಕುರಿತು | ಕುರಿತ | ಕುರಿಯಿತು ಕುರಿತಿತು | ಅವಿ, ಕಲಿ, ಮಲೆ, ಕೊಳೆ, ಚಳಿ, ಮೊಳೆ. |
| ೩. ಬಾ | ಬಾತು | ಬಾತ | ಬಾತಿತು | ಬೀ, ಕೀ, ಹೂ, ಕಳಿ. |
| ೪. ಬೆವರು | ಬೆವರ್ತು | ಬೆವರ್ತ | ಬೆವರ್ತಿತು | ಕೊನರು, ಚಿಗುರು, ತಳಿರು, ಮಿಳಿರು, ಕವಲು, ಮಡಲು. |
| ೫. ಮಿದಿ | ಮಿತ್ತು | ಮಿತ್ತ | ಮಿತ್ತಿತು | ಮುದು. |
| ೬. ಅನ್ನು | ಅಂದು | ಅಂದ | ಅಂದಿತು | ಎನ್ನು, ತಿನ್ನು. |
| ೭. ಉಣ್ಣು | ಉಂಡು | ಉಂಡ | ಉಂಡಿತು | |
| ೮. ಕಾಣು | ಕಂಡು | ಕಂಡ | ಕಂಡಿತು | |
| ೯. ಕೊಳ್ಳು | ಕೊಂಡು | ಕೊಂಡ | ಕೊಂಡಿತು | |
| [illegible] | [illegible] | [illegible] | [illegible] | [illegible] |
| ೧೧. ನಿಲ್ಲು | ನಿಂತು | ನಿಂತ | ನಿಂತಿತು | |

| | | | | |
|---|---|---|---|---|
| ೯. ಕೊಳ್ಳು | ಕೊಂಡು | ಕೊಂಡ | ಕೊಂಡಿತು | |
| ೧೧. ನಲ್ಲು | ನಿಂತು | ನಿಂತ | ನಿಂತಿತು | |
| ೧೨. ಗೆಲ್ಲು | ಗೆದ್ದು | ಗೆದ್ದ | ಗೆದ್ದಿತು | ಮೆಲ್ಲು, ಕಳು, ಇರು.* |
| ೧೩. ಹೊರು | ಹೊತ್ತು | ಹೊತ್ತ | ಹೊತ್ತಿತು | ಆಸರು, ಎಚ್ಚರು, ತೆರು, ಬೇಸರು, ಹೆರು, ಆಳು, ಉಳು. |
| ೧೪. ಏಳು | ಎದ್ದು | ಎದ್ದ | ಎದ್ದಿತು | ಬೀಳು.† |
| ೧೫. ಕೀಳು. | ಕಿತ್ತು | ಕಿತ್ತ | ಕಿತ್ತಿತು | |
| ೧೬. ಇಡು | ಇಟ್ಟು | ಇಟ್ಟ | ಇಟ್ಟಿತು | ಅಡು, ಉಡು, ಕೆಡು, ಕೊಡು, ತೊಡು, ನೆಡು, ಪಡು, ಬಿಡು, ಮಡು, ಸುಡು. |
| ೧೭. ನಗು | ನಕ್ಕು | ನಕ್ಕ | ನಕ್ಕಿತು | ಉಗು, ಒಗು, ಮಿಗು, ಹೊಗು. |
| ೧೮. ಬಿಸಾಡು | ಬಿಸಾಟು | ಬಿಸಾಟ | ಬಿಸಾಟಿತು | ಬಿಸುಡು, ಹೊರಡು. |
| ೧೯. ಈನು | ಈದು | ಈದ | ಈಯಿತು | |
| ೨೦. ಸೀನು | ಸೀತು | ಸೀತ | ಸೀತಿತು | ಆನು, ನೋನು, ಕೂರು, ಜೋಲು ನೂಲು, ನೇಲು, ಸಾಲು, ಸೋಲು, ಹೋಲು. |
| ೨೧. ನೋ | ನೊಂದು | ನೊಂದ | ನೊಂದಿತು | ಬೇ, ವಿಾ. |
| ೨೨. ಈ | ಇತ್ತು | ಇತ್ತ | ಇತ್ತಿತು | ಸಾ. |
| ೨೩. ಆಗು | ಆಗಿ | ಆದ | ಆಯಿತು | ಹೋಗು. |

*'ಇರು' ಧಾತುವಿನ ಭೂ. ನ. ಏ. ವ 'ಇತ್ತು' ಎಂದೂ ಉಂಟು. †'ಬೀಳು' ಧಾತುವಿನ ಭೂ. ನ. ಏ. ವ 'ಬಿತ್ತು' ಎಂದೂ ಉಂಟು.

## ವಿಕೃತವಿಧಿಕ್ರಿಯಾಪದಗಳು.

೧೫೮. 'ತರು, ಒರು, ಇರು, ಕೊಳ್ಳು, ಜೋಲು' ಎಂಬ ಧಾತು ವಿಧಿ ಮಧ್ಯಮಪುರುಷದ ರೂಪಗಳು ವಿಶೇಷ ವಿಕಾರವನ್ನು ಹೊಂದುವು; ಅವನ್ನು ಕೆಳಗೆ ಬರೆಯುತ್ತೇವೆ.

| ಧಾತು | ಏ. ವ. | ಬ. ವ. |
|---|---|---|
| ತರು. | ತಾ. | ತನ್ನಿ, ತರ್ರಿ, ತನ್ನಿ |
| ಬರು. | ಬಾ. | ಬನ್ನಿ, ಬರ್ರಿ, ಬನ್ನಿ |
| ಇರು. | ಇರು. | ಇರಿ, ಇರ್ರಿ. |
| ಕೊಳ್ಳು. | ಕೊಳ್ಳು, 'ಕೋ.' | ಕೊಳ್ಳಿರಿ. |
| ಜೋಲು. | ಜೋಲು, 'ಜೋ.' | ಜೋಲಿರಿ. |

೧೫೯. ತಿಳಿಯೆಂಬರ್ಥದ 'ಒಲ್' ಎಂಬ ಧಾತುವಿನ ಕೆಳಗೆ ಕಾಣು ರೂಪಗಳು ಮಾತ್ರ ಬಳಿಕೆಯಲ್ಲಿರುವುವು. ಹಳಗನ್ನಡ ಪದ್ಧತಿಯಂತೆ ಎವು ಮುಂತಾದ ಸಾಮಾನ್ಯ ಆಖ್ಯಾತ ಪ್ರತ್ಯಯಗಳನ್ನು ಹಚ್ಚುವುದ (೧) ಒಲ್ಲೆನು, ಒಲ್ಲೆವು; (೨) ಒಲ್ಲೆ, ಬಲ್ಲರಿ; (೩) ಒಲ್ಲನು, ಒಲ್ಲಳು, ಒ ಬಲ್ಲದು, ಬಲ್ಲವು ಎಂಬ ರೂಪಗಳಾಗಿವೆ.

## ಅವ್ಯಯಕ್ರಿಯಾಪದಗಳು.

೧೬೦. ಕೆಲವು ಧಾತುಗಳ ರೂಪಗಳು ಅತಿ ಗೂಢವಿಕಾರ ಹೊಂದಿ, ಕಾಲ ಪುರುಷ ಲಿಂಗ ವಚನಗಳ ಭೇದವಿಲ್ಲದೆ ವಾಕ್ಯ ಸಮ ಯನ್ನು ಸೂಚಿಸುತ್ತವೆ. ಆದರಿಂದ ಅವಕ್ಕೆಲ್ಲ ಅವ್ಯಯ-ಕ್ರಿಯಾ ಗಳೆನ್ನುವರು. ಅವು ಯಾವುವೆಂದರೆ:-

ಇಲ್ಲ, ಅಲ್ಲ, ಸಾಕು, ಬೇಕು, ಬೇಡ, ಹೌದು, ತಕ್ಕದ್ದು ಮು.

ಇವಕ್ಕೆ ಧಾತುಗಳೂ ಪ್ರತ್ಯಯಗಳೂ ಇವೆ. ಬೇಕಾದವರು ಕಯ್ಪಿ ನೋಡಬೇಕು. ಇಲ್ಲವೆ ಬಲ್ಲವರಿಂದ ತಿಳಿದುಕೊಳ್ಳಬೇಕು.

## ಧಾತುಗಳ ಕರ್ಮಾರ್ಥಕ್ರಿಯಾಪದರೂಪಗಳು.

೧೬೧. ಸಕರ್ಮಕಧಾತುಗಳಿಗೆ 'ಅಲ್' ಎಂಬ ಪ್ರತ್ಯಯವನ್ನು ಉಂಟಾದ ಸಾಮಾನ್ಯರೂಪಕ್ಕೆ 'ಪಡು' ಧಾತುವಿನ ಕ್ರಿಯಾಪದ ಜೋಡಿಸಿದರೆ, ಕರ್ಮವನ್ನು ಹೇಳುವ ಕ್ರಿಯಾಪದಗಳಾಗುವುವು.

ಉದಾ: ಮಾಡು+ಅಲ್+ಪಡುತ್ತದೆ=ಮಾಡಲ್ಪಡುತ್ತದೆ; ನುಡಿಯಲ್+

=ನುಡಿಯಲ್ಪಟ್ಟಿತು ಮು.

## ಅವ್ಯಯ ಪ್ರಕರಣ

೧೬೨. ರೂಪಭೇದವಿಲ್ಲದುವು ಎಂದರೆ ಲಿಂಗ ವಚನ ವಿಭಕ್ತಿಗಳ ವಿಕಾರವಿಲ್ಲದ ಶಬ್ದಗಳು ಅವ್ಯಯಗಳೆನಿಸುತ್ತವೆ. ಉದಾ:

ಅಪವಾದ: ಆದರೆ ಕೆಲವು ಸ್ಥಳವಾಚಕ ಕಾಲವಾಚಕ ಅವ್ಯಯಗಳು ತೃತೀಯಾ ಚತುರ್ಥೀ ಪಂಚಮೀ ಷಷ್ಠೀ ಸಪ್ತಮೀ ವಿಭಕ್ತಿ ಪ್ರತ್ಯಯಗಳನ್ನು ಹೊಂದುತ್ತವೆ. ಅವು ಯಾವವೆಂದರೆ–

### ಸ್ಥಳವಾಚಕ ಕ್ರಿಯಾ ವಿಶೇಷಣಗಳು

ಅಲ್ಲಿ, ಇಲ್ಲಿ, ಎಲ್ಲಿ, ಅತ್ತ, ಇತ್ತ, ಎತ್ತ, ಸುತ್ತ, ಆಚೆ, ಈಚೆ, ಹಿಂದು, ಮುಂದು, ಕೆಳಗು, ಮೇಗು, ಮೇಲು, ಒಳಗು, ಹೊರಗು ಮು.

### ಕಾಲವಾಚಗಳು.

ಆಗ, ಈಗ, ಯಾವಾಗ, ಅಂದು, ಇಂದು, ಎಂದು, ಈವೊತ್ತು, ನಾಳೆ, ನಾಡದು, ಹೊತ್ತಾರೆ, ಮುಂಜಾನೆ ಮು.

### ಇವುಗಳ ವಿಭಕ್ತಿರೂಪಗಳು ಯಾವುವೆಂದರೆ:

ಪ್ರಥಮಾ ದ್ವಿತೀಯಾ ರೂಪಗಳು—ಆಗ, ಆಗಲು, ಈಗ, ಈಗಲು, ಹಿಂದು, ಮುಂದು, ಅತ್ತ, ಅತ್ತಲು, ಮೂಡ, ಮೂಡಲು, ಪಡುವ, ಪಡುವಲು, ಮು.

ತೃತೀಯಾಪಂಚಮಿಗಳು—ಅಲ್ಲಿಂದ, ಅತ್ತಣಿಂದ, ಆಚೆಯಿಂದ, ಹಿಂದಿಂದ, ಹಿಂದಿನಿಂದ, ಇಂದಿಂದ, ಇಂದಿನಿಂದ, ಆಗಿಂದ, ಆಗಿನಿಂದ, ಈವೊತ್ತಿಂದ, ಈವೊತ್ತಿನಿಂದ, ನಾಳಿಂದ, ನಾಳಿನಿಂದ, ನಾಡಿದಿಂದ, ನಾಡಿದಿನಿಂದ, ಮೇಗಿಂದ, ಮೇಗಿನಿಂದ, ಕೆಳಗಿಂದ, ಕೆಳಗಿನಿಂದ ಮು.

ಚತುರ್ಥಿ—ಅಲ್ಲಿಗೆ, ಅತ್ತಣಿಗೆ, ಆಚೆಗೆ, ಹಿಂದಕ್ಕೆ, ಇಂದಿಗೆ, ಈವೊತ್ತಿಗೆ, ಆಗ್ಗೆ, ಈಗ್ಗೆ, ನಾಳಿಗೆ, ಮೇಲಕ್ಕೆ, ಕೆಳಕ್ಕೆ, ಹೊರಕ್ಕೆ, ಮೇಗಣಿಗೆ ಮು.

ಷಷ್ಠಿ—ಅಲ್ಲಿಯ, ಅತ್ತಣ, ಆಚೆಯ, ಹಿಂದಿನ, ಅಂದಿನ, ಮೇಗಿನ, ಕೆಳಗಿನ, ನಾಳಿನ, ಈವೊತ್ತಿನ ಮು.

ಸಪ್ತಮಿ—ಅತ್ತ, ಅತ್ತಲು, ಇತ್ತ, ಇತ್ತಲು, ಕೆಳಗೆ, ಮೇಲೆ, ಹಿಂದೆ, ಮುಂದೆ, ಈವೊತ್ತೆ, ಆಚೆಯಲ್ಲಿ, ಮೇಗೆ.†

---

† ಸಪ್ತಮಿಗೆ ಎ ಪ್ರತ್ಯಯವು ಉಕಾರಾಂತಕ್ಕೆ ಬರುತ್ತದೆ. ಕ. ಶ. ಸೂ. ೧೧೯

೧೬೩. ರೂಪಭೇದದಿಂದ ಅವ್ಯಯಗಳು ನಾಲ್ಕು ವಿಧವಾಗ
ಹೇಗಂದರೆ: (ಅ) ಸಿದ್ಧಾವ್ಯಯು, (ಇ) ಕೃದಂತಾವ್ಯಯು, (ಉ) ತದ್ಧಿತಾವ್ಯ
(ಋ) ನಿಪಾತಾವ್ಯಯು.

(ಅ) ಅನ್ಯಶಬ್ದಗಳಿಂದ ಹುಟ್ಟದೆ ಸ್ವತಃ ಸಿದ್ಧವಾಗಿರುವ ಅವ್ಯಯಗ
ಸಿದ್ಧಾವ್ಯಯಗಳೆಂಬ ಹೆಸರು. ಇಂತಹ ಅವ್ಯಯಗಳು ತೀರ ತುಸು ಅ

ಉದಾ: ಓಸುಗ, ಓಸ್ಕರ, ಇಂತ, ಅಕಟ, ಎಲೆ, ಅಹಹ, ಓಹೋ, ಛೀ, ಥೂ ಮು

(ಇ) ಧಾತುಗಳಿಗೆ ಕೃತ್ಪ್ರತ್ಯಯ ಹಚ್ಚುವುದರಿಂದ ಕೃದಂತಾವ್ಯಯಗ
ಹುಟ್ಟುತ್ತವೆ.

ಉದಾ: ಮಾಡುತ್ತ, ನುಡಿದು, ಕೇಳದೆ, ಹೋದರೆ, ನುಡಿಯುವುದು, ಹೇ
ಕೇಳಲು, ಕೊಡಲಿಕ್ಕೆ, ಸಲೆ ಮು.

(ಉ) ಧಾತುಗಳಲ್ಲದ ಶಬ್ದಗಳಿಗೆ ತದ್ಧಿತ ಪ್ರತ್ಯಯಗಳನ್ನು ಹಚ್ಚ
ಹುಟ್ಟುವ ಅವ್ಯಯಗಳಿಗೆ ತದ್ಧಿತಾವ್ಯಯಗಳೆಂಬ ಹೆಸರು.

ಉದಾ: ಅದು+ದು = ಅಂದು, ಇಂದು, ಎಂದು.
ಅದು+ತು = ಅಂತು, ಇಂತು, ಎಂತು.
ಅದು+ಗ = ಅಗ, ಉಗ, ಯಾವಾಗ.
ಅದು+ತ್ತ = ಅತ್ತ, ಇತ್ತ, ಎತ್ತ.
ಅದು+ಲ್ಲಿ = ಅಲ್ಲಿ, ಇಲ್ಲಿ, ಎಲ್ಲಿ ಮು.

(ಋ) ಪದಾಂತದಲ್ಲಿ ಸೇರಿದಾಗ ವಿಶೇಷ ಅರ್ಥವನ್ನು ಸೂಚಿಸ
ವಂತಹ ಅವ್ಯಯಕ್ಕೆ ನಿಪಾತಾವ್ಯಯುವೆಂಬ ಹೆಸರು.

ಉದಾ: ಆ, ಊ, ಏ, ಓ, ಮಾತ್ರ ಮು.

೧೬೪. ಅರ್ಥಭೇದದಿಂದ ಅವ್ಯಯಗಳು ಆರು ವಿಧವಾಗಿ ಇವೆ
ಹೇಗೆಂದರೆ: (೧) ಕ್ರಿಯಾವಿಶೇಷಣಾವ್ಯಯು, (೨) ವಿಭಕ್ತ್ಯವ್ಯಯು, (೩
ಸಮುಚ್ಚಾಯಕಾವ್ಯಯ, (೪) ಭಾವಬೋಧಕಾವ್ಯಯ, (೫) ಅನುಕರ
ಣಾವ್ಯಯ. (೬) ಸಂಬೋಧಕಾವ್ಯಯ.

## ಕ್ರಿಯಾವಿಶೇಷಣಾವ್ಯಯಗಳು.

೧೬೫. ಕ್ರಿಯೆ ನಡೆವ ಸ್ಥಳವನ್ನು ಇಲ್ಲವೆ ಕಾಲವನ್ನು ಅಥವಾ ರೀ
ಯನ್ನು ಸೂಚಿಸುವ ಅವ್ಯಯಕ್ಕೆ ಕ್ರಿಯಾವಿಶೇಷಣಾವ್ಯಯುವೆಂಬ ಹೆಸರು.

ಉದಾಹರಣಗಳು.

ಸ್ಥಳವಾಚಕ ಕ್ರಿಯಾವಿಶೇಷಣಾವ್ಯಯಗಳು—ಅಲ್ಲಿ, ಇಲ್ಲಿ, ಅತ್ತಲಾಗಿ ಮು

ಕಾಲವಾಚಕ ಕ್ರಿಯಾವಿಶೇಷಣಾವ್ಯಯಗಳು— ಆಗ, ಈಗ, ಮುಂಜಾನೆ, ಬೈಗು, ರಾತ್ರಿ, ಹಗಲೆಲ್ಲ, ಬಳಿಕ, ತರುವಾಯ, ನಿರಂತರ, ದಿನಾಲೂ, ಯಾವಾಗಲೂ, ಸರ್ವದಾ, ಚೂಣಿ, ಆ ಮೇಲೆ, ಇನ್ನು, ಇನ್ನುಮುನ್ನೂ, ಹಿಂದಕ್ಕೆ.

ಆವೃತ್ತಿವಾಚಕಗಳು (ಇವಾದರೂ ಕಾಲವಾಚಕಗಳೇ)— ಮತ್ತೆ, ಪುನಃ, ತಿರುಗಿ, ಮರಳಿ, ಒಮ್ಮೆಲೆ, ಒಂದು ವೇಳೆ, ಒಮ್ಮೆ, ಒಂದು ಸಾರೆ, ಈ ಸರತಿ, ಈ ಬಾರಿ ಮು.

ರೀತಿವಾಚಕ ಕ್ರಿಯಾವಿಶೇಷಣಾವ್ಯಯಗಳು— ಹಾಗೆ, ಹೀಗೆ, ಹೇಗೆ, ಅಂತು, ಇಂತು, ಎಂತು, ಅಷ್ಟಂದ, ಓಪಾದಿ; ಈ ರೀತಿ, ಈ ಪರಿ, ಈ ಮೇರೆಗೆ, ಸುಮ್ಮನೆ, ಸುಮ್ಮಗೆ, ಚಕ್ಕನೆ, ಚೆನ್ನಾಗಿ, ಹೇಗಾದರೂ, ಒಮ್ಮಿಂದೊಮ್ಮೆ, ಅಕಸ್ಮಾತ್, ಭರ್ರನೆ, ಗಿಮಿಗಿಮಿ, ಥರಥರ, ತಣ್ಣಗೆ, ಬೆಚ್ಚಗೆ, ತೆಳ್ಳಗೆ, ತಾನಾಗಿ, ಆರಸಾಗಿ, ಮು.

## ವಿಭಕ್ತ್ಯವ್ಯಯಗಳು.

೧೬೬. ವಿಭಕ್ತಿಗಳ ಅರ್ಥಗಳಲ್ಲಿ ಉಪಯೋಗಿಸಲ್ಪಡುವ ಅವ್ಯಯಗಳು ವಿಭಕ್ತ್ಯವ್ಯಯಗಳು.

ಕೆಲವು ವಿಭಕ್ತ್ಯವ್ಯಯಗಳು ಚತುರ್ಥಿಗೆ ಪರವಾಗುವುವು. ಕೆಲವು ಷಷ್ಠಿಗೆ ಪರವಾಗುವುವು.

ಉದಾಹರಣಗಳು:

ಚತುರ್ಥಿಗೆ ಪರವಾಗುವುವು— ಓಸುಗ, ಓಸ್ಕರ, ಇಂತ, ಆಗಿ, ಅಂತ, ಅಂತಲೆ ಎಂದು ಮು.

ಷಷ್ಠಿಗೆ ಪರವಾಗುವುವು— ಸಲುವಾಗಿ, ವರೆಗೆ, ಸಂಗಡ, ಒಡನೆ, ಒಂದಿಗೆ, ಕೂಡ, ಒಡಗೂಡೆ, ಹೊರತು, ಒಳಗೆ, ಮೇಲೆ, ಉದ್ದಿಶ್ಯ, ವಿಷಯು, ವಿಷಯಕ್ಕೆ, ಕಾರಣ, ನಿಮಿತ್ತ, ಮೂಲಕ, ಕಯ್ಯಿಂದ, ಮುಖದಿಂದ, ಮುಖಾಂತರ, ದೆಸೆಯಿಂದ, ಕಡೆಯಿಂದ, ಬಳಿಯಿಂದ, ಹತ್ತರದಲ್ಲಿ ಮು.

## ಸಮುಚ್ಚಾಯಕಾವ್ಯಯಗಳು.

೧೬೭. ಎರಡು ಪದಗಳನ್ನಾಗಲಿ ವಾಕ್ಯಗಳನ್ನಾಗಲಿ ಅರ್ಥಗಳನ್ನಾಗಲಿ ಕೂಡಿಸುವ ಅವ್ಯಯಗಳಿಗೆ ಸಮುಚ್ಚಾಯಕಾವ್ಯಗಳೆಂಬ ಹೆಸರು. ಇವುಗಳ ಬೇರೆ ಬೇರೆ ಪ್ರಕಾರಗಳನ್ನು ಮುಂದೆ ಉದಾಹರಣೆಗಳಲ್ಲಿ ಹೇಳಿದೆ.

ಉದಾಹರಣಗಳು:

ಅವ್ಯಯಶಬ್ದಗಳು—ಮತ್ತು, ಮತ್ತೂ, ಹಾಗು, ಅಥವಾ, ಸಹ ಮು.

ವಿಭಕ್ತಿರೂಪಗಳು— ಅದರಿಂದ, ಆದಕಾರಣ, ಆದುದರಿಂದ, ಮತ್ತಿನ ಮು.



ಕೃದಂತಾವ್ಯಯಗಳು—ಆದರೆ, ಆದರೂ, ಅದಾಗ್ಯೂ, ಆದ ಮೇಲೆ ಮು.

ನಿಪಾತಗಳು—ಆ, ಊ ಮು.
ಪದಗಳನ್ನು ಅಗಲಿ*ಸುವ ಕ್ರಿಯಾರೂಪಗಳು—ಆಗಲಿ, ಇಲ್ಲವೆ ಮು.

## ಭಾವಬೋಧಕಾವ್ಯಯಗಳಂ.

೧೬೮. ಚಿಂತೆ, ಹರ್ಷ, ಖೇದ, ಮುಂತಾದ ಮನೋಭಾವಗಳ ಸೂಚಿಸುವ ಅವ್ಯಯಗಳಿಗೆ ಭಾವಬೋಧಕಾವ್ಯಯಗಳೆಂಬ ಹೆಸರು.

ಉದಾಹರಣಗಳು:

ಮೆಚ್ಚಿಕೆ—ಭಲೆ, ಶಾಬಾಸ್, ಸರಿಸರಿ, ಸೈಸೈ, ಪೂತುರೆ, ಹೌದು, ಭಾಪುರೆ,
ಸಂಭ್ರಮಾಶ್ಚರ್ಯವಾಚಕಗಳು—ಅಹ, ಅಹಹ, ಅಬ್ಬಾ, ಅಲಲ, ಓಹೋ,
ಅಸಹ್ಯಾರ್ಥಕ್ಕೆ—ಅಹಹ, ಉಹು.
ಖೇದಚಿಂತಾದಿಗೆ—ಅಕಟ, ಅಯ್ಯೋ, ಅಯ್ಯಯ್ಯೋ.
ಪ್ರಶ್ನಾನುಮಾನಾರ್ಥಗಳು—ಅಲ್ಲೇ, ಅಲ್ಲವೇ, ಆ, ಎ, ಏ, ಐ.
ಉಚಿತವಾರ್ತಾಸಂಭಾಷಣಾರ್ಥಗಳು—ಅಂತೆ, ಅಂತ, ಕಣಾ, ಕಣ
ಹೇಸಿಕೆ ತಿರಸ್ಕಾರ—ಛೀ, ಥೂ, ಛೇ, ಅಃ, ಇಸಿ, ಉಹುಹು, ಛೀಛೀ.
ಅವಸರ ತಿರಸ್ಕಾರ—ಎಲೆಲೆ, ಅರೆರೆ, ಫಡಫಡ.
ಅವಧಾರಣಾರ್ಥಗಳೆಂದರೆ ನಿಶ್ಚಯಾರ್ಥಗಳು—ಎ, ಏ, ಮಾತ್ರ.

## ಅನುಕರಣಾವ್ಯಯಗಳು.

೧೬೯. ಕೂಗುಗಳನ್ನೂ ಸಪ್ಪಳಗಳನ್ನೂ ಸೂಚಿಸುವ ಅವ್ಯಯ ಅನುಕರಣಾವ್ಯಯಗಳು. ಅದರಂತೆ ಮನುಷ್ಯರ ತೊದಲ್ಮಾತು, ನಗೆ, ಕ ಮುಂತಾದುವುಗಳನ್ನು ಸೂಚಿಸುವ ಶಬ್ದಗಳು ಅನುಕರಣವಾಚಕಗಳು.

ಉದಾಹರಣಗಳು:

ಕೂಗು—ಅಂಬಾ, ಮ್ಯಾವು, ಬ್ಯಾ, ಮೇ.
ನಾದ—ಗಣಗಣ, ಧೋಧೋ, ಧಳಧಳ, ಭೈಭೈ.
ಸಪ್ಪಳ—ಸರಸರ, ಪಟಪಟ, ಛಟಛಟ, ತಟತಟ.
ಮಾತು—ರಾಮರಾಮ, ಶಿವಶಿವ.
ಉಗ್ಗು—ಕೊಕ್ಕೊ ಕೊಟ್ಟ, ಸಿ ಸಿಸಿಕ್ಕ, ನೊ ನ್ನೋಡು.

---

*ಈಯವ್ಯಯಗಳು ಪದಗಳನ್ನು ಅಗಲಿಸುತ್ತವೆ. ಆದರೂ ಇವನ್ನು ಸಮುಚ್ಚ ಗಳಲ್ಲಿ ಎಣಿಸುವ ಪರಿಪಾಠವಿದೆ.

ನಗೆ—ಪಿಸಿಪಿಸಿ, ಖೊಳ್ಳನೆ.

ನೋಟ—ಮಿಕಿಮಿಕಿ, ಹುಳುಹುಳು.

ಕೆಮ್ಮು—ಖೊಯಿಕ್, ಖೊರ್, ಖೊಸ್.

ತೇಗು—ಥರ‍್ರನೆ, ಥಿರ‍್ರನೆ.

## ಸಂಬೋಧಕಾವ್ಯಯಗಳು.

೧೭೦. ಕರೆಯುವಾಗ ಪ್ರಯೋಗಿಸಲ್ಪಡುವ ಅವ್ಯಯಗಳೇ ಸಂಬೋಧಕಾವ್ಯಯಗಳು.

ಉದಾ: ಅರೆ, ಎ, ಏ, ಐ, ಎಲ, ಎಲೇ, ಎಲೈ, ಎಲೋ, ಎಲೌ, ಓ, ಔ.

## ಶಬ್ದಗಳ ರೂಪಭೇದ.

೧೭೧. ರೂಪಭೇದದಿಂದ ಶಬ್ದಗಳು (ಸಿದ್ಧ ಅಥವಾ) ಸಹಜ, ಸಾಧಿತ ಎಂದು ಎರಡು ವಿಧವಾಗಿವೆ.

(ಅ) ಪ್ರತ್ಯಯದಿಂದ ಅಥವಾ ಅನ್ಯಶಬ್ದದಿಂದ ಹುಟ್ಟದಿರುವ ಶಬ್ದಗಳಿಗೆ ಸಹಜಶಬ್ದಗಳೆಂಬ ಹೆಸರು.

ಉದಾ: ಹೊಲ, ಮನೆ, ಮರ, ಮಾತು ಮು.

(ಆ) ಸಹಜಶಬ್ದಗಳಿಗೆ ಪ್ರತ್ಯಯಗಳನ್ನು ಹಚ್ಚಿ ಇಲ್ಲವೆ ಬೇರೆ ಕೆಲವು ಸಹಜಶಬ್ದಗಳನ್ನು ಕೂಡಿಸಿ ಹುಟ್ಟಿಸಿದ ಶಬ್ದಗಳಿಗೆ. ಸಾಧಿತಶಬ್ದಗಳೆಂಬ ಹೆಸರು. ಸಾಧಿತಶಬ್ದಗಳು (೧) ಕೃದಂತ, (೨) ತದ್ಧಿತ, (೩) ಸಮಸ್ತ ಎಂದು ಮೂರು ವಿಧವಾಗಿವೆ.

ಉದಾಹರಣಗಳು:

ಕೃತ್ತಿಗೆ—ಹರತ, ನಗೆ, ಹೊಳಪು ಮು.

ತದ್ಧಿತಕ್ಕೆ—ಅರಸ, ಅಂಗಡಿಕಾರ ಮು.

ಸಮಸ್ತಕ್ಕೆ—ಮರಗಾಲು, ಬೆರಳುಂಗುರ ಮು.

## ಕೃದಂತಪ್ರಕರಣ

೧೭೨. ಆಖ್ಯಾತಪ್ರತ್ಯಯವನ್ನುಳಿದು ಧಾತುವಿಗೆ ಹತ್ತುವ ಎರಡನೆ ಬಗೆಯ ಪ್ರತ್ಯಯಗಳಿಗೆ ಕೃತ್ಪ್ರತ್ಯಯಗಳೆಂಬ ಹೆಸರು.

ಉದಾ: ಕೆ, ಇಕೆ, ಒಣ ಮು.

೧೭೩. ಧಾತುವಿಗೆ ಕೃತ್ಪ್ರತ್ಯಯವನ್ನು ಹಚ್ಚುವುದರಿಂದ ಹುಟ್ಟ
ಶಬ್ದಕ್ಕೆ ಕೃತ್ತು ಎಂತಲೂ ಕೃದಂತವೆಂತಲೂ ಅನ್ನುವರು.

ಉದಾ: ಕಲಿಕೆ, ಮಾಡಿಕೆ, ಮಾಡೋಣ ಮು.

೧೭೪. ಕೃತ್ಪ್ರತ್ಯಯಗಳನ್ನು ಧಾತುವಿಗೆ ಹಚ್ಚುವುದರಿಂದ ನಾ
ವಿಧದ ಶಬ್ದಗಳು ಹುಟ್ಟುವುವು; ಅವು ಯಾವುವೆಂದರೆ:—

(೧) ವಿಶೇಷಣಗಳು, (೨) ನಾಮಗಳು, (೩) ಧಾತುಗ
(೪) ಅವ್ಯಯಗಳು.

### ಕೃದಂತವಿಶೇಷಣಗಳು:

೧೭೫. ಕೃತ್ಪ್ರತ್ಯಯಗಳಿಂದ ಹುಟ್ಟುವ ವಿಶೇಷಣಗಳು ಎರಡು
ವಾಗಿವೆ; ಅವು ಯಾವುವೆಂದರೆ:— (ಅ) ಕಾಲಸೂಚಕ ಕೃದಂತವಿಶೇಷಣಗ
(ಆ) ಕಾಲಸೂಚಕವಲ್ಲದ ಕೃದಂತವಿಶೇಷಣಗಳು (ಸಾಮಾನ್ಯ ಕೃದ
ವಿಶೇಷಣಗಳು).

(ಅ) ಕಾಲಸೂಚಕ ಕೃದಂತವಿಶೇಷಣಗಳು ಮೂರು ವಿಧವಾ
ಅವು ಯಾವುವೆಂದರೆ:—

(೧) ಧಾತುವಿಗೆ ಉವ ಪ್ರತ್ಯಯವನ್ನು ಹಚ್ಚುವುದರಿಂದ ವರ್ತಮಾ
ಕೃದಂತಗಳೂ 'ಇದ' ಅಥವಾ 'ದ' ಪ್ರತ್ಯಯವನ್ನು ಹಚ್ಚುವುದರಿಂದ ಭೂ
ಕೃದಂತಗಳೂ 'ಅದ' ಪ್ರತ್ಯಯವನ್ನು ಹಚ್ಚುವುದರಿಂದ ನಿಷೇಧಕೃದಂತಗ
ಆಗುತ್ತವೆ. ಭೂತಕಾಲದಲ್ಲಿ ಆಗುವ ಧಾತುಗಳ ವಿಕಾರಗಳೂ ಭೂತಕೃದ
ರೂಪಗಳಲ್ಲಿಯೂ ಕಂಡುಬರುತ್ತವೆ.

ಉದಾ: ವರ್ತಮಾನಕೃದಂತಕ್ಕೆ: ಮಾಡುವ, ನುಡಿಯುವ.

ಭೂತಕೃದಂತಕ್ಕೆ: ನುಡಿದ, ಕೆಟ್ಟ, ಉಣ್ಡ, ಹೋದ.

ನಿಷೇಧಕೃದಂತಕ್ಕೆ: ಮಾಡದ, ನುಡಿಯದ.

(ಆ) ಸಾಮಾನ್ಯ ಕೃದಂತಗಳು ಕೆಲವು ಪ್ರತ್ಯಯಗಳು ಹತ್ತಿ ಆಗುತ್ತ
ಅವುಗಳಲ್ಲಿ ಕೆಲವನ್ನು ಕೆಳಗೆ ಉದಾಹರಣೆಗಾಗಿ ಕೊಟ್ಟಿರುತ್ತದೆ.

ಅ. ಕುಂಟು+ಅ=ಕುಂಟ, ಉಗ್ಗು+ಅ=ಉಗ್ಗ.

ಅಕ. ಹರಿ+ಅಕ=ಹರಕ, ಮುರಿ+ಅಕ=ಮುರಕ.

ಆಳಿ. ಓದು+ಆಳಿ=ಓದಾಳಿ; ಏರಾಳಿ, ತಿನ್ನಾಳಿ.

ಇ. ಉಂಡಾಡು+ಇ=ಉಂಡಾಡಿ; ಉಣ್+ಇ=ಉಣಿ, ತುಡುಗು
ಕೊಳ್+ಇ=ಕುಳಿ, ಸಾಲುಗುಳಿ, ಲಂಚಗುಳಿ; ತಿನ್+ಇ=ತಿನಿ; ಹೆಣದಿನಿ, ಕ
ಹೀಗೆಯೆ ಧನಗಾಹಿ, ತುರುಗಾಹಿ ಇತ್ಯಾದಿ.

## ಕೃದಂತನಾಮಗಳು

ಕೃದಂತನಾಮಗಳಿಗೆ ರೂಢಿಯಲ್ಲಿ ಕ್ರಿಯಾನಾಮಗಳೆಂತಲೂ ಭಾವನಾಮಗಳೆಂತಲೂ ಅನ್ನುವುದುಂಟು. ಇವು ಎರಡು ವಿಧವಾಗಿವೆ: (ಅ) ಕಾಲಸೂಚಕಕೃದಂತನಾಮಗಳು, (ಆ) ಕಾಲಸೂಚಕವಲ್ಲದ ಕೃದಂತನಾಮಗಳು.

(ಅ) ಕಾಲಸೂಚಕಕೃದಂತನಾಮಗಳು ಮೂರು ವಿಧವಾಗಿವೆ: (೧) ವರ್ತಮಾನಕ್ರಿಯಾನಾಮ, (೨) ಭೂತಕ್ರಿಯಾನಾಮ, (೩) ನಿಷೇಧಕ್ರಿಯಾನಾಮ.

### ಇವುಗಳ ವಿವರವು.

ದು, ಉದು ಪ್ರತ್ಯಯಗಳನ್ನು ವರ್ತಮಾನಕೃದಂತಗಳಿಗೆ ಹಚ್ಚಿದರೆ ವರ್ತಮಾನಕ್ರಿಯಾನಾಮಗಳೂ, ಭೂತಕೃದಂತಕ್ಕೆ ಹಚ್ಚಿದರೆ ಭೂತಕ್ರಿಯಾನಾಮಗಳೂ, ನಿಷೇಧಕೃದಂತಗಳಿಗೆ ಹಚ್ಚಿದರೆ ನಿಷೇಧಕ್ರಿಯಾನಾಮಗಳೂ ಹುಟ್ಟುವುವು.

### ಉದಾಹರಣಗಳು:

ವರ್ತಮಾನ— ಮಾಡುವ + ದು = ಮಾಡುವದು; ಮಾಡುವ + ಉದು = ಮಾಡುವುದು; ನುಡಿಯುವ + ದು = ನುಡಿಯುವದು; ನುಡಿಯುವ+ ಉದು = ನುಡಿಯುವುದು.

ಭೂತ—ಮಾಡಿದ+ದು = ಮಾಡಿದುದು, ಮಾಡಿದ್ದು; ಮಾಡಿದ+ ಉದು = ಮಾಡಿದುದು; ನುಡಿದ+ದು = ನುಡಿದದ್ದು; ನುಡಿದ+ಉದು=ನುಡಿದುದು. ಹೀಗೆಯೆ ಕೊಟ್ಟದು, ಕೊಟ್ಟದ್ದು ಇತ್ಯಾದಿ.

ನಿಷೇಧ— ಮಾಡದದು, ನುಡಿಯದದು, ನುಡಿಯದ್ದು ಮು.

(ಆ) ಸಾಮಾನ್ಯ (ಎಂದರೆ ಕಾಲಸೂಚಕವಲ್ಲದ) ಕ್ರಿಯಾನಾಮಗಳು ಕೆಲವು ಪ್ರತ್ಯಯಗಳಿಂದ ಸಾಧಿತವಾಗುತ್ತವೆ. ಅವುಗಳ ಉದಾಹರಣೆಗಳನ್ನು ಕೆಳಗೆ ಕೊಟ್ಟಿದೆ:

| ಪ್ರತ್ಯಯಗಳು. | ವಿವರವು. |
|---|---|
| ಅ | ಬೇಸರು+ಅ=ಬೇಸರ, ಅಸರು+ಅ = ಅಸರ, ತೂಗು+ಅ=ತೂಕ, ಉಣ್ಣು+ಅ = ಊಟ, ಮಾಡು+ಅ = ಮಾಟ. |
| ಅತ. | ಕಡಿ+ಅತ = ಕಡತ, ಜಡಿ+ಅತ= ಜಡತ. |
| ಅತೆ. | ಕುಡಿ+ಅತೆ = ಕುಡತೆ, ನಡೆ+ಅತೆ= ನಡತೆ, ಅಳಿ+ ಅತೆ = ಅಳತೆ |

ಅಪು. ಹೊಳೆ + ಅಪು = ಹೊಳಪು, ನೆನೆ + ಅಪು = ನೆನಪು, ಮುಂದಿ + ಅಪು = ಮುಂದಪು, ಒಲಿ + ಅಪು = ಒಲಪು.

ಅರ. ಒತ್ತು + ಅರ = ಒತ್ತರ, ಹತ್ತು + ಅರ = ಹತ್ತರ, ಎತ್ತು + ಅರ = ಎತ್ತರ.

ಅಲು. ಅಳು + ಅಲು = ಅಳಲು, ಕಾ + ಅಲು = ಕಾವಲು, ತಿಳಲು, ಇರಿಸಲು, ... ಕಲು, ಇಳಕಲು, ತುಳಕಲು ಮು.

ಅವು. ಕಳು + ಅವು = ಕಳವು, ಸುಳಿ + ಅವು = ಸುಳವು, ಮುಳಿ + ಅವು = ಮುಳವು, ಸೆಳೆ + ಅವು = ಸೆಳವು, ಹೊಳೆ + ಅವು = ಹೊಳವು, ಬರು + ಅವು = ಬರವು, ...

ಅಹ. ಬರೆ + ಅಹ = ಬರಹ, ತೊಡ + ಅಹ = ತೊಡಹ.

ಅಹು. ನೆನೆ + ಅಹು = ನೆನಹು, ಮರೆ + ಅಹು = ಮರಹು.

ಇಕೆ, ಕೆ. ಹೇಳು + ಇಕೆ = ಹೇಳಿಕೆ, ಹೇಳುವಿಕೆ, ಬಾಳು + ಇಕೆ = ಬಾಳಿಕೆ, ಮಾಡು + ಇಕೆ = ಮಾಡಿಕೆ, ಮಾಡುವಿಕೆ, ಮಾಡು + ಕೆ = ಮಾಳ್ಕೆ, ಗಳಿ + ಇಕೆ = ಗಳಿಕೆ, ಹರಸು + ಕೆ = ಹರಕೆ.

ಇಗೆ, ಗೆ. ಸಲ್ + ಇಗೆ = ಸಲಿಗೆ, ಉಡು + ಇಗೆ = ಉಡಿಗೆ, ಸುಲಿ + ಗೆ = ಸುಲಿಗೆ, ತೊಡು + ಇಗೆ = ತೊಡಿಗೆ, ಮಾರು + ಇಗೆ = ಮಾರಿಗೆ, ತೆರು + ಇಗೆ = ತೆರಿಗೆ, ಹೊಲಿ + ಗೆ = ಹೊಲಿಗೆ.

ಇಸು. ಉಣ್ + ಇಸು = ಉಣಿಸು, ತಿನ್ + ಇಸು = ತಿನಿಸು, ಬೆಳೆ + ಇಸು = ಬೆಳಿಸು, ತೊಳೆ + ಇಸು = ತೊಳಿಸು, ಮುನಿ + ಇಸು = ಮುನಿಸು.

ಉಪು, ಉವು, ಉಹು. ಕುರಿ + ಉಪು = ಕುರುಪು, ಕುರಿ + ಉವು = ಕುರುವು, ಕುರಿ + ಉಹು = ಕುರುಹು.

ಎ. ನಗು + ಎ = ನಗೆ, ಹೊರು + ಎ = ಹೊರೆ, ಮಾಗು + ಎ = ಮಾಗೆ, ...

ಓಣ. ಮಾಡು + ಓಣ = ಮಾಡೋಣ, ನುಡಿ + ಓಣ = ನುಡಿಯೋಣ.

ಮೆ. ತಾಳು + ಮೆ = ತಾಳ್ಮೆ, ಒಲಿ + ಮೆ = ಒಲ್ಮೆ, ಕೂರು + ಮೆ = ಕೂರ್ಮೆ, ನಲಿ + ಮೆ = ನಲ್ಮೆ, ಅರಿ + ಮೆ = ಅರಿವೆ.

ಹು, ಪು, ವು. ಕಾ + ಹು = ಕಾಹು, ಕಾ + ಪು = ಕಾಪು, ಕಾ + ವು = ಕಾವು, ಮೇ + ವು = ಮೇವು, ಬಾ + ವು = ಬಾವು, ನೋ + ವು = ನೋವು, ಸಾ + ವು = ಸಾವು, ಓ + ಪು = ಓಪು.

## ಕೃದಂತಧಾತುಗಳು

೧೭೬. ಧಾತುಗಳಿಂದ ಹೊಸ ಧಾತುಗಳನ್ನು ಹುಟ್ಟಿಸುವ ಪ್ರತ್ಯಯಗಳು ಆರು ಗೊತ್ತಾಗಿವೆ; ಅವು ಯಾವುವೆಂದರೆ— ಇಸು, ಸು, ಚು, ಪು, ಹು, ವು.

ಉದಾ: ಮಾಡು + ಇಸು = ಮಾಡಿಸು, ನುಡಿ + ಸು = ನುಡಿಸು, ಕುದಿ + ಚು = ಕುದುಚು ಇತ್ಯಾದಿ.

೧೭೭. ಇಸು ಮುಂತಾದ ಪ್ರತ್ಯಯಗಳಿಂದ ಹುಟ್ಟುವ ಧಾತುಗಳು ಸಕರ್ಮಕ, ಅಕರ್ಮಕ, ಪ್ರಯೋಜಕ ಅಥವಾ ಪ್ರೇರಣಾರ್ಥಕ ಎಂದು ಮೂರು ವಿಧವಾಗಿ ಇವೆ. ಹೇಗಂದರೆ:

(ಅ) ಅಕರ್ಮಕಧಾತುಗಳಿಗೆ ಇಸು ಮುಂತಾದ ಪ್ರತ್ಯಯಗಳನ್ನು ಹಚ್ಚಿದರೆ, ಸಕರ್ಮಕಧಾತುಗಳು ಆಗುವುವು.

ಉದಾ: ಆಗು + ಇಸು = ಆಗಿಸು, ಇರು + ಇಸು = ಇರಿಸು, ನೋ + ಇಸು = ನೋಯಿಸು, ಬಳಲ್ + ಚು = ಬಳಲ್ಚು, ತೊಳಲ್ + ಚು = ತೊಳಲ್ಚು, ಉದಿರ್ + ಚು = ಉದಿರ್ಚು, ಮಡಿ + ಪು = ಮಡುಪು, ಮಡಿ + ಹು = ಮಡುಹು, ಮಡಿ + ವು = ಮಡುವು, ಕೆಡೆ + ಹು = ಕೆಡಹು, ಕೆಡೆ + ಪು = ಕೆಡಪು, ಕೆಡೆ + ವು = ಕೆಡವು.

(ಆ) ಸಕರ್ಮಕಗಳಿಗೆ ಇಸು ಮುಂತಾದ ಪ್ರತ್ಯಯಗಳನ್ನು ಹಚ್ಚಿದರೆ, ಪ್ರಯೋಜಕ ಅಥವಾ ಪ್ರೇರಣಾರ್ಥಕಧಾತುಗಳಾಗುವುವು.

ಉದಾ: ಮಾಡು + ಇಸು = ಮಾಡಿಸು, ಮೇ + ಸು = ಮೇಸು, ಅಗಲ್ + ಚು = ಅಗಲ್ಚು, ಮೂಣ್ + ಚು = ಮೂಣ್ಚು.

ಅಪವಾದಗಳು—(೧) ಕೇಳು, ಕಾಣು ಧಾತುಗಳಿಗೆ ಇಸುವನ್ನು ಹಚ್ಚಿದರೆ, ಹುಟ್ಟಿದ ಧಾತುಗಳು ಸಕರ್ಮಕವಾಗಿಯೂ ಅಕರ್ಮಕವಾಗಿಯೂ ಇರುವುವು.

ಉದಾ: ಕೇಳಿಸು, ಕಾಣಿಸು.

(೨) ಎಷ್ಟೋ ಧಾತುಗಳಿಗೆ ಇಸುವನ್ನು ಹಚ್ಚಿದರೆ, ಮೂಲಾರ್ಥದಲ್ಲಿ ಏನೂ ಹೆಚ್ಚುಕಡಿಮೆಯಾಗುವುದಿಲ್ಲ.

ಉದಾ: ತೋರಿಸು, ನೆಗಳ್ಚು.

೧೭೮. 'ಇಸು' ಪ್ರತ್ಯಯವು ಸಕರ್ಮಕ ಧಾತುಗಳಿಗೆ ಹತ್ತಿದರೆ, ಸಕರ್ಮಕಧಾತುಗಳಾಗುವುವು; ಅಕರ್ಮಕಗಳಿಗೆ ಹತ್ತಿದರೆ, ಅಕರ್ಮಕಧಾತುಗಳಾಗುವುವು. ಈ ನಿಯಮವು ವಿಶೇಷವಾಗಿ ಸಂಸ್ಕೃತ ಶಬ್ದಗಳಿಗೆ ಹತ್ತುವುದು.

ಉದಾಹರಣಗಳು:

ಸಕರ್ಮಕಕ್ಕೆ—ರಕ್ಷಿಸು, ವರ್ಣಿಸು, ಕಥಿಸು, ಸಂಗ್ರಹಿಸು, ಅನುಸರಿಸು.

ಅಕರ್ಮಕಕ್ಕೆ—ವರ್ಧಿಸು, ಅನುನಯಿಸು, ಸಂಭವಿಸು, ಜನಿಸು.

೧೭೯. ಸನ್ಮಾನಾರ್ಥದಲ್ಲಿ ಕರ್ತೃವು ಪ್ರೇರಕನೆಂದು ಹೇಳುವುದಾದರೆ, ಸಕರ್ಮಕಗಳಿಗೆ ಇಸು ಹತ್ತುವುದು.

ಉದಾ: ದೊರೆಗಳು ಹುಕುಮು ಕೊಡಿಸಬೇಕು; ಸ್ವಾಮಿಗಳು ನಮ್ಮ ವ...
ದಯಮಾಡಿಸಬೇಕು.

ಇಂಥಲ್ಲಿ ನಿಜವಾದ ಪ್ರೇರಣಾರ್ಥವಿರುವದಿಲ್ಲ.

## ಕೃದಂತ ಅವ್ಯಯಗಳು.

೧೮೦. ಕೃತ್ಪ್ರತ್ಯಯಗಳಿಂದ ಹುಟ್ಟುವ ಅವ್ಯಯಗಳು (ಅ) ಭಾ...
ರೂಪ, (ಆ) ಕ್ರಿಯಾನ್ಯೂನಗಳೆಂದು ಎರಡು ವಿಧವಾಗಿವೆ; ಅವುಗಳ ...
ಹೇಗಂದರೆ:—

(ಅ) ಧಾತುಗಳಿಗೆ ಅ, ಅಲು, ಅಲಿಕ್ಕೆ ಎಂಬ ಪ್ರತ್ಯಯಗಳನ್ನು ...
ದರೆ, ಭಾವರೂಪಗಳೆಂಬ ಹೆಸರುಳ್ಳ ಅವ್ಯಯಗಳಾಗುವುವು.

ಉದಾಹರಣಗಳು:

ಮಾಡು ಧಾತುವಿನಿಂದ—ಮಾಡ, ಮಾಡಲು, ಮಾಡಲಿಕ್ಕೆ.
ನುಡಿ ,, ನುಡಿಯ, ನುಡಿಯಲು, ನುಡಿಯಲಿಕ್ಕೆ.

(ಆ) ಕ್ರಿಯಾನ್ಯೂನಗಳು ಮೂರು ವಿಧವಾಗಿವೆ:—(೧) ವರ್ತಮಾ...
ಕ್ರಿಯಾನ್ಯೂನ, (೨) ಭೂತಕ್ರಿಯಾನ್ಯೂನ, (೩) ನಿಷೇಧಕ್ರಿಯಾನ್ಯೂ...
ಇವುಗಳ ವಿವರವು.

ಧಾತುಗಳಿಗೆ 'ಉತ್ತ' (ಇಲ್ಲವೆ ಉತ) ಪ್ರತ್ಯಯವನ್ನು ಹಚ್ಚುವುದ...
ವರ್ತಮಾನ ಕ್ರಿಯಾನ್ಯೂನಗಳೂ, 'ಇ,ದು' ಪ್ರತ್ಯಯಗಳನ್ನು ಹಚ್ಚು...
ರಿಂದ ಭೂತ ಕ್ರಿಯಾನ್ಯೂನಗಳೂ, 'ಅದೆ' ಪ್ರತ್ಯಯವನ್ನು ಹಚ್ಚುವುದ...
ನಿಷೇಧಕ್ರಿಯಾನ್ಯೂನಗಳೂ ಆಗುತ್ತವೆ.

ಉದಾ: ವರ್ತಮಾನ ಕ್ರಿಯಾನ್ಯೂನ: ಮಾಡುತ್ತ, ನುಡಿಯುತ್ತ. ಭೂತ ಕ್ರಿ...
ನ್ಯೂನ: ಮಾಡಿ, ನುಡಿದು, ಕೆಟ್ಟು. ನಿಷೇಧ ಕ್ರಿಯಾನ್ಯೂನ: ಮಾಡದೆ, ಹೇ...
ಕಾಯದೆ ಮು.

೧೮೧. ಧಾತುಗಳಿಗೆ 'ರೆ' ಪ್ರತ್ಯಯ ಹಚ್ಚಿದರೆ, ಪಕ್ಷಾರ್ಥಕ ಅವ್ಯ...
ಗಳಾಗುತ್ತವೆ. ಈ 'ರೆ' ಪ್ರತ್ಯಯವು ಧಾತುವಿಗೆ ಪರವಾದರೆ, ಭವಿಷ್ಯ...
ಲಕ್ಕೆ ಉವ ಆಗಮವೂ ಭೂತಕಾಲಕ್ಕೆ ಇದ ಅಥವಾ ದ ಆಗಮವೂ ಆಗುತ್ತ...

ಉದಾ: ಮಾಡು + ಇದ + ರೆ = ಮಾಡಿದರೆ; ಮಾಡು + ಉವ + ರೆ = ಮಾಡು...
ನುಡಿ + ದ + ರೆ = ನುಡಿದರೆ; ನುಡಿ + ಉವ + ರೆ = ನುಡಿಯುವರೆ ಮುಂತಾದುವು.

## ತದ್ಧಿತಗಳು.

೧೮೨. ಮೂಲ ಶಬ್ದಗಳನ್ನು ಹುಟ್ಟಿಸಲಿಕ್ಕೆ ಧಾತುವಿನ ಹೊರತು ಬೇರೆ ಶಬ್ದಗಳಿಗೆ ಹತ್ತುವ ಪ್ರತ್ಯಯಕ್ಕೆ 'ತದ್ಧಿತಪ್ರತ್ಯಯ' ಎಂಬ ಹೆಸರು.

ಉದಾ: ತನ, ಇಕೆ, ಕಾರ, ಗಾರ ವು.

೧೮೩. ತದ್ಧಿತಪ್ರತ್ಯಯಗಳಿಂದ ಹುಟ್ಟುವ ಶಬ್ದಗಳಿಗೆ 'ತದ್ಧಿತಗಳು' ಅಥವಾ 'ತದ್ಧಿತಾಂತಗಳು' ಎಂಬ ಹೆಸರು.

ಉದಾ: ಹುಡುಗತನ, ಬುದ್ಧಿವಂತ, ಹೊಣೆಗಾರ ವು.

೧೮೪. ತದ್ಧಿತ ಪ್ರತ್ಯಯಗಳಿಂದ ಹುಟ್ಟುವ ಶಬ್ದಗಳು ನಾಲ್ಕು ವಿಧವಾಗಿವೆ:—(೧) ನಾಮ, (೨) ವಿಶೇಷಣ, (೩) ಧಾತು, (೪) ಅವ್ಯಯ.

ಉದಾಹರಣಗಳು:

ನಾಮ—ಜಾಣತನ, ಬ್ರಾಹ್ಮಣಿಕೆ, ಕಿವುಡು, ಕಪ್ಪು, ಜಾಣ್ಮೆ, ಒಡಮೆ.

ವಿಶೇಷಣ—ನಂಬಿಗಸ್ತ, ಬುದ್ಧಿವಂತ, ಕೆಲಸವಂತ, ಬೇನಿಸ್ಥ, ರೋಗಿ.

ಧಾತು—ಕನ್ನಡಿಸು, ಅಬ್ಬರಿಸು, ಹವಣಿಸು.

ಅವ್ಯಯ—ಒಮ್ಮೆ, ಇಮ್ಮೆ, ನೂರ್ಮೆ, ಅಲ್ಲಿ, ಅಂತು, ಆಗ,

೧೮೫. ಸಕ್ಕದ ಕನ್ನಡ ತದ್ಭವ ನಾಮಗಳಿಗೂ ಕನ್ನಡದ ಅವ್ಯಯಗಳಿಗೂ ' ಇಸು ' ಹತ್ತಿ ಹೊಸ ಧಾತುಗಳು ಉಂಟಾಗುವುವು. ಇಂಥ ಹೊಸ ಧಾತುಗಳಿಗೆ ತದ್ಧಿತಧಾತುಗಳೆಂಬ ಹೆಸರು. ' ಇಸು ' ಪ್ರತ್ಯಯವು ಆ ನಾಮಾವ್ಯಯಗಳಿಗೆ ಮಾಡು ಇಲ್ಲವೆ ಪಡು ಅಥವಾ ಆಗು ಇಲ್ಲವೆ ಇರು ಎಂಬ ಕ್ರಿಯಾರ್ಥವನ್ನು ಕೂಡಿಸುವುದು.

ಉದಾಹರಣಗಳು:

ಮಾಡು ಎಂಬ ಅರ್ಥಕ್ಕೆ:

ಸಕ್ಕದ—ಕರುಣವನ್ನು ಮಾಡು= ಕರುಣಿಸು, ಸ್ತುತಿಸು, ಭೋಗಿಸು, ವಿಚಾರಿಸು.

ಕನ್ನಡ—ಕನ್ನಡಿಸು, ಹನಿಸು, ಹವಣಿಸು, ಅಬ್ಬರಿಸು, ಸಡಗರಿಸು, ಒತ್ತರಿಸು.

ತದ್ಭವ—ಬಣ್ಣಿಸು, ಬಿತ್ತರಿಸು, ಪವಣಿಸು, ಬಿನ್ನವಿಸು, ಪಳಯಿಸು.

ಪಡು ಎಂಬ ಅರ್ಥಕ್ಕೆ:

ಸಕ್ಕದ—ದುಃಖವನ್ನು ಪಡು= ದುಃಖಿಸು, ಸುಖಿಸು, ಸಮ್ಮತಿಸು, ಆನಂದಿಸು.

ಕನ್ನಡ—ತಲ್ಲಣಿಸು, ಕಳವಳಿಸು, ಡಾವರಿಸು, ಪದುಳಿಸು, ಉಮ್ಮಳಿಸು.

ತದ್ಭವ—ಸೊಗಯಿಸು.

ಆಗು ಅಥವಾ ಇರು ಎಂಬ ಅರ್ಥಕ್ಕೆ:

ಸಕ್ಕದ—ಸಮೀಪವಾಗು= ಸಮೀಪಿಸು, ರೂಢಿಸು, ವಿಸ್ತರಿಸು.

ಕನ್ನಡ—ಸಂಗಡಿಸು, ಹಿಂದಾಗು= ಹಿಂಚು, ಮುಂದಾಗು= ಮುಂಚು.

೧೮೬. ಪ್ರಕಾಶಾದಿಗಳ ಅತಿಶಯವನ್ನು ಸೂಚಿಸುವ ಥಳಥಳ ಮುಂತಾದ ಅವ್ಯಯಗಳಿಗೆ 'ಇಸು' ಹತ್ತುವುದು. ಆ ಅವ್ಯಯಗಳು ಯಾವ ಕ್ರಿಯೆಯನ್ನು ವಿಶೇಷಿಸುವುವೋ ಆ ಕ್ರಿಯೆಯೇ ಇಸು ಪ್ರತ್ಯಯಕ್ಕೆ ಅರ್ಥವಾಗುವುದು. ಉದಾ:

ಥಳಥಳಿಸು ಇಲ್ಲಿ ಇಸುವಿಗೆ ಹೊಳೆ ಎಂಬರ್ಥವು.
ಗಡಬಡಿಸು " " ಮಾಡು "
ಪಟಪಟಿಸು " " ಅನ್ನು "
ಮಳಮಳಿಸು " " ಆಗು "
ಗದಗದಿಸು, ಥರಥರಿಸು } " " ನಡುಗು "

೧೮೭. ತದ್ಧಿತಪ್ರತ್ಯಯಗಳು ಹಲವು ವಿಧವಾಗಿವೆ; ಅವುಗಳಲ್ಲಿ ಮುಖ್ಯವಾದುವುಗಳು ಯಾವುವೆಂದರೆ:—

(೧) ಭಾವಪ್ರತ್ಯಯಗಳು—ಇಕೆ, ಉ, ತ್ವ, ತನ, ಪು, ಮೆ.

(೨) ಅನ್ವರ್ಥಕಪ್ರತ್ಯಯಗಳು—ಅರ, ಇ, ಇಗ, ಇಷ್ಠ, ಕಾರ, ಗಾರ, ವಂತ, ಸ್ತ, ಸ್ಥ.

(೩) ಸ್ತ್ರೀಪ್ರತ್ಯಯಗಳು—ಇ, ಇತಿ, ಎ, ತಿ.

(೪) ಪೂರಕಪ್ರತ್ಯಯ—ಅನೆಯ†

ಆವೃತ್ತಿವಾಚಕಪ್ರತ್ಯಯ—ಮೆ.

## ಭಾವಪ್ರತ್ಯಯಗಳು.

೧೮೮. ವಸ್ತುಗಳ ಸ್ವಭಾವಾದಿಗಳ ಹೆಸರುಗಳನ್ನು ಹುಟ್ಟಿಸುವುದಕ್ಕೆ ಶಬ್ದಗಳಿಗೆ ಹಚ್ಚಲ್ಪಡುವ ಪ್ರತ್ಯಯಗಳು ಭಾವಪ್ರತ್ಯಯಗಳು. ಇವು ಜಾತಿ ಗುಣ ಕ್ರಿಯ ಎಂಬ ಮೂರು ಪ್ರಕಾರದ ಭಾವವನ್ನು ಹೇಳುತ್ತವೆ. ಈ ಪ್ರತ್ಯಯಗಳಿಂದ ಹುಟ್ಟಿದ ಶಬ್ದಗಳು ಭಾವವಾಚಕನಾಮಗಳಾಗುವುವು. ಭಾವವಾಚಕ ನಾಮಗಳಿಗೆ ಪುನಃ ಭಾವಪ್ರತ್ಯಯಗಳು ಹತ್ತುವುದಿಲ್ಲ.

---

† ಅನೆಯ ಪ್ರತ್ಯಯವನ್ನು ಕೆಲವರು ಅನೇ ಎಂದು ಉಚ್ಚರಿಸುತ್ತಾರೆ.

(ಅ) ಭಾವಪ್ರತ್ಯಯಗಳು ಜಾತಿವಾಚಕ ಶಬ್ದಗಳಿಗೆ ಹತ್ತಿದರೆ, ಜಾತಿ ಧರ್ಮವನ್ನು ಹೇಳುತ್ತವೆ.

ಉದಾ: ಬ್ರಾಹ್ಮಣ + ಇಕೆ = ಬ್ರಾಹ್ಮಣಿಕೆ, ಹೊಲೆಯ + ತನ = ಹೊಲೆತನ, ಶೂದ್ರ + ತ್ವ = ಶೂದ್ರತ್ವ.

'ಇಕೆ, ತನ, ತ್ವ' ಪ್ರತ್ಯಯಗಳು ಮಾತ್ರ ಜಾತಿಯ ಹೇಳಲಿಕ್ಕೆ ಬರುತ್ತವೆ. 'ತ್ವ' ಪ್ರತ್ಯಯವು ಸಂಸ್ಕೃತದಿಂದ ಬಂದಕಾರಣ ಸಂಸ್ಕೃತ ಶಬ್ದಗಳಿಗೆ ಹತ್ತುವುದು ಕನ್ನಡ ಶಬ್ದಗಳಿಗೆ ಹತ್ತುವುದಿಲ್ಲ.

(ಆ) ಭಾವಪ್ರತ್ಯಯಗಳು ಗುಣವಾಚಕಗಳಿಗೆ ಹತ್ತಿದರೆ, ವಸ್ತುಗಳ ಗುಣವನ್ನು ಹೇಳುವುವು.

ಉದಾ: ದೊಡ್ಡ + ಇಕೆ = ದೊಡ್ಡಸ್ತಿಕೆ, ಕುರುಡ + ಉ = ಕುರುಡು, ದಡ್ಡ + ತನ = ದಡ್ಡತನ, ಕರಿದು + ಪು = ಕಪ್ಪು, ಜಾಣ + ಮೆ = ಜಾಣ್ಮೆ, ಒಡೆಯ + ಮೆ = ಒಡಮೆ.

(ಇ) ಭಾವಪ್ರತ್ಯಯಗಳು ಕ್ರಿಯಾವಾಚಕಗಳಿಗೆ ಹತ್ತಿ ವಸ್ತುಗಳ ಕ್ರಿಯೆಯನ್ನು ಹೇಳುವುವು.

ಉದಾ: ಗೌಡ + ಇಕೆ = ಗೌಡಿಕೆ, (ಗೌಡನ ಕೆಲಸ); ಹರದ + ಉ = ಹರದು (ಹರದನ ಕೆಲಸ); ಕಿಡಿಗೇಡಿ + ತನ = ಕಿಡಿಗೇಡಿತನ (ಕಿಡಿಗೇಡಿಯ ಕೆಲಸ); ಯಾಚಕ + ತ್ವ = ಯಾಚಕತ್ವ (ಯಾಚಕನ ಕೆಲಸ) ಮು.

## ಅನ್ವರ್ಥಕಪ್ರತ್ಯಯಗಳು.

೧೮೯. ಉದ್ಯೋಗ ಗುಣ ಮುಂತಾದವುಗಳಿಂದ ವಸ್ತುಗಳಿಗೆ ಬರುವ ಹೆಸರುಗಳನ್ನು ಹುಟ್ಟಿಸಲಿಕ್ಕೆ ಶಬ್ದಗಳಿಗೆ ಹಚ್ಚಲ್ಪಡುವ ಪ್ರತ್ಯಯಗಳಿಗೆ ಅನ್ವರ್ಥಕಪ್ರತ್ಯಯಗಳೆಂಬ ಹೆಸರು.

### ಉದಾಹರಣಗಳು:

ಅನ್ವ. ಪ್ರ — ಅ. ಪ್ರ. ಹುಟ್ಟಿದ ಶಬ್ದಗಳು.

ಆರ. — ಉಪ್ಪು + ಆರ = ಉಪ್ಪಾರ (ಉಪ್ಪು ಮಾಡುವವ) ಇವರಂತೆ ಕುಂಬಾರ, ಕಮ್ಮಾರ ಮು.

ಇ. — ಕೆಲಸ + ಇ = ಕೆಲಸಿ. ಇವರಂತೆ ಬಿಯ್ಯಾರಿ, ಹೊಲಸಿ, ಸುಖಿ, ರೋಗಿ ಮು

ಗ. — ಹಡಪ + ಇಗ = ಹಡಪಿಗ (ಹಡಪವುಳ್ಳವ). ಹೀಗೆಯೇ ಸೊಬಗಿಗ, ಚಿಪ್ಪಿಗ. (= ಸಿಂಪಿಗ), ಸಾಲಿಗ ಮು.

ಇಷ್ಠ. — [illegible] ಕೋಪಿಷ್ಠ, ಗರ್ವಿಷ್ಠ, ಮು.

ಕಾರ. ಕೂಲಿ + ಕಾರ = ಕೂಲಿಕಾರ (ಕೂಲಿಯ ಮಾಡುವವ). ಇದರಂತೆ ಅಂಗಡಿಕಾರ, ಗಾಡಿಕಾರ ಮು.

ಗಾರ. ಸಾಲಗಾರ (ಸಾಲಮಾಡುವವ, ಸಾಲಕೊಟ್ಟವ). ಹೀಗೆಯೇ ಸವಿಗಾರ, ಮೋಸಗಾರ, ಜೊತೆಗಾರ, ಹಣಗಾರ ಮು.

ವಂತ. ಬಾಳ್ವೆವಂತ (ಬಾಳ್ವೆ ಮಾಡುವವ), ಮಾನವಂತ (ಮಾನವುಳ್ಳವ). ಹೀಗೆಯೇ ಸಿಂಗರವಂತ, ಕೆಲಸವಂತ, ಗುಣವಂತ ಮು.

ಸ್ತ, ಸ್ಥ. ನಂಬಿಗಸ್ತ, ನಂಬಿಗಸ್ಥ; ರೊಕ್ಕಸ್ತ, ಮನೆತನಸ್ತ, ಗೃಹಸ್ಥ, ವ್ಯಾಪಾರಸ್ಥ ಮು.

## ಸ್ತ್ರೀಪ್ರತ್ಯಯಗಳು.

೧೯೦. ಹೆಂಗುಸರನ್ನು ಸೂಚಿಸಲಿಕ್ಕೆ ಶಬ್ದಗಳಿಗೆ ಹತ್ತುವ ಪ್ರತ್ಯಯಗಳು ಸ್ತ್ರೀಪ್ರತ್ಯಯಗಳು.

ಉದಾಹರಣಗಳು:

| ಪ್ರತ್ಯಯಗಳು | ಶಬ್ದಗಳು |
|---|---|
| ಇ. | ಅರಸ + ಇ = ಅರಸಿ (ಅರಸನ ಹೆಂಡತಿ ಅಥವಾ ರಾಜ್ಯವಾಳುವವಳು). ಹೀಗೆಯೇ ಕಕ್ಕಿ, ಅಜ್ಜಿ, ಹರದಿ, ಒಯ್ಯಾರಿ (ಒಯ್ಯಾರವುಳ್ಳವಳು). ಇದರಂತೆ ಹೊಲಸಿ, ಬೆಡಗಿ, ಸೊಗಸಿ ಮು. |
| ಇತಿ. | ಬೀಗ + ಇತಿ = ಬೀಗಿತಿ, ಅರಸಿತಿ, ಮೊದಲಿಗಿತಿ ಮು. |
| ಎ. | ಜಾಣ + ಎ = ಜಾಣೆ, ವಿಗಡೆ, ಎಬಡೆ, ಕುರುಡೆ, ಹೆಡ್ಡೆ ಮು. |
| ಗಿತ್ತಿ. | ಕಳಸಗಿತ್ತಿ, ಪುರೋಹಿತಗಿತ್ತಿ, ಹಾದರಗಿತ್ತಿ ಮು. |
| ತಿ. | ಗೌಡತಿ, ಗೊಲ್ಲತಿ, ಹೊಲತಿ, ಗೆಳತಿ, ಡೊಂಬತಿ ಮು. |

## ಪೂರಕಪ್ರತ್ಯಯವು.

೧೯೧. ವಸ್ತುಗಳ ಅನುಕ್ರಮವನ್ನು ಸೂಚಿಸುವ ಪ್ರತ್ಯಯವು ಪೂರಕಪ್ರತ್ಯಯವೆನಿಸುತ್ತದೆ. ಉದಾ: ಅನೆಯ. ಇದು ಸಂಖ್ಯಾವಾಚಕಗಳಿಗೆ ಹತ್ತುವುದು.* ಇದರಿಂದ ಹುಟ್ಟಿದ ಶಬ್ದಗಳು ವಿಶೇಷಣಗಳಾಗುವುವು.

ಉದಾ: ಒಂದು + ಅನೆಯ = ಒಂದನೆಯ, ಎರಡು + ಅನೆಯ = ಎರಡನೆಯ.

---

* ಪರಿಮಾಣವಾಚಕಗಳಿಗೆ ಸಂಖ್ಯಾರ್ಥವಿದ್ದಾಗ 'ಅನೆಯ' ಹತ್ತುವುದು. ಉದಾ: ಅಷ್ಟನೆಯ ಮು.

## ಆವೃತ್ತಿವಾಚಕಪ್ರತ್ಯಯವು.

೧೯೨. ಕ್ರಿಯೆಯು ಎಷ್ಟು ಸಾರೆ ನಡೆಯಿತೆಂಬದನ್ನು ಸೂಚಿಸುವ ಸಂಖ್ಯಾವಾಚಕಗಳಿಗೆ ಹಚ್ಚಲ್ಪಡುವ ಪ್ರತ್ಯಯವೇ ಆವೃತ್ತಿವಾಚಕ ಪ್ರತ್ಯಯವೆನಿಸುತ್ತದೆ.

ಉದಾ: ಒಂದು+ಮೆ= ಒಮ್ಮೆ, ಎರಡು+ಮೆ= ಇಮ್ಮೆ, ಮೂರು+ಮೆ= ಮುಮ್ಮೆ, ಮೂಮೆ. ಹೀಗೆಯೇ ನಾಲ್ಕೆ, ಆಯ್ಕೆ, ಮುಂತಾದುವು. ಇವೆಲ್ಲ ಅವ್ಯಯುಗಳು.

## ಸಮಾಸಗಳು.

೧೯೩ ಎರಡು ಅಥವಾ ಹಲವು ಪದಗಳು ಕೂಡಿ ಒಂದರ್ಥವ ಹೇಳುವ ಒಂದು ಪದವಾದರೆ, (ಅದು ಸಮಸ್ತಪದ ಅಥವಾ) ಸಮಾಸವೆನಿಸುತ್ತದೆ.

ಉದಾ: 'ಅರಸನ' ಮಗನು, ಎಂಬೀ ಎರಡು ಪದಗಳು ಕೂಡಿ 'ಅರಸುಮಗನು' ಎಂಬ ಸಮಾಸವಾಗುವದು. ಅರಸುಮಗನೆಂದರೆ ಅರಸನೂ ಅಲ್ಲ, ಮಗನೂ ಅಲ್ಲ, ಅರಸನ ಮಗನೆಂಬೊಂದು ಬೇರೆಯರ್ಥವಾಗುವದು. ಇದೇ ಪ್ರಕಾರ ಮರಗಾಲು, ತಲೆಗಿಂಬು, ಚಲದಂಕ ಮು.

೧೯೪. ಎರಡು * ಪದಗಳು ಕೂಡಿ ಸಮಾಸವಾಗಿದ್ದರೆ, ಮೊದಲಿನ ಪದಕ್ಕೆ ಪೂರ್ವಪದ (ಅಥವಾ ಆದಿಪದವೆಂತಲೂ) ಎರಡನೆಯ ಪದಕ್ಕೆ ಪರಪದ (ಅಥವಾ ಉತ್ತರ ಪದವೆಂತಲೂ) ಹೆಸರುಗಳು.

ಉದಾ: "ಕಯ್ಕಾಲು" ಎಂಬ ಸಮಾಸದಲ್ಲಿ "ಕಯ್" ಪೂರ್ವಪದವು, "ಕಾಲು" ಪರಪದವು.

೧೯೫. ಸಮಾಸದ ಪದಗಳ ಮೊದಲಿನ ವಿಭಕ್ತಿಪ್ರತ್ಯಯಗಳಿಗೆ ಲೋಪ ಬರುತ್ತದೆ. ಇದೇ ಸಮಾಸದ ಮುಖ್ಯ ಲಕ್ಷಣವು. ಈ ಲಕ್ಷಣವುಳ್ಳ ಸಮಾಸಕ್ಕೆ 'ಲುಕ್‌ಸಮಾಸ'ವೆನ್ನುವ ರೂಢಿಯುಂಟು.

ಉದಾ: 'ರಾಮನೂ ಕೃಷ್ಣನೂ' ಈಯೆರಡು ಸಮುಚ್ಚಿತಪದಗಳನ್ನು ಕೂಡಿಸಿ ಸಮಾಸ ಮಾಡಬೇಕಾದರೆ, ಎರಡೂ ಪದಗಳ ವಿಭಕ್ತಿಪ್ರತ್ಯಯಗಳು ಲೋಪವಾಗಿ "ರಾಮಕೃಷ್ಣರು" ಎಂಬ ಹೊಸಪದವು ಸಿದ್ಧವಾಗುತ್ತದೆ.

ಅಪವಾದ—ಕೆಲವು ಸಮಾಸಗಳಲ್ಲಿ ವಿಭಕ್ತಿ ಪ್ರತ್ಯಯಗಳು ಲೋಪ ಹೊಂದುವುದಿಲ್ಲ. ಅಂಥ ಸಮಾಸಗಳಿಗೆ "ಅಲುಕ್‌ಸಮಾಸ"ವೆನ್ನುವರು.

ಉದಾ: ತಲೆಗಿಂಬು, ಚಲದಂಕ, ಮಕ್ಕಳೊಂದಿಗ ಮು.

---

* ಬಹುಶಃ ಎರಡೇ ಪದಗಳು ಕೂಡಿ ಸಮಾಸವಾಗುತ್ತದೆ. ದ್ವಂದ್ವದಲ್ಲಿ ಮಾತ್ರ ಬೇಕಾದಷ್ಟು ಪದಗಳು ಕೂಡುತ್ತವೆ.

೧೯೬. ಸಮಾಸದ ಪದಚ್ಛೇದಕ್ಕೆ ''ವಿಗ್ರಹ''ವೆನ್ನುವರು.

ಉದಾ: ''ಮನಗಾಣು'' ಎಂಬ ಸಮಾಸದ ಪದಚ್ಛೇದವು 'ಮನಸಿನಿಂದ ಕಾಣು' ಎಂತ ಆಗುತ್ತದೆ; ಇದಕ್ಕೇ ವಿಗ್ರಹವೆನ್ನುವರು.

೧೯೭. ಸಮಾಸವಾಗುವ ಶಬ್ದಗಳು ಒಂದೇ ಭಾಷೆಯವಾಗಿರಬೇಕು. ಎಂದರೆ ಕನ್ನಡ ನುಡಿಗಳು ಕನ್ನಡ ನುಡಿಗಳೊಡನೆ ಇಲ್ಲವೆ ತದ್ಭವಗಳೊಡನೆ, ಸಂಸ್ಕೃತ ಶಬ್ದಗಳು ಸಂಸ್ಕೃತ ಶಬ್ದಗಳೊಡನೆ ಸಮಾಸವಾಗಬೇಕು. ಬೇರೆ ಬೇರೆ ಭಾಷೆಗಳ ಶಬ್ದಗಳು ಕೂಡಿ ಸಮಾಸವಾಗುವುದು ತಪ್ಪು. ಅದಕ್ಕೆ 'ಅರಿಸಮಾಸ* ದೋಷ' ಎಂಬ ಹೆಸರು.

ಉದಾ: ಸರಿಯಾದ ಸಮಾಸಕ್ಕೆ: ಮನಗಾಣು, ತಲೆಗಿಂಬು, ಮರಗಾಲು, ಗಂಧಾಕ್ಷತೆ, ವಸ್ತ್ರಾಭರಣ, ತೃಣಪರ್ಣ, ಮು. ಅರಿಸಮಾಸ ದೋಷಕ್ಕೆ: ನೃಪಮಗ, ನಗೆಮುಖ ಇತ್ಯಾದಿ.

೧೯೮. ಸಮಾಸದೊಳಗಿನ ಯಾವ ಪದಕ್ಕೆ ಕ್ರಿಯಾಸಂಬಂಧವು ಇರು ವುದೋ, ಅದು (ಮುಖ್ಯಪದವು ಅಥವಾ) ಪ್ರಧಾನಪದವು.

ಉದಾ: ''ಹುಲ್ಲುಮನೆಯಲ್ಲಿ ಇದ್ದಾನೆ'' ಈ ವಾಕ್ಯದಲ್ಲಿ ಇರುವ ಕ್ರಿಯೆಯ ಸಂಬಂಧವು 'ಮನೆ' ಎಂಬ ಪದಕ್ಕೆ ಉಂಟು. ಆದದ್ದರಿಂದ 'ಹುಲ್ಲುಮನೆ' ಎಂಬ ಸಮಾಸ ಪದದೊಳಗೆ 'ಮನೆ' ಎಂಬ ಪದವು ಮುಖ್ಯವೆಂದು ತಿಳಿಯಬೇಕು.

''ಅಡಿದಾವರೆಗೆ ವಂದಿಸುತ್ತೇನೆ'' ಈ ವಾಕ್ಯದಲ್ಲಿ 'ಅಡಿದಾವರೆ' ಎಂಬದು ಸಮಾಸ ವಿದೆ. ಇನ್ನು ವಂದಿಸುವ ಕ್ರಿಯೆಯ ಸಂಬಂಧವು 'ಅಡಿ'ಗೆ ಉಂಟು. ಆದದ್ದರಿಂದ ಸಮಾಸದಲ್ಲಿ 'ಅಡಿ' ಎಂಬ ಪದವು ಮುಖ್ಯವೆಂದು ತಿಳಿಯಬೇಕು.

೧೯೯. ಸಮಾಸಗಳ ಅರ್ಥವನ್ನು ನೋಡಿದರೆ, ಅವು (೧) ದ್ವಂದ್ವ, (೨) ತತ್ಪುರುಷ, (೩) ಕರ್ಮಧಾರಯ, (೪) ದ್ವಿಗು, (೫) ಬಹುವ್ರೀಹಿ, (೬) ಅವ್ಯಯೀಭಾವ ಎಂದು ಆರು ವಿಧವಾಗಿವೆ.

ಇವಲ್ಲದೆ (೧) ಗಮಕಸಮಾಸ, (೨) ಕ್ರಿಯಾಸಮಾಸ ಎಂಬ ಬೇರೆ ಸಮಾಸಗಳಿರುತ್ತವೆ. ಆದರೆ ಗಮಕಸಮಾಸವೆಲ್ಲ ಮೇಲೆ ಹೇಳಿದ ಕರ್ಮ ಧಾರಯ ದ್ವಿಗುಗಳಲ್ಲಿ ಬಂದು ಹೋಗುತ್ತದೆ. ಕ್ರಿಯಾಸಮಾಸದ ಲಕ್ಷಣ ಮಾತ್ರ ಬೇರೆಯುಂಟು.

೨೦೦. ದ್ವಂದ್ವ ಸಮಾಸವು: ಹಲವು ಪ್ರಥಮಾಂತಪದಗಳು ಸಮುಚ್ಚ ಯಾರ್ಥದಿಂದ ಕೂಡಿ ಒಂದು ಪದವಾದರೆ, ಅದಕ್ಕೆ ದ್ವಂದ್ವ ಸಮಾಸವೆನ್ನುತ್ತಾರೆ. ಈ ಸಮಾಸದ ಎಲ್ಲ ಪದಗಳು ಮುಖ್ಯವಾಗಿರುತ್ತವೆ.

* ಅರಿ ಸಮಾಸಗಳು ಕೆಲವು ಕಡೆಗೆ ಶಾಸ್ತ್ರೀಯ ಬರಬಹುದು ಆದಿತು ಎನ್ನುತ್ತಾರೆ ಹೇಳಲಾಗಿ

ಉದಾಹರಣಗಳು:

| ವಿಗ್ರಹ. | ಸಮಾಸ |
|---|---|
| ತಂದೆಯೂ ತಾಯಿಯೂ | =ತಂದೆತಾಯಿಗಳು. |
| ಅಣ್ಣನೂ ತಮ್ಮನೂ | =ಅಣ್ಣತಮ್ಮಂದಿರು. |

ಹೀಗೆಯೆ ಗಜಾಶ್ವರಥಗಳು, ರಾಮಕೃಷ್ಣರು ಇತ್ಯಾದಿ.

(ಅ) ದ್ವಂದ್ವದಲ್ಲಿ ಪೂರ್ವಪದವಾದ 'ಹತ್ತು' ಶಬ್ದದ ಮುಂದೆ 'ಒಂದು, ಎರಡು' ಎಂಬ ಶಬ್ದಗಳು ಬಂದರೆ, 'ಹತ್ತು' ಶಬ್ದಕ್ಕೆ 'ಹನ್' ಎಂಬಾದೇಶವಾಗುವುದು.

ಉದಾ:

ಹತ್ತೂ ಒಂದೂ =ಹನ್ + ಒಂದು =ಹನ್ನೊಂದು. *

ಹತ್ತೂ ಎರಡೂ =ಹನ್ + ಎರಡು =ಹನ್ನೆರಡು.

(ಆ) 'ಹತ್ತ'ಕ್ಕೆ 'ಮೂರು, ನಾಲ್ಕು' ಶಬ್ದಗಳು ಪರವಾದರೆ ಹದಿ ಎಂಬಾದೇಶವಾಗುವದು.

ಉದಾ:

ಹತ್ತೂ ಮೂರೂ =ಹದಿಮೂರು. ಹತ್ತೂ ನಾಲ್ಕೂ =ಹದಿನಾಲ್ಕು.

(ಇ) 'ಹತ್ತ'ಕ್ಕೆ 'ಅಯ್ದು, ಆರು, ಏಳು, ಎಂಟು' ಶಬ್ದಗಳು ಪರವಾದರೆ, 'ಹದಿನ್' ಎಂಬ ಆದೇಶವಾಗುವುದು.

ಉದಾ: ಹದಿನಯ್ದು, ಹದಿನಾರು, ಹದಿನೇಳು, ಹದಿನೆಂಟು.

೨೦೧. ತತ್ಪುರುಷ: ಉತ್ತರಪದವು ಮುಖ್ಯವಾಗಿರುವ ಸಮಾಸಕ್ಕೆ ತತ್ಪುರುಷವೆನ್ನುವರು. ಈ ಸಮಾಸದಲ್ಲಿ ಪೂರ್ವಪದವು ದ್ವಿತೀಯಾದಿ ವಿಭಕ್ತಿಗಳಿಂದ ಉತ್ತರಪದಕ್ಕೆ ಸಂಬಂಧಿಸಿರುತ್ತದೆ.

ಉದಾಹರಣಗಳು:

| ವಿಗ್ರಹ | ಸಮಾಸ |
|---|---|
| ಮರವನ್ನು ಕಡಿದವನು | =ಮರಗಡಿದವನು. |
| ಬಾಯಿಂದ ಜಗಳವು | =ಬಾಯಿಜಗಳವು. |
| ಅರಸಿಗೆ ಕಾಣಿಕೆ | =ಅರಸುಗಾಣಿಕೆ. |
| ಹುಲಿಯಿಂದ ಅಂಜಿಕೆ | =ಹುಲಿಯಂಜಿಕೆ. |
| ಮಲ್ಲರ ಕಾಳಗವು | =ಮಲ್ಲಕಾಳಗವು. |

ಹೀಗೆಯೆ ಭೂತಬಲಿ, ಚೋರಭಯು, ರಣಶೂರ ಇತ್ಯಾದಿ.

* ೪೫ನೆಯ ನಿಯಮವನ್ನು ನೋಡು.

೨೦೨. ಕರ್ಮಧಾರಯ: ವಿಶೇಷ್ಯವಿಶೇಷಣಗಳು ಇಲ್ಲವೆ ಎರಡು ವಿಶೇಷಣಗಳು ಅಥವಾ ಉಪಮಾನೋಪಮೇಯ ಮುಂತಾದುವುಗಳು ಕೂಡಿ ಆಗುವ ಸಮಾಸಕ್ಕೆ ಕರ್ಮಧಾರಯವೆಂಬ ಹೆಸರು.

ಇದರಲ್ಲಿ ಕೆಳಗೆ ಬರೆದಂತೆ ಮುಖ್ಯವಾಗಿ ಎಂಟು– ಪ್ರಕಾರಗಳುಂಟು:

(೧) ವಿಶೇಷಣ ಪೂರ್ವಕರ್ಮಧಾರಯ. ಉದಾ: ಕರಿದಾದ ಕೊರಲು = ಕರಿಗೊರಲು, ಬಿಳಿದಾದ ತಾವರೆ = ಬೆಳ್ದಾವರೆ, ಶ್ವೇತವಾದ ವಸ್ತ್ರ = ಶ್ವೇತವಸ್ತ್ರ ಮು.

(೨) ವಿಶೇಷಣೋತ್ತರ ಕ. ಧಾ. ಉದಾ:—ವೀರನಾದ ನರ = ನರವೀರ, ಶ್ರೇಷ್ಠನಾದ ನೃಪ = ನೃಪಶ್ರೇಷ್ಠ, ಉತ್ತಮನಾದ ದ್ವಿಜ = ದ್ವಿಜೋತ್ತಮ ಮು.

(೩) ಉಪಮಾನ ಕ. ಧಾ. ಉದಾ:—ತಳಿರಂಥ ಅಡಿ = ತಳಿರಡಿ, ಕೆರೆಯಂಥ ಮೊಗಂ = ಪೆರೆಮೊಗಂ, ಕಮಲದಂಥ ನೇತ್ರಗಳು = ಕಮಲನೇತ್ರಗಳು ಮು.

(೪) ಉಪಮಾನೋತ್ತರ ಕ.ಧಾ. ಉದಾ:—ತಳಿರಂಥ ಅಡಿ = ಅಡಿದಳಿರು, ಸಸಿಯಂಥ ಮೊಗಂ = ಮೊಗಸಸಿ, ಕಮಲದಂಥ ಮುಖಂ = ಮುಖಕಮಲಂ ಮು.

(೫) ಸಂಭಾವನಾ ಪೂರ್ವ ಕ. ಧಾ. ಉದಾ:—ಅಡಿಯೆಂಬ ತಳಿರು = ಅಡಿದಳಿರು, ಚೆಂದಳಿರೆಂಬ ನಾಲಗೆ = ಚೆಂದಳಿರ್ನಾಲಗೆ ಮು.

(೬) ಅವಧಾರಣಾ ಪೂರ್ವ ಕ. ಧಾ. ಉದಾ:—ಯಶಸ್ಸೇ ಚಂದ್ರಿಕೆ = ಯಶಶ್ಚಂದ್ರಿಕೆ, ಪರ್ಣವೇ ಆಹಾರ = ಪರ್ಣಾಹಾರ ಮು.

(೭) ವಿಶೇಷಣೋಭಯ ಕ. ಧಾ. ಉದಾ:—ಕಟುವೂ ಮಧುರವೂ ಆದದ್ದು = ಕಟುಮಧುರವು, ಹಸಿಯೂ ಬಿಸಿಯೂ ಆದದ್ದು = ಹಸಿಬಿಸಿಯು, ಶ್ವೇತವೂ ರಕ್ತವೂ ಆದದ್ದು = ಶ್ವೇತರಕ್ತವು; ಹಿರಿಕಿರಿದು, ಶೀತೋಷ್ಣವು ಮು.

(೮) ಮಧ್ಯಮಪದಲೋಪೀ ಕ.ಧಾ. ಉದಾ:—ಯಜ್ಞವನ್ನು ಮಾಡುವದಕ್ಕೆ ದೀಕ್ಷಿತನು (ದೀಕ್ಷಾಬದ್ಧನು) = ಯಜ್ಞದೀಕ್ಷಿತನು.

೨೦೩. ದ್ವಿಗುಸಮಾಸವು:* ಪೂರ್ವಪದವು ಸಂಖ್ಯಾವಾಚಕವಾಗಿಯೂ ಪರಪದವು ಮುಖ್ಯವಾಗಿಯೂ ಇರುವ ಸಮಾಸಕ್ಕೆ ದ್ವಿಗುವೆನ್ನುವರು.

ಉದಾ: ಇಕ್ಕೆಲಗಳು, ನೂರೆಲೆಗಳು, ತ್ರಿಕರಣಗಳು, ಪಂಚೇಂದ್ರಿಯಗಳು, ಷಡ್ಗುಣಗಳು ಮು.

೨೦೪. ಬಹುವ್ರೀಹಿಸಮಾಸವು: ಎರಡು ಪದಗಳು ಕೂಡಿ ಬೇರೊಂದು ವಸ್ತುವನ್ನು ಹೇಳಿದರೆ, ಬಹುವ್ರೀಹಿಸಮಾಸವಾಗುತ್ತದೆ. ಈ ಸಮಾಸದೊಳಗಿನ ಯಾವ ಪದವೂ ಮುಖ್ಯವಿರುವದಿಲ್ಲ. ಸಮಾಸವೆಲ್ಲ 'ಉಳ್ಳ' ಎಂಬ ಶಬ್ದದೊಡನೆ ಬೇರೊಂದು (ಹೊರಗಿನ) ಪದಕ್ಕೆ ವಿಶೇಷಣವಾಗುತ್ತದೆ.

---

* ಇದು ಕರ್ಮಧಾರಯದ ಒಂದು ಪ್ರಕಾರ.

ಉದಾಹರಣಗಳು:

| ವಿಗ್ರಹ. | ಸಮಾಸ. |
|---|---|
| ಮೂರು ಕಣ್ಣುಳ್ಳವನು | = ಮುಕ್ಕಣ್ಣನು. |
| ಕರಿದಾದ ಕೊರಲುಳ್ಳವನು | = ಕರಿಗೊರಲನು. |
| ಮಹತ್ತಾದ ಬಾಹುವುಳ್ಳವನು | = ಮಹಾಬಾಹು. |
| ತಾವರೆಯಂಥ ಕಣ್ಣುಳ್ಳವನು | = ತಾವರೆಗಣ್ಣನು. |

ಕನ್ನಡಶಬ್ದಗಳಿಂದಾದ ಬಹುವ್ರೀಹಿಸಮಾಸಕ್ಕೆ ಕೊನೆಗೆ 'ಅ' ಪ್ರತ್ಯಯ ಬರುತ್ತದೆ.

ಉದಾಹರಣಗಳು:

ಮುಕ್ಕಣ್ಣು+ಅ = ಮುಕ್ಕಣ್ಣ. ಕರಿಗೊರಲು+ಅ = ಕರಿಗೊರಲ. ಪೆರೆದಲೆ+ಅ = ಪೆರೆದಲೆಯ. ನಿಡುಗಯ್+ಅ = ನಿಡುಗಯ್ಯ.

ಅಪವಾದ—'ಜಾಗ, ಹಲ್ಲು, ಮೂಗು, ಬಿನ್ನಣ, ಕೆಲಸ, ಉಜ್ಜುಗ' ಶಬ್ದಗಳು ಉತ್ತರಪದಗಳಾಗಿರುವ ಬಹುವ್ರೀಹಿಗೆ 'ಇ' ಪ್ರತ್ಯಯ ಬರುವುದು.

ಉದಾಹರಣಗಳು:

ಕಡುಜಾಗ+ಇ = ಕಡುಜಾಗಿ. ನಿಡುಮೂಗು+ ಇ = ನಿಡುಮೂಗಿ. ಎರಡು ಹಲ್ಲು + ಇ = ಎರಡು ಹಲ್ಲಿ. ಹಾಲುಹಲ್ಲು + ಇ = ಹಾಲುಹಲ್ಲಿ. ಕಡುಗೆಲಸ + ಇ = ಕಡುಗೆಲಸಿ ಮು.

೨೦೫. **ಅವ್ಯಯೀಭಾವವು:** ಅವ್ಯಯರೂಪವಾಗುವ ಸಮಾಸಕ್ಕೆ ಅವ್ಯಯೀಭಾವವೆನ್ನುವರು.

ಉದಾ: ಪ್ರತಿದಿನಂ, ಪ್ರತ್ಯಕ್ಷಂ, ಯಥಾರ್ಥಂ. ಇವು ಸಂಸ್ಕೃತಭಾಷೆಯೊಳಗಿನವು, ಇವುಗಳ ವಿಗ್ರಹವನ್ನು ಕನ್ನಡ ವಿಭಕ್ತಿಗಳಿಂದ ಹೇಳಲಿಕ್ಕೆ ಬರುವುದಿಲ್ಲ; ಕನ್ನಡದಲ್ಲಿ ಈ ಬಗೆಯ ಅವ್ಯಯೀಭಾವಸಮಾಸಗಳು ತೋರುವುದಿಲ್ಲ.

'ಕೆಳಗೆ, ಮೇಲೆ, ಮುಂದೆ, ಹಿಂದೆ, ತುದಿ' ಮೊದಲಾದ ಕೆಲವು ಅವ್ಯಯಗಳು ಪೂರ್ವಪದಗಳಾಗಿ ಬೇರೆ ಶಬ್ದಗಳೊಡನೆ ಸಮಾಸಗಳಾಗುತ್ತವೆ. ಅವುಗಳಿಗೆ ಹಳಗನ್ನಡದ ವ್ಯಾಕರಣಕಾರರು ಅವ್ಯಯೀಭಾವ ಸಮಾಸಗಳೆಂದು ಹೆಸರಿಟ್ಟಿದ್ದಾರೆ.

ಉದಾ: ಕೆರೆಯ ಕೆಳಗೆ = ಕಿಳ್ಕೆರೆ, ಕೈಯ ಮುಂದು = ಮುಂಗೈ. ಹೀಗೆಯೇ ತುದಿ ನಾಲು, ಹಿತ್ತಿಲ, ಮುಂತಾದುವುಗಳನ್ನು ತಿಳಿದುಕೊಳ್ಳುವುದು.

ಇವುಗಳಿಗೆ ಅಂಶಿಸಮಾಸಗಳೆಂದು ಕೆಲವರು ಹೇಳುತ್ತಾರೆ.

೨೦೬. **ಗಮಕಸಮಾಸವು:** ಪೂರ್ವಪದವು ಸಂಖ್ಯಾವಾಚಕ, ಗುಣವಾಚಕ, ಕೃದಂತ, ದಿಗ್ವಾಚಕ, ಸರ್ವನಾಮಕ ವಿಶೇಷಣಗಳಲ್ಲಿ ಯಾವುದಾದರೂ ಒಂದು ಪರಪದವು ನಾಮಪದವು ಇದ್ದರೆ, ಗಮಕಸಮಾಸವಾಗುವದು.

**ಉದಾಹರಣಗಳು:**

| ವಿಗ್ರಹ | | ಸಮಾಸ |
|---|---|---|
| ಮೂಕೆಯಾದ ಹುಡುಗೆ | = | ಮೂಕಹುಡುಗೆ |
| ದೊಡ್ಡಿತ್ತಾದ ಮನೆ | = | ದೊಡ್ಡಮನೆ |
| ಅಳುವದಾದ ಕೂಸು | = | ಅಳುವ ಕೂಸು |
| ಕಡೆಯುವದಾದ ಕೋಲು | = | ಕಡಗೋಲು |
| ಇದು ಮನೆ | = | ಈ ಮನೆ |
| ಅದು ತೋಟ | = | ಆತೋಟ ಮು, |

ಹೀಗೆಯೆ ಮೂರು ಲೋಕಗಳು, ನಾಲ್ಕು ದಿಕ್ಕುಗಳು, ಅಸಿಯ ನಡು ಇತ್ಯಾದಿ.

ಗಮಕಸಮಾಸವೆಂಬುದು ಕನ್ನಡದಲ್ಲಿ ಮಾತ್ರ ಇರುವುದು. ಇದರ ಮುಖ್ಯ ಲಕ್ಷಣವೆಂದರೆ ಇದರಲ್ಲಿಯ ಪದಗಳು ಬಿಡಿಬಿಡಿಯಾಗಿಯೆ ಇದ್ದು 'ಗಮಕ'ದಿಂದ (ಎಂದರೆ ಓದುವಾಗ) ಸಮಾಸಗಳಂತೆ ಕಾಣುವುವು.

ಉದಾ: 'ಸುಡುವುದು ಕಾಡು' ಇಲ್ಲಿ ಸಮಾಸವಿಲ್ಲ. 'ಸುಡುವ ಕಾಡು' ಇದು ಗಮಕಸಮಾಸ. 'ಸುಡುಗಾಡು' ಇದು ಕರ್ಮಧಾರಯ ಸಮಾಸವು.

ಆದುದರಿಂದ ಗಮಕಸಮಾಸವು ಕರ್ಮಧಾರಯದ ಒಂದು ಪ್ರಕಾರವೆಂದು ಹಳಗನ್ನಡ ವ್ಯಾಕರಣಗಳಲ್ಲಿ ಹೇಳಿದೆ. ಗಮಕಸಮಾಸಗಳಲ್ಲಿ ಉತ್ತರಪದವು ಸಂಸ್ಕೃತವಾಗಿರಬಹುದು.

ಉದಾ: ಹೊಡೆಯುವ ಭೇರಿ, ಬೀಸುವ ವಾಯು, ಆ ನಾದವು—ಇತ್ಯಾದಿ.

**ಉದಾಹರಣಗಳು:**

೨೦೭. **ಕ್ರಿಯಾಸಮಾಸ:** ಕಾರಕವು ಕ್ರಿಯೆಯೊಡನೆ ಕೂಡಿದರೆ ಕ್ರಿಯಾಸಮಾಸವಾಗುತ್ತದೆ.

**ಉದಾಹರಣಗಳು:**

| ವಿಗ್ರಹ | | ಸಮಾಸ |
|---|---|---|
| ದುಃಖವನ್ನು ಪಡು | = | ದುಃಖಪಡು. |
| ಮನಸಿನಿಂದ ಕಾಣು | = | ಮನಗಾಣು. |
| ಮನಕ್ಕೆ ಸಂದನು | = | ಮನಸಂದನು. |
| ಗತಿಯಿಂದ ಕೆಟ್ಟನು (ಅಗಲಿದನು) | = | ಗತಿಗೆಟ್ಟನು. |
| ತಪಸ್ಸಿನಲಿ ಇರ್ಪಳು | = | ತಪವಿರ್ಪಳು. |
| ಬಾವಿಯಲ್ಲಿ ಬೀಳು | = | ಬಾವಿಬೀಳು ಮು. |

೨೦೮. ಅರಿಸಮಾಸ: ಈ ಸಮಾಸದ ಲಕ್ಷಣವನ್ನು ಹಿಂದೆಹೇಳಿದ್ದೇವೆ. ಅಲುಕ್, ಗಮಕ, ಕ್ರಿಯಾಸಮಾಸಗಳಲ್ಲಿಯೂ ಬಿರುದಾವಳಿಯಲ್ಲಿಯೂ ಅರಿಸಮಾಸಗಳನ್ನು ಮಾಡಬಹುದು. ಇದಲ್ಲದೆ ಪೂರ್ವದ ಮಹಾಕವಿಗಳು ಬಳಸಿದ ಅರಿಸಮಾಸಗಳಿಗೂ ದೋಷವಿಲ್ಲ.

ಉದಾ: ಅಲುಕ್ ಸಮಾಸಗಳು—ದೇವನೂರು, ಕಲ್ಲ ಮಂಟಪ.

ಗಮಕಸಮಾಸಗಳು—ದೊಡ್ಡ ಮನುಷ್ಯ, ಸಣ್ಣ ಮನಸ್ಸು.

ಕ್ರಿಯಾಸಮಾಸ—ಸುಖಬಡು, ದುಃಖಪಡು, ಚಿಂತೆಮಾಡು.

ಬಿರುದಾವಳಿ— ರಾಯಕೋಲಾಹಲ, ಕರಿವೇಂಟೆಗಾರ, ನರಲೋಕದಲ್ಲಣ.

ಪೂರ್ವದ ಕವಿಗಳ ಅರಿಸಮಾಸ—ಮನೆವಾರ್ತೆ, ಕಟಿವಾಯಿ, ಪಾದಸಂಕಲೆ, ಮಾಣಿಕಬಂಡಾರ, ಮಂಗಳವಸದನ, ಗಿಡಮೂಲಿಕೆ ಮು.

೨೦೯. (ಅ) ಸಮಾಸದಲ್ಲಿ ಆಗುವ ಕೆಲವು ವಿಕಾರಗಳು: ಪೂರ್ವಪದಗಳಾಗಿರುವ ಒಂದು, ಎರಡು, ಮೂರು ಶಬ್ದಗಳಿಗೆ ಕ್ರಮದಿಂದ ಒ ಇ ಮು ಎಂಬಾದೇಶಗಳು ವಿಕಲ್ಪದಿಂದಾಗುವುವು*. ಈಯಾದೇಶಗಳ ಮುಂದೆ ಇರುವ ಪರಪದಾದಿವ್ಯಂಜನಕ್ಕೆ ದ್ವಿತ್ವ ಬರುತ್ತದೆ.

ಉದಾ: ಒಂದು ತೋಳು = ಒತ್ತೋಳು; ಎರಡು ತಂಡ = ಇತ್ತಂಡ; ಮೂರು ಕೋಟು = ಮುಕ್ಕೋಟು; ಒಂದು ಗಾಲಿ = ಒಗ್ಗಾಲಿ; ಎರಡು ಮಡಿ = ಇಮ್ಮಡಿ; ಎರಡು ಕೆಲಸ = ಇಗ್ಗೆಲಸ; ಮೂರು ಗುಡ್ಡೆ = ಮುಗ್ಗುಡ್ಡೆ; ಮೂರು ನೂರು = ಮುನ್ನೂರು.

(ಆ) ಕೆಲವು ಸಮಾಸಗಳಲ್ಲಿ ಪೂರ್ವಪದಾಂತ ವರ್ಣಕ್ಕೆ ಇಲ್ಲವೆ ವರ್ಣಗಳಿಗೆ ಲೋಪ ಬರುವುದು.

ಉದಾ: ತೆರೆದ ಬಾಯಿ = ತೆರವಾಯಿ; ಕಡೆವ ಕೋಲು = ಕಡಗೋಲು; ಹಿಡಿವ ಕೇಜಿ = ಹಿಡಿದೇಜಿ; ತೆಂಕಣ ಗಾಳಿ = ತೆಂಗಾಳಿ; ನಾಲ್ಕು ನೂರು = ನಾನೂರು; ನಾಲ್ಕು ಬೆರಲು = ನಾಬೆರಲು; ಮೂರು ಲೋಕ = ಮೂಲೋಕ; ಮೂರು ಗಾವುದ = ಮೂಗಾವುದ; ಒಂದು ದಿನ = ಒಂದಿನ ಮು.

(ಇ) ಣಕಾರಕ್ಕೆ ಪರವಾದ ನಕಾರವು ಣಕಾರವಾಗುವದು. ಆದರೆ ಅರ್ಥಕ್ಕೆ ಸಂಶಯ ಬರುವಲ್ಲಿ ಇಲ್ಲವೆ ಉಚ್ಚಾರಕ್ಕೆ ತೊಂದರೆಯಾಗುವಲ್ಲಿ ಣಕಾರಾದೇಶವನ್ನು ಮಾ[ಡ]ಬಾರದು.

ಉದಾ: ತಣ್ ನೀರು = ತಣ್ಣೀರು, ಜಾಣ್ ನುಡಿ = ಜಾಣ್ಣುಡಿ ಮು. ಆದರೆ ಕಣ್ + ನೋಟ = ಕಣ್ಣೋಟವೆಂದೆ ಇಡುವುದು ಒಳ್ಳೆಯದು.

---

* ಉತ್ತರಪದವು ಸ್ವರಾದಿಯಾದರೆ, ಪೂರ್ವಪದವಾದ ಒಂದು ಇದಕ್ಕೆ ಒರ್, ಎರಡು ಇದಕ್ಕೆ ಈರ್, ಮೂರು ಇದಕ್ಕೆ ಮೂವರ್ ಎಂಬಾದೇಶಗಳು ವಿಕಲ್ಪದಿಂದಾಗುವವು. ಉದಾ: [illegible] ಈರಾದು; ಮೂರಡಿ, ಮುಯ್ಯಡಿ ಮು

# ಮೂರನೆಯ ಭಾಗ—ವಾಕ್ಯವಿಚಾರ

## ಆಖ್ಯೇಯ—ಆಖ್ಯಾತಗಳು.

೨೧೦. ಪೂರ್ಣವಾದ ಆಲೋಚನೆಯನ್ನು ತಿಳಿಸುವಂತೆ ಸಾಲ್ಗೊಳಿಸಿದ ಪದಗಳ ಸಮೂಹವು ವಾಕ್ಯವೆನಿಸುತ್ತದೆ.

ಉದಾ: ದೇವರು ಲೋಕವನ್ನು ಹುಟ್ಟಿಸಿದನು.

೨೧೧. ವಾಕ್ಯದಲ್ಲಿ ಆಖ್ಯೇಯ-ಆಖ್ಯಾತಗಳೆಂಬೆರಡು ಮುಖ್ಯ ಪದಗಳು ಇರುತ್ತವೆ.

(ಅ) ವರ್ಣಿಸಲ್ಪಡುವ ವಸ್ತುವನ್ನು ಇಲ್ಲವೆ ಸಂಗತಿಯನ್ನು ಹೇಳುವ ಪದಕ್ಕೆ 'ಆಖ್ಯೇಯಪದ' ಅಥವಾ ಉದ್ದೇಶಪದ ಎನ್ನುವರು.

ಉದಾ: ಸೂರ್ಯನು ಹೊಳೆಯುತ್ತಾನೆ; ರಾಮನ ವನವಾಸವು ರಾಕ್ಷಸರನ್ನು ಕೆಡಿಸಿತು—ಇವೆರಡು ವಾಕ್ಯಗಳಲ್ಲಿ ಸೂರ್ಯನೂ ರಾಮನ ವನವಾಸವೂ ವರ್ಣಿಸಲ್ಪಟ್ಟವುವು; ಕಾರಣ ಇವಕ್ಕೆ ಆಖ್ಯೇಯಪದಗಳೆಂಬ ಹೆಸರು.

(ಆ) ಆಖ್ಯೇಯದ ಕ್ರಿಯೆಯನ್ನು ಇಲ್ಲವೆ ಲಕ್ಷಣವನ್ನು ಹೇಳುವ ಕ್ರಿಯಾಪದಕ್ಕೆ ಆಖ್ಯಾತಪದ ಇಲ್ಲವೆ ವಿಧೇಯಪದವೆಂದು ಎನ್ನುವರು.

ಮೇಲಿನ ವಾಕ್ಯಗಳಲ್ಲಿ 'ಹೊಳೆಯುತ್ತಾನೆ' ಎಂಬುದೂ 'ಕೆಡಿಸಿತು' ಎಂಬುದು ಆಖ್ಯಾತಪದಗಳು ಇಲ್ಲವೆ ವಿಧೇಯಪದಗಳು.

೨೧೨. ಆಖ್ಯಾತವು ಕ್ರಿಯಾವಾಚಕವೆಂತಲೂ ಲಕ್ಷಣವಾಚಕವೆಂತಲೂ ಎರಡು ವಿಧವಾಗಿದೆ.

(ಅ) ಆಖ್ಯೇಯದ ಕ್ರಿಯೆಯನ್ನು ಹೇಳುವ ಆಖ್ಯಾತಗಳು ಕ್ರಿಯಾವಾಚಕಾಖ್ಯಾತಗಳು.

ಉದಾ: ರಾಮನು ಓಡುತ್ತಾನೆ— ಈ ವಾಕ್ಯವಲ್ಲಿ 'ಓಡುತ್ತಾನೆ' ಎಂಬುದು ಕ್ರಿಯಾವಾಚಕ ಆಖ್ಯಾತವು; ಏಕಂದರೆ, ಅದು ರಾಮನ ಕ್ರಿಯೆಯನ್ನು ಹೇಳುತ್ತದೆ.

(ಆ) ಆಖ್ಯೇಯದ ಲಕ್ಷಣವನ್ನು ಹೇಳುವಾಖ್ಯಾತಗಳು ಲಕ್ಷಣವಾಚಕಾಖ್ಯಾತಗಳು.

ಉದಾ: ದೇವರು ದೊಡ್ಡವನಿದ್ದಾನೆ; ಸೂರ್ಯನು ಹೊಳೆಯುತ್ತಾನೆ—ಈ ಎರಡು ವಾಕ್ಯಗಳಲ್ಲಿ 'ದೊಡ್ಡವನಿದ್ದಾನೆ' 'ಹೊಳೆಯುತ್ತಾನೆ' ಎಂಬವೆರಡೂ ಲಕ್ಷಣ ವಾಚಕಾಖ್ಯಾತಗಳು; ಏಕೆಂದರೆ, ಅವು ಆಖ್ಯೇಯ ವಸ್ತುಗಳ ಲಕ್ಷಣವನ್ನು ಹೇಳುತ್ತವೆ.

೨೧೩. (ಅ) ಉತ್ತರವಿಶೇಷಣಗಳಿಗೆ 'ಇರು' ಧಾತುವಿನ ಕ್ರಿಯಾಪದಗಳನ್ನು ಹಚ್ಚಿದರೆ, ಲಕ್ಷಣವಾಚಕಾಖ್ಯಾತಗಳು ಆಗುತ್ತವೆ.

ಉದಾ: ದೇವರು ದೊಡ್ಡವನಿದ್ದಾನೆ.

(ಆ) ಇದಲ್ಲದೆ ಕೆಲವು ಕ್ರಿಯಾಪದಗಳೂ ಲಕ್ಷಣವಾಚಕಗಳಾಗಿವೆ.

ಉದಾ: ಕನ್ನಡಿ ಹೊಳೆಯುತ್ತದೆ; ಬೆಳ್ಳುಳ್ಳಿ ನಾರುತ್ತದೆ ಮು.

೨೧೪. ಆಖ್ಯೇಯಪದದ ಪುರುಷಲಿಂಗವಚನಗಳು ಆಖ್ಯಾತಕ್ಕೆ ಬರುತ್ತವೆ.

ಉದಾಹರಣಗಳು:

| | |
|---|---|
| ನಾನು ಮಾಡುತ್ತೇನೆ, | ನಾವು ಮಾಡುತ್ತೇವೆ; |
| ನೀನು ಮಾಡುತ್ತೀ, | ನೀವು ಮಾಡುತ್ತೀರಿ; |
| ಅವನು ಮಾಡುತ್ತಾನೆ, | ಅವರು ಮಾಡುತ್ತಾರೆ; |
| ಅವಳು ಮಾಡುತ್ತಾಳೆ, | ಅವರು ಮಾಡುತ್ತಾರೆ; |
| ಅದು ಮಾಡುತ್ತದೆ, | ಅವು ಮಾಡುತ್ತವೆ ಮು. |

ಮೇಲೆ ತೋರಿಸಿದ ಆಖ್ಯೇಯಾಖ್ಯಾತಗಳ ಪುರುಷಲಿಂಗವಚನಗಳ ಐಕ್ಯಕ್ಕೆ 'ಆಖ್ಯೇಯ-ಆಖ್ಯಾತಗಳ ಸಂಬಂಧ'ವೆಂತಲೂ, 'ಉದ್ದೇಶವಿಧೇಯಭಾವ'ವೆಂತಲೂ ಎನ್ನುವರು.

೨೧೫. ಮೇಲಿನ ೨೧೪ನೆಯ ನಿಯಮಕ್ಕೆ ಕೆಲವು ಅಪವಾದಗಳಿವೆ; ಅವು ಯಾವುವೆಂದರೆ:—

(ಅ) 'ದೇವರು' ಎಂಬ ಆಖ್ಯೇಯಕ್ಕೆ ವಿಕಲ್ಪವಾಗಿ ಏಕವಚನದ ಆಖ್ಯಾತವು ಬರುವುದು.

ಉದಾ: ದೇವರು ಇದ್ದಾನೆ, ದೇವರು ಇದ್ದಾರೆ.

(ಆ) ಇದಲ್ಲದೆ 'ದೇವರು' ಎಂಬ ಪುಲ್ಲಿಂಗಬಹುವಚನದ ಆಖ್ಯೇಯಕ್ಕೆ ನಪುಂಸಕಲಿಂಗದ ಆಖ್ಯಾತವು ಒಮ್ಮೊಮ್ಮೆ ಬರುತ್ತದೆ.

ಉದಾ: ಅವನ ಮೈಯಲ್ಲಿ ದೇವರು ಬರುತ್ತದೆ, ದೇವರು ಬಂದವು.

(ಇ) 'ಹುಡುಗರು, ಹುಡುಗ, ಹೆಂಡತಿ, ತೊತ್ತು, ವರ, ಕನ್ಯೆ' ಮುಂತಾದ ಕೆಲವು ಆಖ್ಯೇಯಗಳಿಗೆ ನಪುಂಸಕಲಿಂಗದ ಆಖ್ಯಾತಗಳೂ ಒಮ್ಮೊಮ್ಮೆ ಬರುವುದುಂಟು.

ಉದಾ: ಹುಡುಗರು ಆಡುತ್ತವೆ, ಹುಡುಗ ಬಂತು, ಹುಡುಗಿ ನಗುತ್ತದೆ, ಹ...
ಲ್ಲದ ಹೊತ್ತಿನಲ್ಲಿ ತೊತ್ತು ಮೆಯ್ನೆರೆಯಿತು, ಅವರ ಮನೆಯಲ್ಲಿ ಒಂದು ವರವು ...
ಇವರಲ್ಲಿ ಒಂದು ಕನ್ನೆ ಅದೆ.

(ಈ) ತಿರಸ್ಕಾರಾರ್ಥದಲ್ಲಿ ಪುಲ್ಲಿಂಗದ ಅಥವಾ ಸ್ತ್ರೀಲಿಂಗದ ಆಖ್ಯೇ...
ಗಳಿಗೆ ನಪುಂಸಕಲಿಂಗ ಬರುತ್ತದೆ. ಆಗ ಅದು ಇದು ಎಂಬವು ಆಖ್ಯೇ...
ಳಾಗುವವು. ಅವುಗಳಿಗೆ ನಪುಂಸಕಲಿಂಗದ ಆಖ್ಯಾತಗಳೇ ಬರುತ್ತವೆ.

ಉದಾ: ಅದು (ಅವನು, ಅವಳು) ಅಲ್ಲಿ ಕೂತಿದೆ; ಅವು (ಅವರು) ಕೆಲಿದಾಡುತ್ತ...

ಇಂಥಲ್ಲಿ ಕ್ವಚಿತ್ತಾಗಿ ಆಖ್ಯೇಯವು ಪುಲ್ಲಿಂಗದ್ದಾಗಲಿ ಸ್ತ್ರೀಲಿಂಗದ್ದಾ...
ಇದ್ದರೂ ಅದರ ಆಖ್ಯಾತವು ನಪುಂಸಕಲಿಂಗದ್ದೇ ಇರುತ್ತದೆ.

ಉದಾ: ನಿನ್ನ ಗಂಡ ಏನು ಮಾಡುತ್ತದೆ? ಏನು ಮಾಡೀತು, ಮೂಲೆ...
ಕೂತಿದೆ; ಮುದುಕಿ ಎಲ್ಲಿ ಅದೆ? ಅದು ನೋಡು, ಅಲ್ಲಿ ನಿಂತದೆ ಮು.

(ಉ) ರೂಢಿಯ ಮಾತಿನಲ್ಲಿ ನಪುಂಸಕಲಿಂಗದ ಆಖ್ಯೇಯ ಪದ...
ವಿಭಕ್ತಿಪ್ರತ್ಯಯಗಳು ಲೋಪವಾಗುವುದೇ ಬಹಳ. ಆದುದರಿಂದ ಅಂ...
ಪದಗಳ ಮುಂದೆ ಅವು ಏಕವಚನಾರ್ಥದಲ್ಲಿದ್ದರೆ ಏಕವಚನದ ಆಖ್ಯಾತಗಳ...
ಬಹುವಚನಾರ್ಥದಲ್ಲಿದ್ದರೆ ಬಹುವಚನದ ಆಖ್ಯಾತಗಳೂ ಬರುತ್ತವೆ.

ಉದಾಹರಣಗಳು:

ದನವು ಬಂತು = ದನ ಬಂತು.
ಕಲ್ಲುಗಳು ಒಡೆದವು = ಕಲ್ಲು ಒಡೆದವು ಮು.

ಅಪವಾದವು— ಬಹುವಚನಾರ್ಥದ ಕಾಲವಾಚಕಾಖ್ಯೇಯಕ್ಕೆ ವಿ...
ದಿಂದ ಏಕವಚನದ ಆಖ್ಯಾತವು ಬರುವುದುಂಟು.

ಉದಾ: ನಾಲ್ಕು ತಿಂಗಳು ಆಯಿತು, ನಾಲ್ಕು ತಿಂಗಳು ಆದವು.

(ಊ) ನೀರು ಮುಂತಾದ ಕೆಲವು ಶಬ್ದಗಳ ಮುಂದೆ ಏಕವಚ...
ಇಲ್ಲವೆ ಬಹುವಚನದ ಆಖ್ಯಾತವು ಬರುವುದು.

ಉದಾ: ನೀರು ಹರಿಯುತ್ತದೆ, ನೀರು ಹರಿಯುತ್ತವೆ; ಮಜ್ಜಿಗೆ ಚೆಲ್ಲಿತು, ಮಜ್ಜಿ...
ಚೆಲ್ಲಿದುವು ಮು.

(ಋ) ಸನ್ಮಾನಾರ್ಥದಲ್ಲಿ ತಾವು ಎಂಬದಕ್ಕೆ 'ನೀವು' ಎಂಬರ್ಥ ...
ತ್ತದೆ. ಆಗ ಅದಕ್ಕೆ ಮಧ್ಯಮಪುರುಷ ಬಹುವಚನದ ಆಖ್ಯಾತವು ಬರುತ್ತ...

ಉದಾ: ತಾವು ಹೋಗಿರಿ, ತಾವು ತಕ್ಕೊಳ್ಳಿರಿ.

೨೧೬. (ಅ) ಒಂದೇ ವಾಕ್ಯದಲ್ಲಿ ಹಲವು ಆಖ್ಯೇಯಗಳಿದ್ದರೆ, ಆಖ್ಯಾತವು ಬಹುವಚನಾಂತವಾಗುತ್ತದೆ.

ಉದಾ: ಅರಸನೂ ಅರಸಿಯೂ ಬಂದರು, ವಿದ್ಯೆಯೂ ಜ್ಞಾನವೂ ವಿನಯವೂ ಬಹುಮಾನಕ್ಕೆ ಕಾರಣವಾಗಿವೆ, ಹುಲಿಯೂ ನಾಯಿಗಳೂ ಓಡಿದವು.

(ಆ) ಆದರೆ ಪ್ರತಿಯೊಂದು ಆಖ್ಯಾತಕ್ಕೆ ಹಲವು ಕಾರಕಗಳ ಇಲ್ಲವೆ ವಿಶೇಷಣಗಳ ಸಂಬಂಧವಾಗಿದ್ದರೆ, ವಿಧೇಯಪದವು ವಿಕಲ್ಪದಿಂದ ಏಕವಚನಾಂತವಾಗುವುದು.

ಉದಾ: ವಿದ್ಯೆಯಿಂದ ಜ್ಞಾನವೂ ಜ್ಞಾನದಿಂದ ಯೋಗ್ಯತೆಯೂ ಯೋಗ್ಯತೆಯಿಂದ ಧನವೂ ದೊರೆಯುತ್ತದೆ ಅಥವಾ ದೊರೆಯುತ್ತವೆ.

(ಇ) ಭಿನ್ನಪುರುಷಗಳ ಹಲವು ಆಖ್ಯೇಯಪದಗಳು ಒಂದೇ ವಾಕ್ಯದಲ್ಲಿದ್ದರೆ, ಉತ್ತಮಪುರುಷದ ಆಖ್ಯೇಯವಿದ್ದಲ್ಲಿ ಅದರ ಪ್ರತ್ಯಯಗಳೂ, ಉತ್ತಮಪುರುಷವಿಲ್ಲದೆ ಮಧ್ಯಮಪುರುಷವಿದ್ದರೆ ಅದರ ಪ್ರತ್ಯಯಗಳೂ ಆಖ್ಯಾತಕ್ಕೆ ಬರುತ್ತವೆ.

ಉದಾ: ಅವನೂ ನೀನೂ ನಾನೂ ಹೋದೆವು, ಅವನೂ ನೀನೂ ಹೋದಿರಿ, ನಾನೂ ನೀನೂ ಹೋದೆವು.

(ಈ) ಭಿನ್ನಲಿಂಗದ ಹಲವು ಆಖ್ಯೇಯಗಳು ಒಂದೇ ವಾಕ್ಯದಲ್ಲಿದ್ದರೆ, ಆಖ್ಯಾತಕ್ಕೆ ಕಡೆಯ ಆಖ್ಯೇಯದ ಲಿಂಗ ಬರುವುದು.

ಉದಾ: ರಾಜನೂ ರಾಣಿಯೂ ಸೇನೆಯೂ ಬಂದವು, ಸೇನೆಯೂ ರಾಜನೂ ರಾಣಿಯೂ ಬಂದರು.

## ಕ್ರಿಯಾಪದಗಳ ಪ್ರಯೋಗ.

## ವರ್ತಮಾನಕ್ರಿಯಾಪದಗಳು.

೨೧೭. (ಅ) ಮಾತಾಡುವ ಸಮಯದಲ್ಲಿ ಕ್ರಿಯೆ ನಡೆದಿದೆ, ಇನ್ನೂ ಮುಗಿದಿಲ್ಲ ಎಂಬರ್ಥವನ್ನು ಹೇಳುವುದಿದ್ದರೆ, ವರ್ತಮಾನ ಕ್ರಿಯಾಪದಗಳ ಪ್ರಯೋಗವಾಗುತ್ತದೆ.

ಉದಾ: ರಾಮನು ಪುಸ್ತಕವನ್ನು ಬರೆಯುತ್ತಾನೆ.–ಇಲ್ಲಿ ಬರೆಯುವ ಕೆಲಸ ನಡೆದದೆ, ಇನ್ನೂ ಮುಗಿದಿಲ್ಲ ಎಂಬರ್ಥ.

(ಆ) ಮುಂದಿನ ಕಾಲದಲ್ಲಿ ಒಂದು ಕ್ರಿಯೆ ನಿಶ್ಚಯವಾಗಿ ನಡೆಯುವುದು ಎಂಬರ್ಥವನ್ನು ಹೇಳುವುದಿದ್ದರೆ, ಕಾಲವು ಅತಿ ಸಮೀಪವಾಗಿದೆ ಎಂಬುದನ್ನು ಸೂಚಿಸುವಾಗ ವರ್ತಮಾನ ಕ್ರಿಯಾಪದಗಳ ಪ್ರಯೋಗವಾಗುತ್ತದೆ.

ಉದಾ: ಅವರು ನಾಳೆ ಬರುತ್ತಾರೆ. ನಾನು ಇನ್ನು ಸಾಲೆಗೆ ಹೋಗುತ್ತೇನೆ.

(ಇ) ಹಿಂದೆ ನಡೆದ ಕ್ರಿಯೆಯ ಪ್ರತ್ಯಕ್ಷ ಸ್ವರೂಪವನ್ನು ವರ್ಣಿಸುವುದಿದ್ದರೆ, ಭೂತಕ್ರಿಯಾಪದಗಳ ಸ್ಥಳದಲ್ಲಿ ವರ್ತಮಾನಕ್ರಿಯಾಪದಗಳ ಪ್ರಯೋಗವಾಗುತ್ತದೆ.

ಉದಾ: ಕೆಲಸಮಾಡಿ ದಣಿದು ಮನೆಗೆ ಹೋಗಿ ನೋಡುತ್ತೇನೆ, ಅಲ್ಲೇನಿದೆ! ಮಣ್ಣು.

(ಈ) ಪ್ರಕೃತಿ ಗುಣ ಆಚರಣ ಪ್ರಮಾಣಗಳನ್ನು ಹೇಳುವುದಿದ್ದರೆ, ಕಾಲಭೇದವಿಲ್ಲದೆ ವರ್ತಮಾನಕ್ರಿಯಾಪದಗಳ ಪ್ರಯೋಗವಾಗುತ್ತದೆ.

ಉದಾಹರಣಗಳು: (ಪ್ರ. ಗು.)— ಬೆಂಕಿ ಸುಡುತ್ತದೆ; ಗಾಳಿ ಬೀಸುತ್ತದೆ. (ಆಚರಣೆ)—ಬ್ರಾಹ್ಮಣರು ದಿನಾಲೂ ಸ್ನಾನ ಮಾಡುತ್ತಾರೆ; ಲಿಂಗವಂತರು ಭಸ್ಮವನ್ನು ಧರಿಸುತ್ತಾರೆ. (ಪ್ರಮಾಣ)—ಸ್ವತಂತ್ರತೆಯಿಂದ ಸುಖವಾಗುತ್ತದೆ.

## ಭೂತಕ್ರಿಯಾಪದಗಳು.

೨೧೮. (ಅ) ಹೋದಕಾಲದಲ್ಲಿ ನಡೆದ ಕ್ರಿಯೆಯನ್ನು ಹೇಳುವುದಿದ್ದರೆ, ಭೂತಕ್ರಿಯಾಪದಗಳ ಪ್ರಯೋಗವಾಗುತ್ತದೆ.

ಉದಾ: ರಾಮನು ಅಯೋಧ್ಯೆಯಲ್ಲಿ ರಾಜ್ಯವನ್ನು ಆಳಿದನು.

(ಆ) ಅತಿನಿಶ್ಚಯವನ್ನು ಇಲ್ಲವೆ ಅತಿತ್ವರೆಯನ್ನು ಹೇಳುವುದಾದರೆ, ಭೂತಕ್ರಿಯಾಪದಗಳ ಪ್ರಯೋಗವಾಗುತ್ತದೆ.

ಉದಾಹರಣಗಳು: ನಿಶ್ಚಯಕ್ಕೆ—ಅಯ್ಯೋ ನಾನು ಸತ್ತೆನು; ಕೊಟ್ಟೆನು ಕೊಟ್ಟೆನೆಂದು ತಿಳಿ. ತ್ವರೆಗೆ—ಇಗೋ, ನಾನು ಬಂದೆನು, ನೀವು ಮುಂದೆ ನಡೆಯಿರಿ.

(ಇ) ಅನುಭವದ ಮಾತುಗಳನ್ನು ಹೇಳುವುದಕ್ಕೆ ಭೂತಕ್ರಿಯಾಪದಗಳ ಪ್ರಯೋಗವಾಗುತ್ತದೆ.

ಉದಾ: ಮಾತು ಬಲ್ಲವ ಮಾಣಿಕ ತಂದ, ಮಾತರಿಯದವ ಜಗಳತಂದ; ಅಟ್ಟ ಮೇಲೆ ಒಲೆಯುರಿಯಿತು, ಕೊಟ್ಟ ಮೇಲೆ ಆಳಿಯ ಉರಿದನು.

(ಈ) "ಹೀಗೆ ನಡೆಯಬೇಕು" ಎಂಬರ್ಥದ ವಿಧಿರೂಪದ ಸ್ಥಳದಲ್ಲಿ ಭೂತಕ್ರಿಯಾಪದದ ಪ್ರಯೋಗವಾಗುತ್ತದೆ.

ಉದಾ: ನಾಲ್ಕಾಣೆ ಕೊಟ್ಟೆ, ಮಠದಲ್ಲಿ ಉಂಡ, ಕೆಲಸ ತೀರಿಸಿಕೊಂಡು ಮನೆಗೆ ಬಂದ, ಅಂದರಾಯಿತು.-ಇಲ್ಲಿ ನಾಲ್ಕಾಣೆ ಕೊಡಲಿ, ಮಠದಲ್ಲಿ ಉಣ್ಣಲಿ, ಕೆಲಸ ತೀರಿಸಿಕೊಂಡು ಮನೆಗೆ ಬರಲಿ, ಎಂಬರ್ಥ.

ಇಂತಹ ಭೂತಕ್ರಿಯಾಪದಗಳ ಮುಂದೆ 'ಏನೋ' ಎಂಬ ಭಾವಬೋಧ ಣ್ಣಯವು ವಿಕಲ್ಪವಾಗಿ ಬರುತ್ತದೆ.

ಉದಾ: ನಾಲ್ಕಾಣೆ ಕೊಟ್ಟೆ ನೇನೋ, ಮಠದಲ್ಲಿ ಉಂಡನೇನೋ, ಇತ್ಯಾದಿ.

## ಭವಿಷ್ಯತ್ಕ್ರಿಯಾಪದಗಳು.

೨೧೯. (ಅ) ಮುಂದೆ ಬರುವ ಕಾಲದಲ್ಲಿ ನಡೆಯುವ ಕ್ರಿಯೆಯನ್ನು ಹೇಳುವುದಾದರೆ, ಭವಿಷ್ಯತ್ಕಾಲದ ಕ್ರಿಯಾಪದಗಳ ಪ್ರಯೋಗವಾಗುತ್ತದೆ*.

ಉದಾ: ರಾಯರು ನಾಳೆ ಬರುವರು; ಈಕೆ ಇನ್ನು ತಿಂಗಳಿಗೆ ಹಡೆಯುವಳು.

(ಆ) ಪ್ರಕೃತಿಗುಣ ಮುಂತಾದವುಗಳನ್ನು ಹೇಳುವುದಾದರೆ, ಕಾಲಭೇದ ಇಲ್ಲದೆ ಭವಿಷ್ಯತ್ಕ್ರಿಯಾಪದಗಳ ಪ್ರಯೋಗವಾಗುತ್ತದೆ.

ಉದಾಹರಣಗಳು: ಪ್ರ. ಗು.--ಬೆಂಕಿ ಸುಡುವುದು, ಗಾಳಿ ಬೀಸುವುದು; ರಾಮ ನಾಡಲ್ಲಿ ಆವುಗಳು ಕೊಡಹಾಲು ಕರೆಯುವುವು. ಆಚರಣೆಗೆ-ಬ್ರಾಹ್ಮಣರು ದಿನಾಲು ಸ್ನಾನ ಮಾಡುವರು; ಲಿಂಗಾಯತರು ಭಸ್ಮವನ್ನು ಧರಿಸುವರು; ಹಿಂದಕ್ಕೆ ತಾಪಸರು ಅರಣ್ಯದಲ್ಲಿ ವಾಸಿಸುವರು. ಪ್ರಮಾಣಕ್ಕೆ—ಸ್ವಾತಂತ್ರ್ಯದಿಂದ ಸುಖವಾಗುವುದು.

## ಸಂಶಯಾರ್ಥದ ಕ್ರಿಯಾಪದಗಳು.

೨೨೦. ಸಂಶಯಾರ್ಥದ ಕ್ರಿಯಾಪದಗಳು ಮುಂದಿನ ಕಾಲದಲ್ಲಿ ಒಂದು ಕೆಲಸವು ನಡೆಯಬಹುದು ಎಂಬರ್ಥದಲ್ಲಿ ಹಾಗೂ ಶಕ್ಯಾರ್ಥವನ್ನು ಹೇಳು ವಲ್ಲಿ ಸಂಶಯವನ್ನು ಸೂಚಿಸುವಲ್ಲಿ ಪ್ರಯೋಗವಾಗುವುವು.

ಉದಾ: ಅವರು ನಾಳೆ ಬಂದಾರು-ಎಂದರೆ ಬರಬಹುದು ಎಂಬ ಅರ್ಥ. ಸಂಶಯಕ್ಕೆ†-ಓಡುತ್ತ ಹೋಗುವವನು ಎಡವಿಬಿದ್ದಾನು. ಶಕ್ಯಾರ್ಥಕ್ಕೆ—ಹುಲಿಯು ಆತನನ್ನು ಎದುರಿಸೀತು; ರಾಯರ ಮನೆಯಲ್ಲಿ ಊಟ ಸಿಕ್ಕೀತು ಮು.

---

* ಬಾಯಿ ಮಾತಿನಲ್ಲಿ ಈ ರೂಪಗಳು ಬರುವುದಿಲ್ಲ. ಇವುಗಳ ಸ್ಥಳದಲ್ಲಿ ವರ್ತಮಾನಕ್ರಿಯಾಪದಗಳ ಪ್ರಯೋಗವಾಗುತ್ತದೆ.

ಉದಾ: ರಾಯರು ನಾಳೆ ಬರುವರು = ರಾಯರು ನಾಳೆ ಬರುತ್ತಾರೆ ಮುಂತಾದುವು.

† ಶಕ್ಯಸಂಶಯಾರ್ಥಗಳು ಸ್ವರಭೇದದಿಂದ ತಿಳಿಯುತ್ತವೆ; ಆ ಸ್ವರಗಳನ್ನು ಶಿಷ್ಯ ರಿಗೆ ಗುರುಗಳಿಂದ [illegible]

## ನಿಷೇಧಕ್ರಿಯಾಪದಗಳು.

೨೨೧. ನಿಷೇಧಕ್ರಿಯಾಪದಗಳಿಗೆ ಕಾಲಭೇದವಿಲ್ಲ. ಇವು ಕ್ರಿಯೆ ನಡೆಯುವುದಿಲ್ಲ ಎಂಬರ್ಥವನ್ನು ಹೇಳುವುವು.

### ಉದಾಹರಣಗಳು:

ಭೂತಕ್ಕೆ—ಯುಧಿಷ್ಠಿರನು ತನ್ನ ವೈರಿಗಾದರೂ ಬಿರುಸುನುಡಿಗಳನ್ನು ಆಡನು; ಪರಸ್ತ್ರೀಯರನ್ನು ಪಾಪದೃಷ್ಟಿಯಿಂದ ನೋಡನು, ಕನಸಿನಲ್ಲಿಯೂ ಸುಳ್ಳಾಡನು. ವರ್ತಮಾನಕ್ಕೆ—ಇದೇನು ಒಬ್ಬನೂ ನನ್ನ ಪ್ರಶ್ನೆಗೆ ಉತ್ತರಕೊಡನು? ಅವರು ಈ ... ಬಾರರು. ಭವಿಷ್ಯತ್ತಿಗೆ—ಮೋಹದಿಂದ ಸಾಕಿದ ಸತೀಸುತಬಾಂಧವರು ನಾಳೆ ನ... ಸಂಗಡ ಬಾರರು.

## ವಿಧಿಕ್ರಿಯಾಪದಗಳು.

೨೨೨. ಅಪ್ಪಣೆ, ಬೇಡಿಕೊಳ್ಳುವಿಕೆ (ಬಿನ್ನಹ), ಹರಸುವಿಕೆ (ಹರಕೆ), ಕಟ್ಟಳೆ, ಕರೆಯೋಣ ಮುಂತಾದರ್ಥಗಳನ್ನು ಹೇಳುವುದಾದರೆ ವರ್ತಮಾನ ಭವಿಷ್ಯತ್ಕಾಲಗಳಲ್ಲಿ ವಿಧಿಕ್ರಿಯಾಪದಗಳ ಪ್ರಯೋಗವಾಗುತ್ತದೆ.

(ಅ) ಉತ್ತಮಪುರುಷದ ವಿಧಿರೂಪಗಳು ಮನಸ್ಸಿನ ವಿಚಾರವನ್ನು ... ಹೇಳುವುವು.

ಉದಾ: ಇನ್ನು ಮನೆಗೆ ಹೋಗುವ; ಹುಡುಗರಿರಾ, ನಾವೆಲ್ಲರೂ ಆಡೋಣ.

ಪ್ರಶ್ನಾರ್ಥಕವಾಕ್ಯದಲ್ಲಿ ಪ್ರಥಮಪುರುಷದ ವಿಧಿರೂಪವು ಉತ್ತಮ ಪು... ಷದೇಕವಚನಕ್ಕೆ ಬರುತ್ತದೆ.

ಉದಾ: ಅದಕ್ಕೆ ನಾನು ಏನು ಮಾಡಲಿ? ಇವನ್ನು ನಾನು ಮಾಡಲಿ? ಮು.

(ಆ) ಮಧ್ಯಮಪುರುಷದ ವಿಧಿರೂಪಗಳು ಅಪ್ಪಣೆ, ಹರಕೆ, ಕಟ್ಟಳೆ, ಬಿನ್ನಹ, ಒಪ್ಪಿಗೆ ಮುಂತಾದ ಅರ್ಥಗಳಲ್ಲಿ ಪ್ರಯೋಗಿಸಲ್ಪಡುವುವು.

ಉದಾ: ಅಪ್ಪಣೆಗೆ—ಎಲಾ, ಏಳು ಇಲ್ಲಿಂದ; ತಮ್ಮಾ, ಇಲ್ಲಿ ಬಾ; ತಂ... ಊಟಕ್ಕೆ ನಡೆ. ಹರಕೆಗೆ—ಕಂದಾ, ಆಯುಷ್ಮಂತನಾಗು; ಮಗಳೇ, ಸುಖದಿಂದ ಇ... ಕಟ್ಟಳೆಗೆ—ಮಕ್ಕಳಿರಾ, ನಿತ್ಯದಲ್ಲಿ ದೇವರನ್ನು ಹೊಗಳಿರಿ. ಬಿನ್ನಹಕ್ಕೆ—ತಾಯಿಗಳಿರಾ, ಒಂದು ತುತ್ತು ನೀಡಿರಿ; ಒಪ್ಪಿಗೆಗೆ—ಅಮ್ಮಾ, ಒಳಗೆ ಬನ್ನಿರಿ.

(ಇ) ಪ್ರಥಮಪುರುಷದ ವಿಧಿರೂಪಗಳು ಹರಕೆ, ಹಾರಯ್ಕೆ, ಒಪ್ಪಿಗೆ ... ಮುಂತಾದರ್ಥಗಳನ್ನು ತೋರಿಸುತ್ತವೆ.

ಉದಾ: ಹರಕೆಗೆ—ದೇವರು ನಿನಗೆ ದಯಮಾಡಲಿ. ಹಾರಯ್ಕೆಗೆ—ಮಗನು ಮುಂದಕ್ಕೆ ಬರಲಿ. ಒಪ್ಪಿಗೆಗೆ—ಹಿರಿಯರ ಪಾದಗಳು ನನಗೆ ಬುದ್ಧಿಯು ಕಲಿಸಲಿ. ಅಪ್ಪಣೆಗೆ—ಒಬ್ಬೊಬ್ಬರೇ ಒಳಗೆ ಹೋಗಲಿ; ಹುಡುಗರು ತಮ್ಮ ತಮ್ಮ ಸ್ಥಳಗಳಲ್ಲಿ ಸುಮ್ಮನೆ ಕೂಡ್ರಲಿ.

## ಕೆಲವು ಸಂಯುಕ್ತ ಕ್ರಿಯಾಪದಗಳು

೨೨೩. ಧಾತುಗಳ ನ್ಯೂನರೂಪ ಭಾವರೂಪಗಳಿಗೆ 'ಇರು, ಕೊಡು, ಕೊಳ್ಳು' ಮುಂತಾದ 'ಸಹಾಯ' ಧಾತುಗಳನ್ನು ಕಚ್ಚುವುದರಿಂದ ಬೇರೆ ಬೇರೆ ಅರ್ಥಗಳು ಹುಟ್ಟುತ್ತವೆ. ಅವುಗಳ ವಿವರವನ್ನು ಮುಂದೆ ಹೇಳಿವೆ.

೨೨೪. (೧) ವರ್ತಮಾನನ್ಯೂನರೂಪಗಳಿಗೆ 'ಇರು' ಧಾತುವಿನ ಕ್ರಿಯಾಪದಗಳನ್ನು ಹಚ್ಚುವುದರಿಂದ ಒಂದು ಕಾರ್ಯವು ಹಗಲೆಲ್ಲ ಅಥವಾ ಹಿಂದಿನಿಂದ ಮೇಲೆ ನಡೆಯುತ್ತಿದೆ ಎಂಬ ಅರ್ಥವಾಗುತ್ತದೆ. ಇದಕ್ಕೆ ರೀತಿ ವರ್ತಮಾನಕಾಲವೆಂಬ ಹೆಸರು.

ಉದಾ: ಹೆಂಗುಸರು ಆಭರಣಗಳನ್ನು ಬೇಡುತ್ತಿರುತ್ತಾರೆ.

(೨) ವಿಧ್ಯರ್ಥದಲ್ಲಿ ಕಾರ್ಯವು ಸದಾ ಜರುಗಲಿ ಎಂಬ ಅರ್ಥವಾಗುತ್ತದೆ. ಇದಕ್ಕೆ 'ಸಾತತ್ಯವಿಧಿ' ಎನ್ನುವರು.

ಉದಾ: ಮಗಳೇ, ಅತ್ತೆಮಾವಂದಿರನ್ನು ಸೇವಿಸುತ್ತಿರು.

(೩) ಕ್ರಿಯೆಯು ಭವಿಷ್ಯತ್ಕಾಲದಲ್ಲಿ ಆಗಿ ಮುಗಿಯಬೇಕು ಎಂಬ ಅರ್ಥದಲ್ಲಿ ಧಾತುಗಳ ಭೂತನ್ಯೂನರೂಪಕ್ಕೆ 'ಇರು' ಧಾತುವಿನ ವಿಧಿರೂಪಗಳನ್ನು ಜೋಡಿಸುವುದುಂಟು.

ಉದಾ: ನಾವು ಬರುವುದರೊಳಗಾಗಿ ಅಡಿಗೆ ಆಗಿರಲಿ.

(೪) ಭೂತನ್ಯೂನಗಳಿಗೆ 'ಇರು' ಧಾತುವಿನ ಆಖ್ಯಾತರೂಪಗಳನ್ನು ಹಚ್ಚುವುದರಿಂದ ಕ್ರಿಯೆಯು ಇನ್ನು ಮುಗಿದಿದ್ದಿಲ್ಲ ಎಂಬ ಅರ್ಥವು ಸೂಚಿತವಾಗುತ್ತದೆ.

ಉದಾ: ನಾನು ಹೋದಾಗ ಅವನು ಉಣ್ಣುತ್ತಿದ್ದನು.

(೫) ಕಾರ್ಯವು ಪೂರ್ಣವಾಗಿರುವುದು ಎಂಬ ಅರ್ಥದಲ್ಲಿ ಭೂತನ್ಯೂನಕ್ಕೆ 'ಇರು' ಧಾತುವಿನ ವರ್ತಮಾನಕಾಲದ ರೂಪಗಳನ್ನು ಜೋಡಿಸುತ್ತಾರೆ.

ಉದಾ: ಅವನು ಗ್ರಂಥಗಳನ್ನು ರಚಿಸಿರುತ್ತಾನೆ.

(೩) ಕ್ರಿಯೆಯು ಭೂತಕಾಲದಲ್ಲಿ ನಡೆದು ಆಗಲೆ ಮುಗಿದಿತ್ತು ಎಂಬ ಅರ್ಥದಲ್ಲಿ ಭೂತನ್ಯೂನಕ್ಕೆ 'ಇರು' ಧಾತುವಿನ ಭೂತಕಾಲದ ಆಖ್ಯಾತಗಳನ್ನು ಜೋಡಿಸುವರು.

ಉದಾ: ರಾಮನಿಗೆ ಸೀತೆಯನ್ನು ಕೊಟ್ಟಿತ್ತು. ನಾನು ಹೇಳುವಷ್ಟರಲ್ಲಿ ಅವನು ಕೆಲಸ ಮಾಡಿದ್ದನು.

೨೨೫. (ಅ) 'ಕೊಳ್ಳು' ಧಾತುವಿನ ರೂಪಗಳು ಭೂತನ್ಯೂನಗಳ ಮುಂದೆ ಬಂದರೆ, ಕರ್ತೃವು ನ್ಯೂನಕ್ರಿಯೆಯನ್ನು ತನ್ನ ಸಲುವಾಗಿ ಮಾಡಿದನೆಂಬರ್ಥ ಉಂಟಾಗುತ್ತದೆ. ಇಂತಹ ಕ್ರಿಯಾಪದಗಳಿಗೆ ಸಂಸ್ಕೃತದಲ್ಲಿ 'ಆತ್ಮನೇಪದಿ'ಗಳೆಂಬ ಹೆಸರು ಅದೆ.

ಉದಾ: ರಾಮನು ಪುಸ್ತಕವನ್ನು ಓದಿಕೊಳ್ಳುತ್ತಾನೆ.

(ಆ) 'ಕೊಡು' ಧಾತುವಿನ ರೂಪಗಳು ನ್ಯೂನರೂಪಗಳ ಮುಂದೆ ಬಂದರೆ, ಕರ್ತೃವು ಅಂತಹ ಕ್ರಿಯೆಯನ್ನು ಅನ್ಯರ ಸಲುವಾಗಿ ಮಾಡಿದನೆಂಬರ್ಥ ಉಂಟಾಗುತ್ತದೆ. ಈ ಬಗೆಯ ಕ್ರಿಯಾಪದಗಳಿಗೆ ಸಂಸ್ಕೃತದಲ್ಲಿ 'ಪರಸ್ಮೈಪದಿ'ಗಳು ಎಂಬ ಹೆಸರು ಅದೆ.

ಉದಾ: ರಾಮನು ಕೃಷ್ಣನಿಗೆ ಲೆಕ್ಕವನ್ನು ತಿಳಿಸಿಕೊಟ್ಟನು.

(ಇ) 'ಬಿಡು, ಹಾಕು, ಇಡು' ಧಾತುಗಳ ರೂಪಗಳು ಸಕರ್ಮಕನ್ಯೂನಗಳಿಗೆ ಹತ್ತುತ್ತವೆ. ಆಗ ನ್ಯೂನಕ್ರಿಯೆಯು ನಿಃಶೇಷವಾಗಿ ಮಾಡಲ್ಪಟ್ಟಿತೆಂಬರ್ಥ ಉಂಟಾಗುತ್ತದೆ.

ಉದಾ: ಅವನು ಹೆಂಡತಿಯನ್ನು ಬಿಟ್ಟು ಬಿಟ್ಟನು; ಜಾಬ್ಬುಡುಕರು ಅನ್ಯರ ವಸ್ತುಗಳನ್ನು ಎತ್ತಿಹಾಕುತ್ತಾರೆ; ಅಜ್ಞಾನಿಗಳು ವಿದ್ಯೆಯನ್ನು ಮುಚ್ಚಿಡುತ್ತಾರೆ.

(ಈ) 'ಹೋಗು' ಧಾತುವಿನ ರೂಪಗಳು ಅಕರ್ಮಕ ನ್ಯೂನಗಳಿಗೆ ಹತ್ತಿ ನ್ಯೂನಕ್ರಿಯೆಯು ನಿಃಶೇಷವಾಗಿ ಮಾಡಲ್ಪಟ್ಟಿತೆಂಬರ್ಥವನ್ನು ಹೇಳುವುವು.

ಉದಾ: ಲೆಕ್ಕವು ತಪ್ಪಿಹೋಯಿತು; ದುಷ್ಟರು ಹಾಳಾಗಿ ಹೋಗುತ್ತಾರೆ.

(ಉ) 'ಹೋಗು, ಬರು' ಧಾತುಗಳ ರೂಪಗಳು ವರ್ತಮಾನನ್ಯೂನಗಳಿಗೆ ಪರವಾದರೆ, ನ್ಯೂನಕ್ರಿಯೆಯು ಬಹುಕಾಲ ಅಥವಾ ಸರ್ವದಾ ನಡೆಯುವುದೆಂಬರ್ಥವನ್ನು ಹೇಳುವುವು.

ಉದಾ: ನಾನು ಅವನಿಗೆ ಹೇಳುತ್ತಾ ಹೋಗುತ್ತೇನೆ; ಅವನು ಅದರಂತೆ ಮಾಡುತ್ತಾ ಬರುತ್ತಾನೆ.

'ಬರು' ಧಾತುವಿನ ವರ್ತಮಾನಕ್ರಿಯಾಪದಗಳೂ ಭವಿಷ್ಯತ್ಕ್ರಿಯಾಪದಗಳೂ 'ಹೋಗು' ಧಾತುವಿನ ಭೂತನ್ಯೂನಕ್ಕೆ ಪರವಾದರೆ, ನ್ಯೂನಕ್ರಿಯೆಯು ಅರ್ಥದಲ್ಲಿ ಏನೂ ಹೆಚ್ಚು ಕಡಿಮೆಯಾಗುವುದಿಲ್ಲ.

ಉದಾ: ಅಮ್ಮಾ, ನಾನು ಹೋಗಿಬರುತ್ತೇನೆ.

(ಊ) 'ಆಡು' ಧಾತುವಿನ ಆಖ್ಯಾತರೂಪಗಳು ಸಕರ್ಮಕನ್ಯೂನಗಳಿಗೆ ಪರವಾದರೆ ನ್ಯೂನಕ್ರಿಯೆಯ ಕರ್ತೃಕರ್ಮಗಳೊಳಗೆ ಅನ್ಯೋನ್ಯಕರ್ತೃಕರ್ಮಭಾವವು ತೋರುತ್ತದೆ.

ಉದಾ: ಅತ್ತೆಸೊಸೆಯರು ಬಯ್ದಾಡುತ್ತಾರೆ.

ಕ್ರಿಯೆಯು ಬಾರಿಬಾರಿಗೂ ಅಥವಾ ಬಹಳ ಸಾರಿ ನಡೆಯುವುದೆಂಬ ಅರ್ಥದಲ್ಲಿಯೂ ಅತ್ತಲೂ ಇತ್ತಲೂ ನಡೆಯುವುದೆಂಬ ಅರ್ಥದಲ್ಲಿಯೂ 'ಆಡು' ಧಾತುವಿನ ಆಖ್ಯಾತರೂಪಗಳು ಅಕರ್ಮಕಭೂತನ್ಯೂನಗಳಿಗೆ ಪರವಾಗುತ್ತವೆ.

ಉದಾ: ಹುಡುಗರು ಕುಣಿದಾಡುತ್ತಾರೆ, ಒದರಾಡುತ್ತಾರೆ, ಚೀರಾಡುತ್ತಾರೆ.

೨೯೬. 'ಇಲ್ಲ, ಆಪೆನು, ಆರೆನು, ಬೇಕು, ಬೇಡ, ಬಹುದು, ಬಾರದು' ಮುಂತಾದ ಕೆಲವು ಕ್ರಿಯಾಪದಗಳು ಧಾತುಗಳ ಭಾವರೂಪಗಳಿಗೆ ಪರವಾಗಿ ಪೂರ್ವಕ್ರಿಯೆಗಳಿಗೆ ಬೇರೆ ಬೇರೆ ಅರ್ಥಗಳನ್ನು ಕೊಡುತ್ತವೆ.

(ಅ) ಇಲ್ಲ ಅಥವಾ ಇಲ್ಲವು ಎಂಬುದು ಅಲ್-ಅಂತ ಭಾವರೂಪಕ್ಕೆ ಪರವಾಗಿ ಭೂತಕ್ರಿಯೆಗೆ ನಿಷೇಧವನ್ನು ಸೂಚಿಸುವುದು.

ಉದಾ: ರಾಮನು ಊಟಮಾಡಲಿಲ್ಲ; ಕೃಷ್ಣನಿಗೆ ಔತಣ ಹೇಳಲಿಲ್ಲ.

(ಆ) ಮೂರನೆಯ ಭಾವರೂಪಕ್ಕೆ ಪರವಾಗಿ ಸಂಶಯಾರ್ಥವನ್ನು ಹೇಳುವುದು.

ಉದಾ: ರಾಮನು ನನ್ನ ಕರೆಯಲಿಕ್ಕಿಲ್ಲ.

(ಇ) ಭೂತನ್ಯೂನಗಳಿಗೂ ಕ್ರಿಯಾನಾಮಗಳಿಗೂ ಪರವಾಗಿ ಆ ಆ ಕಾಲಗಳ ಕ್ರಿಯೆಗೆ ಅಭಾವವನ್ನು ಹೇಳುತ್ತದೆ.

ಉದಾ: ಇದನ್ನು ನಾನು ಬರೆದಿಲ್ಲ; ಇನ್ನೂ ಅವನು ಉಂಡಿಲ್ಲ; ನಾನು ಊಟ ಮಾಡುವದಿಲ್ಲ; ಅವರು ನಾಳೆ ಬರುವದಿಲ್ಲ; ಅವನು ಬಂದಾಗ ನಾನು ಮಾಡಿದ್ದಿಲ್ಲ.

(ಈ) 'ಆಪೆನು, ಬಲ್ಲೆನು' ಮುಂತಾದವು ಭಾವರೂಪಗಳಿಗೆ ಪರವಾಗಿ ಶಕ್ಯಾರ್ಥವನ್ನು ಹೇಳುವುವು.

ಉದಾ: ಶೂರನು ಕಾಳಗವನ್ನು ಮಾಡಲಾಪನು; ಕವಿಗಳು ವಸ್ತುಗಳನ್ನು ವರ್ಣಿಸಬಲ್ಲರು.

(ಇ) 'ಅರಿನು, ಅರಿಯನು, ಒಲ್ಲೆನು' ಮುಂತಾದುವು ಭಾವರೂಪಗಳಿ
ಪರವಾಗಿ, ಕ್ರಿಯೆ ಮಾಡುವ ಶಕ್ತಿಯಿಲ್ಲ, ಜ್ಞಾನವಿಲ್ಲ, ಮನಸ್ಸಿಲ್ಲ ಎಂಬ ಅರ್ಥ
ಗಳನ್ನು ಹೇಳುವುವು.

ಉದಾ: ಹುಡುಗರು ಅರ್ಥವನ್ನು ಗ್ರಹಿಸಲಾರರು; ಮೂರ್ಖರು ಕೀರ್ತಿಯನ್ನು ಗಳಿಸಲರಿಯರು; ನೀಚರು ಹಾದಿಗೆ ಬರವೊಲ್ಲರು; ಸ್ತ್ರೀಯರು ವಿರಕ್ತಿಯನ್ನು ಹಿಡಿ ಲೊಲ್ಲರು.

(ಈ) 'ಬೇಕು, ಬಹುದು' ಎಂಬಿವು ಭಾವರೂಪಗಳಿಗೆ ಪರವಾದರೆ ವಿಧಿಕ್ರಿಯಾಪದಗಳಿಗೆ ಸರಿಯಾದ ರೂಪಗಳಾಗುವುವು. ಬಹುದು ಎಂಬುದು ಮೊದಲನೆಯ ಭಾವರೂಪಕ್ಕೆ ಪರವಾಗಿ ಶಕ್ಯಾರ್ಥ ಹೇಳುತ್ತದೆ. ಬೇಕು ಎಂಬುದು ಮೂರನೆಯ ಭಾವರೂಪಕ್ಕೆ ಪರವಾಗಿ ನಿಶ್ಚಯಾರ್ಥವನ್ನು ಹೇಳುತ್ತದೆ.

ಉದಾ: ವಿಧಿಗೆ—ತಾವು ರಕ್ಷಿಸಬೇಕು (ರಕ್ಷಿಸಿರಿ); ಅವನು ವ್ಯಾಕರಣವ ಕಲಿಯಬೇಕು (ಕಲಿಯಲಿ); ನೀವು ಒಳಗೆ ಬರಬಹುದು (ಬರ್ರಿ); ನಿಶ್ಚಯಕ್ಕೆ—ನಾನು ಊರಿಗೆ ಹೋಗಲಿಕ್ಕೆ ಬೇಕು. ಶಕ್ಯಕ್ಕೆ—ಅವನು ಕೆಲಸವ ಮಾಡಬಹುದು (ಮಾಡಿಯಾನು).

(ಉ) 'ಬಾರದು, ಕೂಡದು, ಆಗದು, ಬೇಡ' ಎಂಬುವು ಭಾವ ರೂಪಗಳಿಗೆ ಪರವಾದರೆ ಕ್ರಿಯೆಯನ್ನು ಪ್ರತಿಬಂಧಿಸುವ ವಿಧ್ಯರ್ಥದ ರೂಪಗಳುಂಟಾಗುವುವು.

ಉದಾ: ದೊಡ್ಡವರು ಸಣ್ಣ ಮಾತುಗಳನ್ನು ಕೇಳಬಾರದು (ಕೇಳದಿರಲಿ); ತಾವು ಇಂಥ ಮಾತುಗಳನ್ನು ಆಡಬಾರದು (ಆಡದಿರ್ರಿ); ಅಲ್ಲಿಗೆ ನಾನು ಬರಬಾರದು; ಕೆಟ್ಟ ಮಾತುಗಳನ್ನು ಆಡಬೇಡ*; ಸುಳ್ಳು ಹೇಳಬೇಡಿ; ಮೂರ್ಖರ ಮನಸ್ಸನ್ನು ಹಿಡಿಯಕೂಡದು; ಅವನ ಸಂತೋಷವನ್ನು ಹೇಳಲಾಗದು ಮು.

(ಊ) 'ಕೊಡು' ಧಾತುವಿನ ರೂಪಗಳು ಭಾವರೂಪಗಳಿಗೆ ಪರವಾಗಿ ಅಪ್ಪಣೆಕೊಡು ಎಂಬರ್ಥವನ್ನುಂಟುಮಾಡುತ್ತವೆ.

ಉದಾ: ಅವನನ್ನು ಹೋಗಗೊಡು.

೨೨೭. (ಅ) 'ಬೇಕು, ಬೇಡ, ಸಾಕು, ಉಂಟು' ಎಂಬ ಅವ್ಯಯ ಕ್ರಿಯಾಪದಗಳಿಗೆ ಆಗು ಧಾತುವಿನ ಆಖ್ಯಾತರೂಪಗಳು ಹತ್ತಿ ಕಾಲಬೋಧವನ್ನು ಮಾಡುತ್ತವೆ. ಉಂಟು ಕ್ರಿಯಾಪದಕ್ಕೆ ಆಗು ಧಾತುವಿನ ಕ್ರಿಯಾಪದಗಳು ಹತ್ತಿದರೆ, 'ಹುಟ್ಟು' ಎಂಬರ್ಥವಾಗುತ್ತದೆ.

ಉದಾ: ರಾಮನು ಎಲ್ಲರಿಗೂ ಬೇಕಾದನು; ಮೂರ್ಖನು ಊರಿಗೆ ಬೇಡಾಗುತ್ತಾನೆ; ಈವೊತ್ತಿಗೆ ಇಷ್ಟು ನೀರು ಸಾಕಾಗುವುದು; ವಿನಾಶಕಾಲಕ್ಕೆ ದುರ್ಬುದ್ಧಿ ಉಂಟಾಗುತ್ತದೆ (ಹುಟ್ಟುತ್ತದೆ) ಮು.

---

* ಶ. ಶಾ. ೫೨೪.

(ಅ) 'ಸಾಕು, ಉಂಟು' ಇವುಗಳಿಗೆ 'ಮಾಡು' ಧಾತುವಿನ ರೂಪಗಳು ಹತ್ತುತ್ತವೆ. 'ಸಾಕು' ಇದಕ್ಕೆ ಹತ್ತಿದಾಗ ಕ್ರಿಯೆಯನ್ನು ನಿಲ್ಲಿಸೆಂಬರ್ಥವೂ 'ಉಂಟು' ಎಂಬದಕ್ಕೆ ಹತ್ತಿದಾಗ ಹುಟ್ಟಿಸು ಎಂಬರ್ಥವೂ ತೋರುತ್ತದೆ.

ಉದಾ: ಇನ್ನು ನಿನ್ನ ಹರಟೆಯನ್ನು ಸಾಕುಮಾಡು (ನಿಲ್ಲಿಸು); ದೇವರು ಲೋಕವನ್ನು ಉಂಟು ಮಾಡಿದನು (ಹುಟ್ಟಿಸಿದನು) ಮು.

(ಇ) 'ಅಲ್ಲ, ಇಲ್ಲ' ಇವುಗಳಿಗೆ 'ಕಳೆ' ಧಾತುವಿನ ರೂಪಗಳು ಹತ್ತುವುವು. ಅಲ್ಲ ಇದಕ್ಕೆ ಹತ್ತಿದಾಗ ತಿರಸ್ಕಾರಾರ್ಥವೂ ಇಲ್ಲ ಇದಕ್ಕೆ ಹತ್ತಿದಾಗ ಅಸ್ತಿತ್ವ ನಿಷೇಧವೂ ತೋರುತ್ತದೆ.

ಉದಾ: ದುಷ್ಟರು ಸಜ್ಜನರ ಮಾತನ್ನು ಅಲ್ಲಗಳೆಯುತ್ತಾರೆ; ಮನೆಮುರುಕರು ಇಸುಕೊಂಡುದನ್ನು ಇಲ್ಲಗಳೆಯುತ್ತಾರೆ.

೨೨೮, 'ಉಂಟು ಇಲ್ಲ, ಹೌದು, ಅಲ್ಲ, ಬೇಕು, ಬೇಡ, ಬಹುದು, ಸಾಕು' ಮುಂತಾದ ಸಹಾಯಕ್ರಿಯಾಪದಗಳಿಗೆ ಸ್ವತಂತ್ರಪ್ರಯೋಗಗಳೂ ಉಂಟು. ಅವುಗಳ ವಿವರವು—

(ಅ) ಯಾವುದೊಂದರ ಅಸ್ತಿತ್ವವನ್ನು ತಿಳಿಸಬೇಕಾದರೆ 'ಉಂಟು' ಎಂಬುದರ ಪ್ರಯೋಗವಾಗುತ್ತದೆ. ಯಾವುದೊಂದರ ಅಭಾವವನ್ನು 'ಇಲ್ಲ' ಎಂಬುದು ಹೇಳುತ್ತದೆ. ಇವಕ್ಕೆ ಕಾಲ ಪುರುಷ ಲಿಂಗ ವಚನಗಳ ವಿಕಾರವಿಲ್ಲ.

ಉದಾ: ಈಗ ನನಗೆ ಕೆಲಸವುಂಟು; ನಾಳೆ ಪರೀಕ್ಷೆಯುಂಟು; ಅವನು ನಿನಗೆ ನಿನ್ನೆ ಹೇಳಿದ್ದುಂಟೇ? ಅವರು ಈಗ ಮನೆಯಲ್ಲಿಲ್ಲ; ನಾಳೆ ನಮ್ಮ ಮನೆಯಲ್ಲಿ ಊಟವಿಲ್ಲ; ಕಣ್ಗೊಳಿಪ ರಾಮರಾಜ್ಯದೊಳಕಾಲದ ಮರಣವಿಲ್ಲ.

(ಆ) ಯಾವುದೊಂದರ ನಿಜತ್ವವನ್ನು ಅಥವಾ ಸತ್ಯಸ್ವರೂಪವನ್ನು ಹೇಳಬೇಕಾದರೆ 'ಹೌದು' ಎಂಬುದೂ ಅದರ ವಿಪರೀತವಾಗಿ ಅನ್ಯತ್ವವನ್ನು ಹೇಳಬೇಕಾದರೆ 'ಅಲ್ಲ' ಎಂಬುದೂ ಪುರುಷ ಲಿಂಗ ವಚನಗಳ ವಿಕಾರವಿಲ್ಲದೆ ಪ್ರಯೋಗಿಸಲ್ಪಡುತ್ತವೆ.

ಉದಾ: ಇವನು ಅರಸು ಹೌದು; ಇವಳು ಪತಿವ್ರತೆ ಹೌದು. ಇದು ಮಂಜಲ್ಲ ಬೆಳ್ದಿಂಗಳು; ಇವನು ಮನುಷ್ಯನಲ್ಲ ರಕ್ಕಸನು; ಇವಳು ಹೆಂಡತಿಯಲ್ಲ ಮಾರಿಯು; ಇವರು ಆಪ್ತರಲ್ಲ ವೈರಿಗಳು.

ಇದಲ್ಲದೆ ಸ್ತುತಿಗೆ ಹೌದೆಂಬದನ್ನೂ, ನಿಂದೆಗೆ ಅಲ್ಲೆಂಬುದನ್ನೂ ಪ್ರಯೋಗಿಸುವರು. ಉದಾ:

ಸ್ತುತಿ— [illegible] ಹೌದು; ಪ್ರಿಯಳೇ ಹೌದು ನೀನೇ ಹೆಂಡತಿಯು.

ನಿಂದೆಗೆ—ನೀನು ಹೀಗೆ ಮಾಡಿದ್ದು ಅಲ್ಲ; ದೀನರ ಮೇಲೆ ದಯಮಾಡದವನು ಜ್ಞಾನಿಯಲ್ಲ; ನಿನ್ನ ಮಾತು ಅಲ್ಲ.

(ಇ) ಯಾವುದೊಂದರ ಅವಶ್ಯಕತೆಯನ್ನು ಇಲ್ಲವೆ ಶ್ರೇಷ್ಠತೆಯನ್ನು ಹೇಳುವುದಕ್ಕೆ 'ಬೇಕೆಂ'ಬುದನ್ನೂ (ಅದಕ್ಕೆ ವಿಪರೀತವಾಗಿ) ಅನವಶ್ಯಕತ್ವವ ಇಲ್ಲವೆ ನೀಚತ್ವವ ಹೇಳುವುದಕ್ಕೆ 'ಬೇಡ, ಸಾಕು' ಮುಂತಾದವುಗಳನ್ನೂ ಪ್ರಯೋಗಿಸುವರು. ಒಲ್ಲೆ, ಸಾಕು ಎಂಬುವ ನಿಂದೆಯಲ್ಲಿಯೂ ತೃಪ್ತಿಯಲ್ಲಿಯೂ ಬರುತ್ತವೆ. ಮತ್ತೂ ಬೇಕು ಬೇಡ ಎಂಬುವು ಸ್ವಭಾವವನ್ನೂ ಹೇಳುತ್ತವೆ.

ಉದಾ: ನನಗೆ ಹತ್ತು ರೂಪಾಯಿಗಳು ಬೇಕು; ಇದು ಬೇಕು, ಅದು ಬೇಡ; ಇವನು ನನಗೆ ಬೇಡ; ಇಂಥ ನಡತೆ ನನಗೆ ಬೇಡ; ಅಂಥ ಪೌರುಷ ನನಗೆ ಬೇಡ; ನನಗೆ ಅನ್ನ ಸಾಕು; ನನಗೆ ಇಷ್ಟು ಮನೆ ಸಾಕು; ದೇವರು ಕೊಟ್ಟಷ್ಟೇ ನನಗೆ ಸಾಕು.

## ಪ್ರಯೋಗಗಳು.

೨೨೯. ಕರ್ತೃಪದಕ್ಕೆ ಅಥವಾ ಕರ್ಮಪದಕ್ಕೆ ಕ್ರಿಯಾಪದವನ್ನು ಸಂಬಂಧಿಸುವ ಬೇರೆ ಬೇರೆ ಪ್ರಕಾರಗಳಿಗೆ ಪ್ರಯೋಗಗಳೆಂಬ ಹೆಸರು. ಅವು ಕರ್ತರಿ, ಕರ್ಮಣಿ ಎಂದು ಎರಡು ವಿಧವಾಗಿವೆ.

### ಕರ್ತರಿಪ್ರಯೋಗ.

ವಾಕ್ಯದಲ್ಲಿ ಕರ್ತೃಪದದ† ಪುರುಷ ಲಿಂಗ ವಚನಗಳೆ ಆಖ್ಯಾತಕ್ಕೂ ಇದ್ದರೆ ಎಂದರೆ ಕರ್ತೃವು ಆಖ್ಯೇಯವಾಗಿದ್ದರೆ ಕರ್ತರಿಪ್ರಯೋಗವಾಗುತ್ತದೆ. ಇದು ಸಕರ್ಮಕ, ಅಕರ್ಮಕ ಎಂದು ಎರಡು* ವಿಧವಾಗಿದೆ.

---

† ಕರ್ತೃ ಕರ್ಮಗಳೆಂದರೇನೆಂಬುದನ್ನು ಕುರಿತು ಕಾರಕ ಪ್ರಕರಣದಲ್ಲಿ ನೋಡಿರಿ.

* ಕಾರ್ಯಸೌಕರ್ಯವ ತಿಳಿಸಬೇಕಾದರೆ ಕರ್ಮಾದಿಕಾರಕಗಳು ಕರ್ತೃವಾಗುತ್ತವೆ. ಆಗ ಯಾವ ಕಾರಕವು ಕರ್ತೃಸ್ಥಾನಕ್ಕೆ ಬರುವುದೋ ಅದರ ಹೆಸರಿನ ಕರ್ತರಿಪ್ರಯೋಗವಾಗುತ್ತದೆ ಅಂದರೆ 'ಕರ್ಮಕರ್ತರಿ' 'ಕರಣಕರ್ತರಿ' 'ಹೇತುಕರ್ತರಿ' ಮುಂತಾದವು. ಕಾರ್ಯಸೌಕರ್ಯವೆಂದರೆ ಅಲ್ಪಪ್ರಯತ್ನದಿಂದ ಕೆಲಸವು ಆಗಿ ಹೋಗುವುದು. ಕಾರ್ಯಸೌಕರ್ಯದಿಂದ ಕರ್ತೃವಿಗೆ ತಾನು ಪ್ರಯತ್ನ ಮಾಡಿದ್ದು ಧ್ಯಾನಕ್ಕೆ ಬರುವುದಿಲ್ಲ. ಉದಾ:

ಕರ್ಮಕರ್ತರಿ ಪ್ರಯೋಗಗಳು—ಗುಡಿಯು ಕಾಣುತ್ತದೆ; ಅವನ ಕಯ್ ಕಾಲುಗಳು ಕುಣಿಯುತ್ತಿರುತ್ತವೆ; ಊರು ಬಂತು.

ಕರಣಕರ್ತರಿಪ್ರಯೋಗಗಳು—ಕೊಡಲಿ ಕಡಿಯುತ್ತದೆ; ನನ್ನ ಕಯ್ಯು ಚಿಲಕವನ್ನು ಹಾಕಿತು.

ಹೇತುಕರ್ತರಿ ಪ್ರಯೋಗವು—ಈ ಪುಸ್ತಕವು ನನ್ನನ್ನು ಆಕರ್ಷಿಸುತ್ತದೆ.

ಆಖ್ಯಾತವು ಕರ್ಮವುಳ್ಳದಿದ್ದರೆ ಸಕರ್ಮಕಕರ್ತರಿಪ್ರಯೋಗವಾಗುತ್ತದೆ. ಕರ್ಮವಿಲ್ಲದಿದ್ದರೆ ಅಕರ್ಮಕಕರ್ತರಿಪ್ರಯೋಗವಾಗುತ್ತದೆ.

ಈ ಪ್ರಯೋಗದಲ್ಲಿ ಕರ್ತೃಪದಕ್ಕೆ ಪ್ರಥಮಾವಿಭಕ್ತಿಯೂ ಕರ್ಮಪದಕ್ಕೆ ದ್ವಿತೀಯಾವಿಭಕ್ತಿಯೂ ಬರುತ್ತದೆ.

ಕನ್ನಡದಲ್ಲಿ ಸಾಮಾನ್ಯವಾಗಿ ಕರ್ತೃಪ್ರಯೋಗವೆ ಬಳಕೆಯಾಗುತ್ತದೆ.

ಉದಾ:

ಸಕರ್ಮಕಕರ್ತರಿ—ಅರಸನು ರಾಜ್ಯವನ್ನು ಆಳುತ್ತಾನೆ; ಗುರುವು ಶಿಷ್ಯನಿಂದ ಪುಸ್ತಕ ಓದಿಸಿಕೊಂಡನು.

ಅಕರ್ಮಕಕರ್ತರಿ—ಅವನು ಮನೆಯಲ್ಲಿ ಇದ್ದಾನೆ.

## ಕರ್ಮಣಿಪ್ರಯೋಗ.

೩೩೦. ಕರ್ಮದ ಪುರುಷ ಲಿಂಗ ವಚನಗಳು ಆಖ್ಯಾತಕ್ಕೆ ಇದ್ದರೆ, ಅಥವಾ ಕರ್ಮವು ಆಖ್ಯೇಯವಾಗಿದ್ದರೆ ಕರ್ಮಣಿಪ್ರಯೋಗವಾಗುತ್ತದೆ. ಈ ಪ್ರಯೋಗದಲ್ಲಿ ಕರ್ತೃವಿಗೆ ತೃತೀಯೆಯೂ ಕರ್ಮಕ್ಕೆ ಪ್ರಥಮೆಯೂ ಬರುತ್ತವೆ. ಸಕರ್ಮಕಧಾತುವಿನ ಭಾವರೂಪಕ್ಕೆ (ಕರ್ಮದ ಪುರುಷ ಲಿಂಗ ವಚನಗಳನ್ನು ಅನುಸರಿಸುವ) 'ಪಡು' ಧಾತುವಿನ ಆಖ್ಯಾತರೂಪಗಳನ್ನು ಹಚ್ಚಿದರೆ, ಕರ್ಮಾರ್ಥಕ ಕ್ರಿಯಾಪದಗಳು ಸಿದ್ಧವಾಗುತ್ತವೆ. ಅವನ್ನೇ ಕರ್ಮಣಿಪ್ರಯೋಗದಲ್ಲಿ ಉಪಯೋಗಿಸಬೇಕು. ಕನ್ನಡದಲ್ಲಿ ಕರ್ಮಣಿಪ್ರಯೋಗವು ಕ್ವಚಿತ್ತಾಗಿ ಉಪಯೋಗವಾಗುತ್ತದೆ.

ಉದಾ: ಅರಸನಿಂದ ಪ್ರಜೆಗಳು ಆಳಲ್ಪಡುತ್ತಾರೆ; ಗುರುವಿನಿಂದ ವಿದ್ಯಾರ್ಥಿಯು ಓದಿಸಲ್ಪಡುತ್ತಾನೆ.

ಒಮ್ಮೊಮ್ಮೆ ಕರ್ಮಣಿಪ್ರಯೋಗಗಳಲ್ಲಿ ಸಕರ್ಮಕ ಧಾತುವಿನ ಕರ್ತರ್ಥಕ ರೂಪಗಳನ್ನು ('ಅಲ್‌ಪಡು' ಎಂಬುದರ ಉಪಯೋಗವಿಲ್ಲದೆ) ಉಪಯೋಗಿಸುವ ರೂಢಿಯುಂಟು. ಇವಕ್ಕೆ 'ಸಂಕ್ಷಿಪ್ತ ಕರ್ಮಣಿಪ್ರಯೋಗ' ಎನ್ನಬಹುದು. ಇಂಥಾ ಕರ್ಮಣಿಪ್ರಯೋಗಗಳಲ್ಲಿ ಕರ್ತೃವು ಗುಪ್ತವಿರುತ್ತದೆ.

ಉದಾ: ಚಿತ್ರಮಯವಾಗಿ ಕಟ್ಟಿತು ಪರ್ಣಶಾಲೆ; ಗೂಡುಗಳು ಒಳಮೈಯಲ್ಲಿ ನಾರಿನಿಂದಲೂ ರೇಶಿಮೆಯಿಂದಲೂ ಹೊಂದಿಸಿರುತ್ತವೆ; ಬಾಗಿಲ ಕೀಲಿ ಹಾಕಿದೆ; ಹಾಲು ಹಿಂಡಿದೆ.

## ಕಾರಕಗಳು.

೨೩೧. ಕ್ರಿಯೆಯನ್ನು ಉಂಟುಮಾಡುವುದು ಕಾರಕವು. ಎಂದರೆ ವಾಕ್ಯದಲ್ಲಿ ಕ್ರಿಯಾಪದಕ್ಕೂ ವಿಭಕ್ತಿಗೂ ನಡುವೆ ಇರುವ ಸಂಬಂಧವನ್ನು ಕಾರಕವು ತೋರಿಸುತ್ತದೆ. ಅದು ಮುಖ್ಯವಾಗಿ ಕರ್ತೃ, ಕರ್ಮ, ಕರಣ, ಸಂಪ್ರದಾನ, ಅಪಾದಾನ, ಅಧಿಕರಣ ಎಂದು ಆರು ವಿಧವಾಗಿದೆ.

ಈಯಾರು ಕಾರಕಾರ್ಥಗಳ ಒಳಭೇದಗಳು ಕೆಲವುಂಟು. ಅವನ್ನು ವಿಭಕ್ತ್ಯರ್ಥಗಳನ್ನು ವಿವರಿಸುವಾಗ ಹೇಳುವೆವು.

೨೩೨. ಕರ್ತೃ—ಕ್ರಿಯೆಯನ್ನು ಉಂಟುಮಾಡುವುದರಲ್ಲಿ ಮುಖ್ಯವಾದುದು ಎಂದರೆ ಸ್ವತಂತ್ರವಾದುದು ಕರ್ತೃ. ಕರ್ತೃಪದವು ಕರ್ತರಿಪ್ರಯೋಗದಲ್ಲಿ ಪ್ರಥಮೆಯಲ್ಲಿರುತ್ತದೆ; ಕರ್ಮಣಿಪ್ರಯೋಗದಲ್ಲಿ ತೃತೀಯೆಯಲ್ಲಿರುತ್ತದೆ.

ಉದಾ: ರಾಮನು ಕಟ್ಟಿಗೆಯನ್ನು ಕಡಿಯುತ್ತಾನೆ.

ಇಲ್ಲಿ ಕೊಡಲಿಯನ್ನು ಎತ್ತುವುದು, ಕಟ್ಟಿಗೆಯ ಮೇಲೆ ಹಾಕುವುದು, ಮುಂತಾದ ಕಡಿಯುವ ಕ್ರಿಯೆಗಳನ್ನು ರಾಮನು ಸ್ವತಂತ್ರವಾಗಿ ಮಾಡುತ್ತಾನೆ. ಕಾರಣ ಕಡಿಯುವ ಕ್ರಿಯೆಗೆ ರಾಮನು ಕರ್ತೃ*.

೨೩೩. ಕರ್ಮ:—ಕ್ರಿಯೆಗೆ ವಿಷಯವಾದದ್ದು, ಎಂದರೆ ಕ್ರಿಯಾಫಲವನ್ನು ಹೊಂದುವುದು ಕರ್ಮವು. ಕರ್ಮಪದವು ಕರ್ತರಿಪ್ರಯೋಗದಲ್ಲಿ ದ್ವಿತೀಯೆಯಲ್ಲಿರುತ್ತದೆ. ಕರ್ಮಣಿಪ್ರಯೋಗದಲ್ಲಿ ಪ್ರಥಮೆಯಲ್ಲಿರುತ್ತದೆ.

ಉದಾ: ರಾಮನು ಕಟ್ಟಿಗೆಯನ್ನು ಕಡಿಯುತ್ತಾನೆ. ಈ ವಾಕ್ಯದಲ್ಲಿ ಕಡಿಯುವುದು ಕ್ರಿಯೆಯು; ಪೆಟ್ಟು ತಿನ್ನುವುದು, ತುಂಡಾಗುವುದು ಇವೇ ಕ್ರಿಯಾಫಲವು; ಈ ಫಲವನ್ನು ಹೊಂದುವುದು ಕಟ್ಟಿಗೆ. ಆದರಿಂದ ‘ಕಟ್ಟಿಗೆಯನ್ನು’ ಕರ್ಮವು.*

೨೩೪. ಕರಣ:— ಕೆಲಸವನ್ನು ಮಾಡಲಿಕ್ಕೆ ಸಾಧನವಾದುದು ಕರಣವು. ಇದು ತೃತೀಯೆಯಲ್ಲಿ ಇರುತ್ತದೆ.

ಉದಾ: ಕೊಡಲಿಯಿಂದ ಮರವ ಕಡಿದನು.—ಇಲ್ಲಿ ‘ಕೊಡಲಿಯು’ ಕಡಿಯುವ ಕೆಲಸಕ್ಕೆ ಸಾಧನವಾದದ್ದೂ ವ್ಯಾಪಾರವುಳ್ಳದ್ದೂ ಆದಕಾರಣ ‘ಕೊಡಲಿಯಿಂದ’ ಕರಣವು.

---

* ಕರ್ತರಿ ಪ್ರಯೋಗದಲ್ಲಿ ಆಖ್ಯಾತಕ್ಕೆ ‘ಯಾರು, ಯಾವುದು, ಯಾವನು’ ಮುಂತಾದ ಪ್ರಥಮಾಂತ ಪ್ರಶ್ನಗಳನ್ನು, ಕರ್ಮಣಿಪ್ರಯೋಗದಲ್ಲಿ ‘ಯಾರಿಂದ’ ಮುಂತಾದ ತೃತೀಯಾಂತ ಪ್ರಶ್ನಗಳನ್ನು ಮಾಡಿದರೆ ಬರುವ ಉತ್ತರವೇ ಕರ್ತೃವು.

ಕರ್ತರಿ ಪ್ರಯೋಗದಲ್ಲಿ ‘ಯಾರನ್ನು, ಏನನ್ನು’ ಎಂಬ ದ್ವಿತೀಯಾಂತ ಪ್ರಶ್ನಗಳನ್ನು ಕರ್ಮಣಿ ಪ್ರಯೋಗದಲ್ಲಿ ‘ಯಾರು, ಏನು’ ಎಂಬ ಪ್ರಥಮಾಂತ ಪ್ರಶ್ನಗಳನ್ನೂ ಆಖ್ಯಾತಕ್ಕೆ ಮಾಡಿದರೆ ಬರುವ ಉತ್ತರವೇ ಕರ್ಮವು. ಉದಾಹರಣಗಳನ್ನು ಪ್ರಯೋಗಪ್ರಕರಣದಲ್ಲಿ ನೋಡಿರಿ.

೨೩೫. ಸಂಪ್ರದಾನ—ಕೊಡಲ್ಪಡುವ ವಸ್ತುವನ್ನು ಹೊಂದತಕ್ಕ ಪಾತ್ರವು ಸಂಪ್ರದಾನವು. ಇದು ಚತುರ್ಥಿಯಿಂದ ಸೂಚಿತವಾಗುತ್ತದೆ.

ಉದಾ: ಬ್ರಾಹ್ಮಣನಿಗೆ ಆಕಳ ಕೊಟ್ಟನು, ಇಲ್ಲಿ ಕೊಡಲ್ಪಡುವ ವಸ್ತು ಆಕಳು, ಅದನ್ನು ಹೊಂದತಕ್ಕ ಪಾತ್ರವು ಬ್ರಾಹ್ಮಣನು. ಕಾರಣ "ಬ್ರಾಹ್ಮಣನಿಗೆ" ಸಂಪ್ರದಾನವು.

೨೩೬. ಅಪಾದಾನ—ವಸ್ತುವು ಯಾವ ಸ್ಥಾನವನ್ನು ಅಗಲುವುದೋ ಆ ಸ್ಥಾನವು ಅಪಾದಾನವು. ಇದನ್ನು ಪಂಚಮಿಯಿಂದ ಸೂಚಿಸುತ್ತಾರೆ.

ಉದಾ: ಮರದಿಂದ ಹಣ್ಣು ಬಿತ್ತು. ಇಲ್ಲಿ 'ಮರದಿಂದ' ಅಪಾದಾನವು.

೨೩೭. ಅಧಿಕರಣ—ಕ್ರಿಯೆ ನಡೆಯುವ ಸ್ಥಾನಕ್ಕೆ ಅಥವಾ ಕಾಲಕ್ಕೆ ಹಾಗೂ ಕರ್ತೃ ಅಥವಾ ಕರ್ಮದ ಆಧಾರಕ್ಕೆ ಅಧಿಕರಣವೆನ್ನುತ್ತಾರೆ. ಇದು ಸಪ್ತಮಿವಿಭಕ್ತಿಯಿಂದ ಸೂಚಿತವಾಗುತ್ತದೆ.

ಉದಾ: ಗಡಿಗೆಯಲ್ಲಿ ಅನ್ನವನ್ನು ಮಾಡು; ಮನೆಯಲ್ಲಿ ಇದ್ದಾನೆ; ಸುಗ್ಗಿಯಲ್ಲಿ ಕಾಳುಗಳನ್ನು ಸಂಗ್ರಹಿಸು; ಮಾತಿನಲ್ಲಿ ಜಾಣ್ಮೆಯುಂಟು ಮು.–ಈಯುದಾಹರಣಗಳಲ್ಲಿ 'ಗಡಿಗೆಯಲ್ಲಿ' 'ಮನೆಯಲ್ಲಿ' ಎಂಬುವು ಸ್ಥಾನವಾಚಕಾಧಿಕರಣಗಳು; 'ಸುಗ್ಗಿಯಲ್ಲಿ' ಎಂಬುದು ಕಾಲವಾಚಕಾಧಿಕರಣವು; 'ಮಾತಿನಲ್ಲಿ' ಎಂಬುದು ಆಧಾರವೆಂದು ಹೇಳಿದ ಅಧಿಕರಣವು.

## ವಿಭಕ್ತ್ಯರ್ಥಗಳು.

೨೩೮. ಕಾರಕವನ್ನು ಹೇಳುವ ವಿಭಕ್ತಿಗೆ ಕಾರಕವಿಭಕ್ತಿಯೆಂಬ ಹೆಸರು. ಕಾರಕದ ಸಂಬಂಧವು ಸರ್ವದಾ ಕ್ರಿಯೆಗೆ ಇರುತ್ತದೆ. ಪ್ರಥಮೆ, ದ್ವಿತೀಯೆ, ತೃತೀಯೆ, ಚತುರ್ಥಿ, ಪಂಚಮಿ, ಸಪ್ತಮಿ ಈ ಆರು ಕಾರಕವಿಭಕ್ತಿಗಳು. ಷಷ್ಠಿಯು ವಸ್ತುಗಳ ಸಂಬಂಧವನ್ನು ಹೇಳುವುದೇ ಹೊರತು ಕ್ರಿಯೆಗೆ ಸಂಬಂಧಿಸುವುದಿಲ್ಲ. ಬೇರೆ ಕಾರ್ಯದಲ್ಲಿರುವವರನ್ನು ಎಚ್ಚರಿಸಿ ತನ್ನ ಕಾರ್ಯಕ್ಕಾಗಿ ತನ್ನೆದುರಿಗೆ ಕರೆಯುವುದು ಸಂಬೋಧನವು.

೨೩೯. ಪ್ರಥಮೆ: (ಅ) ಎಲ್ಲ ವಾಕ್ಯಗಳಲ್ಲಿ ಆಖ್ಯೇಯಪದಕ್ಕೆ ಪ್ರಥಮೆ ಬರುತ್ತದೆ; ಎಂದರೆ ಕರ್ತರಿ ಪ್ರಯೋಗದಲ್ಲಿ ಕರ್ತೃವಿಗೂ ಕರ್ಮಣಿ ಪ್ರಯೋಗದಲ್ಲಿ ಕರ್ಮಕ್ಕೂ ಪ್ರಥಮೆ ಬರುವುದು. ಉದಾಹರಣಗಳನ್ನು ಹಿಂದೆ ಪ್ರಯೋಗ ಪ್ರಕರಣದಲ್ಲಿ ನೋಡಿರಿ.

(ಆ) ಕ್ರಿಯೆ ನಡೆದ ಕಾಲವನ್ನು ಇಲ್ಲವೆ ಕಾಲದ ಪರಿಮಿತಿಯನ್ನು ಹೇಳುವಲ್ಲಿ ಪ್ರಥಮೆ ಬರುವುದು.

ಉದಾ: ಹಸ್ತಿನಾವತಿಗೆ ವೇದವ್ಯಾಸಮುನಿಯು ಒಂದು ದಿವಸ ಬಂದನು. ಅವನು ಹನ್ನೆರಡು ವರ್ಷ ಕಳೆಯುತ್ತಾನೆ.

(ಇ) ಸ್ಥಾನದ ಮತ್ತು ಮಾರ್ಗದ ಪರಿಮಾಣವನ್ನು ಹೇಳುವಲ್ಲಿ ಪ್ರಥಮೆ ಬರುತ್ತದೆ.

ಉದಾ: ಈ ಬೆಟ್ಟವು ನಾಲ್ಕು ಗಾವುದವಿದೆ; ಧಾರವಾಡಕ್ಕೆ ಬೆಳಗಾವಿ ಹದಿನಾರು ಹರದಾರಿಯಿದೆ ಮು.

೨೪೦. ದ್ವಿತೀಯೆ: (ಅ) ಕರ್ತರಿ ಪ್ರಯೋಗದಲ್ಲಿ ಕರ್ಮಕ್ಕೆ ದ್ವಿತೀಯೆ ಬರುತ್ತದೆ. ಉದಾಹರಣಗಳನ್ನು ಪ್ರಯೋಗಗಳಲ್ಲಿ ನೋಡಿರಿ.

(ಆ) ಕ್ರಿಯೆ ನಡೆದ ಸ್ಥಾನ ಕಾಲಗಳ ಪರಿಮಿತಿಯನ್ನು ಹೇಳುವಲ್ಲಿ ಒಮ್ಮೊಮ್ಮೆ ದ್ವಿತೀಯೆ ಬರುತ್ತದೆ.

ಉದಾಹರಣಗಳು:

ಸ್ಥಾನಕ್ಕೆ—ಆರು ಗಾವುದವನ್ನು ಓಡಿದನು, ಮೂರು ಗಾವುದಗಳನ್ನು ನಡೆದನು.
ಕಾಲಕ್ಕೆ—ರಾತ್ರಿಯನ್ನು ಉಪವಾಸದಿಂದ ಇದ್ದನು.

(ಇ) ಪ್ರೇರಣಾರ್ಥಕ ಕ್ರಿಯಾಪದಗಳ ಪ್ರಯೋಗದಲ್ಲಿ ಪ್ರಯೋಜ್ಯ* ಕರ್ತೃವನ್ನು ಹೇಳಲಿಕ್ಕೆ ಕೆಲವು ಕಡೆಯಲ್ಲಿ ನಿತ್ಯವಾಗಿ, ಕೆಲವು ಕಡೆಯಲ್ಲಿ ವಿಕಲ್ಪವಾಗಿ ದ್ವಿತೀಯೆ ಬರುತ್ತದೆ.

ಉದಾಹರಣಗಳು.

ನಿತ್ಯಕ್ಕೆ—ಮಾವುತನು ಅರಸನನ್ನು ಆನೆಯನ್ನು ಏರಿಸಿದನು; ತಾಯಿ ಕೂಸನ್ನು ಮಲಗಿಸಿದಳು; ನಾಯಕನು ಕೇಡಿಯನ್ನು ಸಾಚಿಸಿದನು ಮು.

ವಿಕಲ್ಪಕ್ಕೆ—ಗುರುವು ಶಿಷ್ಯನನ್ನು (ಶಿಷ್ಯನಿಂದ) ವ್ಯಾಕರಣವನ್ನು ಓದಿಸಿದನು; ತಂದೆ ಮಗನನ್ನು (ಮಗನಿಂದ) ಕಥೆಯನ್ನು ಹೇಳಿಸಿದನು.

(ಈ) ಕರೆ, ಕೇಳು, ಬೇಡು, ಮಾಡು, ಕೊಡು ಮುಂತಾದ ಧಾತುಗಳ ಅಪಾದಾನಾದಿಕಾರಕಗಳಿಗೆ ವಿಕಲ್ಪದಿಂದ ದ್ವಿತೀಯೆ ಬರುವುದು. ಅದಕ್ಕೆ ಗೌಣದ್ವಿತೀಯೆ ಎನ್ನುವರು. ಕರ್ಮಕ್ಕೆ ಬಂದ ದ್ವಿತೀಯೆಗೆ ಪ್ರಧಾನ ದ್ವಿತೀಯೆಯೆನ್ನುವರು.

ಉದಾಹರಣಗಳು.

ಗೌಳಿಗನು ಹಸುವನ್ನು (ಹಸುವಿನಿಂದ) ಹಾಲ ಕರೆದನು; ವಾಮನನು ಬಲಿಯನ್ನು (ಬಲಿಯಲ್ಲಿ) ಭೂಮಿಯನ್ನು ಬೇಡಿದನು; ಶಿಷ್ಯರು ಗುರುಗಳನ್ನು (ಗುರುಗಳಿಗೆ) ಅರ್ಥ

---

* ತಾನೇ ಕೆಲಸವ ಮಾಡದೆ ಬೇರೊಬ್ಬನ ಪ್ರೇರಣೆಯಿಂದ ಮಾಡುವವನೇ ಪ್ರಯೋಜ್ಯ ಕರ್ತೃ. ಪ್ರೇರಣೆ ಕೊಡುವವನು ಪ್ರಯೋಜಕ ಕರ್ತೃ. ಇವರಿಗೆ ಕ್ರಮದಿಂದ ಪ್ರೇರ್ಯ, ಪ್ರೇರಕ ಎಂದು ಹೆಸರು.

ಕೇಳಿದನು; ಹಾಲನ್ನು (ಹಾಲಿಂದ) ಮೊಸರನ್ನು ಮಾಡುವರು; ಜ್ಞಾನಿಗಳು ಮನ ಜೀವರಿಗೆ ಕಾಣಿಕೆಯನ್ನು (ಕಾಣಿಕೆಗೆ) ಕೊಡುತ್ತಾರೆ ಮು.

ಈ ಉದಾಹರಣಗಳಲ್ಲಿ ವಿಕಲ್ಪ ದ್ವಿತೀಯೆಗಳೆಲ್ಲ ಗೌಣವೆಂದು ತಿಳಿಯಬೇಕು.

೬೧. ತೃತೀಯೆ: (ಅ) ಕರ್ಮಣಿ ಪ್ರಯೋಗದಲ್ಲಿ ಕರ್ತೃವಿಗೆ ...ಯೆ ಬರುತ್ತದೆ.

(ಉದಾಹರಣಗಳನ್ನು ಪ್ರಯೋಗ ವಿವರದಲ್ಲಿ ನೋಡಿರಿ.)

(ಆ) ಉದು (ಇಲ್ಲವೆ ಅದು) ಪ್ರತ್ಯಯಾಂತ ಕೃದ್ಭಾವನಾಮದ ಕರ್ತೃ ...ಗೆ ತೃತೀಯೆ ಬರುವುದು.

ಉದಾ: ನಿನ್ನಿಂದ ಈ ಕೆಲಸವನ್ನು ಮಾಡುವುದು ಆಗದು.*

(ಇ) ಕರಣಕ್ಕೆ ತೃತೀಯೆ ಬರುತ್ತದೆ.

ಉದಾ: ಕೊಡಲಿಯಿಂದ ಮರವ ಕಡಿದನು.

(ಈ) ಕಾರಣವನ್ನು ಹೇಳುವಲ್ಲಿ ತೃತೀಯೆ ಬರುತ್ತದೆ.

ಉದಾ: ದಾನದಿಂದ ಕೀರ್ತಿ ಬರುತ್ತದೆ; ವಿದ್ಯೆಯಿಂದ ಜ್ಞಾನ ಬರುತ್ತದೆ; ಜ್ಞಾನ ...ದ ಮೋಕ್ಷವಾಗುತ್ತದೆ; ಚೆಲುವಿಕೆಯಿಂದ ಪಾಷಾಣಗಳು ಬೆಲೆಗಾಣುತ್ತವೆ ಮು.

(ಉ) ಯಾವುದಾದರೊಂದು ಪ್ರಕಾರದಿಂದ ಅಥವಾ ವಸ್ತುವಿನಿಂದ ...ದು ವ್ಯಕ್ತಿಯು ಸೂಚಿತವಾಗುವುದೋ ಆ ಪ್ರಕಾರ ಅಥವಾ ವಸ್ತುವಿಗೆ ...ಯೆ ಬರುತ್ತದೆ. ಇದಕ್ಕೆ 'ಇತ್ಥಂಭೂತಲಕ್ಷಣ' ವೆನ್ನುವರು.

ಉದಾ: ಕಾಲಿಂದ ಕುಂಟನು, ಜನಿವಾರದಿಂದ ಬ್ರಾಹ್ಮಣನು, ಜ್ಞಾನದಿಂದ ವೃದ್ಧನು, ...ಣದಿಂದ ಒಳ್ಳಿದನು, ರೂಪದಿಂದ ಚೆಲುವನು ಮು.

(ಊ) ಕ್ರಿಯೆ ನಡೆದ ರೀತಿಯನ್ನು ಹೇಳಲಿಕ್ಕೆ ತೃತೀಯೆ ಬರುತ್ತದೆ.

ಉದಾ: ತ್ವರೆಯಿಂದ ನಡೆದನು, ಚೆಂದದಿಂದ ಓದಿದನು, ಜಾಣ್ಮೆಯಿಂದ ಮಾತಾಡಿ ...ನು ಮು.

(ಋ) ಪ್ರಯೋಜ್ಯಕರ್ತೃವನ್ನು ಹೇಳುವಲ್ಲಿ ವಿಕಲ್ಪದಿಂದ ತೃತೀಯೆ ...ರುವುದು.

ಉದಾ: ಗುರುವು ಶಿಷ್ಯನಿಂದ (ಶಿಷ್ಯನನ್ನು) ವ್ಯಾಕರಣವನ್ನು ಓದಿಸಿದನು ಮು.

(ೠ) ಕರ್ತೃವಿನೊಡನೆ ಸಂಯೋಗಹೊಂದುವ (ಎಂದರೆ ಕೂಡಿ ...ಕೊಂಡು ಎಂಬ ಅರ್ಥದಲ್ಲಿ) ಅಪ್ರಧಾನವಾಚಕಗಳಿಗೆ ತೃತೀಯೆ ಬರುವುದು.

---

* ಇಂತಹ ಪ್ರಯೋಗಗಳಿಗೆ 'ಭಾವೇಪ್ರಯೋಗ' ಎಂದು ಹೇಳುವುದುಂಟು. ...ರೆ ಸಂಸ್ಕೃತದಲ್ಲಿ ಭಾವೇಪ್ರಯೋಗಕ್ಕೆ ಬೇರೆ ಅರ್ಥವಿರುವುದರಿಂದ ಆಂತಹ ಪ್ರಯೋ ...ನ್ನು ಕನ್ನಡಕ್ಕೆ ಅಸ್ವಾಭಾವಿಕವಾಗಿರುವುದರಿಂದ 'ಭಾವೇಪ್ರಯೋಗ'ವೆಂಬುದನ್ನೇ ಬಿಡು ...ವು ಸರಿಯಾದುದು.

ಉದಾ: ರಾಮನು ಸುಗ್ರೀವಾದಿಗಳ ಗಡಣದಿಂದ ಅಯೋಧ್ಯಾಪುರಿಗೆ ದೂವಾಳಿ ದನು; ಅರಸನು ಮಂತ್ರಿಸೇನಾಪತಿಗಳಿಂದ ಯುದ್ಧಕ್ಕೆ ಹೋದನು.

೨೪೨. ಚತುರ್ಥಿ: (ಅ) ಸಂಪ್ರದಾನಕ್ಕೆ ಚತುರ್ಥಿ ಬರುತ್ತದೆ.

ಉದಾ: ಬ್ರಾಹ್ಮಣನಿಗೆ ಗೋವನ್ನು ಕೊಟ್ಟನು; ಯತಿಗೆ ಭಿಕ್ಷವನ್ನು ಇಕ್ಕಿದನು; ಶಿಷ್ಯನಿಗೆ ವಿದ್ಯೆಯನ್ನು ಕೊಟ್ಟನು; ಶತ್ರುವಿಗೆ ಬೆನ್ನುಕೊಟ್ಟನು; ಅಪರಾಧಿಗೆ ಶಿಕ್ಷೆಯನ್ನು ಮಾಡಿದನು, ಮು.

(ಆ) ಹೇತು ಅಥವಾ ಕಾರಣವನ್ನು ಹೇಳಲಿಕ್ಕೆ ಚತುರ್ಥಿ ವಿಕಲ್ಪದಿಂದ ಬರುತ್ತದೆ.

ಉದಾ: ಹುಲಿಗೆ (ಹುಲಿಯಿಂದ) ಅಂಜಿದನು; ಹೆಸರಿಗೆ (ಹೆಸರಿನಿಂದ) ಅರಸು; ಮಾತಿಗೆ (ಮಾತಿನಿಂದ) ಜಾಣನು; ಪುಣ್ಯಕ್ಕೆ (ಪುಣ್ಯದಿಂದ) ಒಳಿತಾಯಿತು. ಮು.

(ಇ) ಅಧಿಕರಣಕ್ಕೆ ಚತುರ್ಥಿ ವಿಕಲ್ಪವಾಗಿ ಬರುವುದುಂಟು.

ಉದಾ: ಈಯೂರಿಗೆ (ಊರಲ್ಲಿ) ನಾಲ್ಕು ಕೆರೆಗಳುಂಟು; ಮೂರ್ಖರಿಗೆ (ಮೂರ್ಖರಲಿ) ಬುದ್ಧಿ ಇಲ್ಲ; ಆ ಕಾಲಕ್ಕೆ (ಆ ಕಾಲದಲ್ಲಿ) ನಾರದನು ಮೈದೋರಿದನು; ವರ್ಷಕ್ಕೆ (ವರ್ಷದಲ್ಲಿ) ಕಲಿತನು.

(ಈ) 'ಉಣ್ಣು, ತಿನ್ನು' ಮುಂತಾದ ಅಶನಾರ್ಥಕಧಾತುಗಳಿಗೆ 'ಕಲಿ, ತಿಳಿ' ಮುಂತಾದ ಜ್ಞಾನಾರ್ಥಕ ಧಾತುಗಳಿಗೆ 'ಇಸು' ಪ್ರತ್ಯಯ ಬಂದಾಗ ಪ್ರಯೋಜ್ಯ ಕರ್ತೃವಿಗೆ ಚತುರ್ಥಿ ಬರುತ್ತದೆ.

ಉದಾ: ತಾಯಿ ಕೂಸಿಗೆ ಮೊಲೆಯುಣಿಸಿದಳು; ಗುರು ಶಿಷ್ಯನಿಗೆ ತತ್ತ್ವವನ್ನು ತಿಳಿಸಿದನು ಮು.

(ಉ) 'ಶರಣುಬರು, ಮರೆಹೋಗು, ಪೊಡಮಡು, ಮುಂತಾದ ನಮನಾರ್ಥಕಧಾತುಗಳಕರ್ಮಕ್ಕೂ 'ಚಿಂತಿಸು, ಬಯಸು' ಮುಂತಾದ ಇಚ್ಛಾರ್ಥಕ ಧಾತುಗಳ ಕರ್ಮಕ್ಕೂ, 'ಏರು, ಅಡರು' ಧಾತುಗಳ ಕರ್ಮಕ್ಕೂ, 'ಬಯ್ಯು, ಸೇರು, ಅನ್ನು' ಧಾತುಗಳ ಕರ್ಮಕ್ಕೂ ವಿಕಲ್ಪದಿಂದ ಚತುರ್ಥಿ ಬರುತ್ತದೆ.

ಉದಾ: ದೇವರಿಗೆ (ದೇವರನ್ನು) ವಂದಿಸುತ್ತೇನೆ; ಪಾದಕ್ಕೆ (ಪಾದವನ್ನು) ಎರಗುತ್ತೇನೆ; ಬಾಜೀರಾಯನು ಇಂಗ್ಲಿಷರಿಗೆ (ಇಂಗ್ಲಿಷರನ್ನು) ಮರೆಹೊಕ್ಕನು; ಮೋಕ್ಷಕ್ಕೆ (ಮೋಕ್ಷವನ್ನು) ಚಿಂತಿಸು; ಪರದ್ರವ್ಯಕ್ಕೆ (ಪರದ್ರವ್ಯವನ್ನು) ಆಶಿಸಬೇಡ; ತಲೆಗೆ (ತಲೆಯನ್ನು) ಅಡರಿದಳು; ಮರಕ್ಕೆ (ಮರವನ್ನು) ಏರಿದನು; ನನಗೆ (ನನ್ನನ್ನು) ಬಯ್ಯುತ್ತಾನೆ; ಊರಿಗೆ (ಊರನ್ನು) ಸೇರಿದನು; ನಿನಗೆ (ನಿನ್ನ) ಏನನ್ನಲಿ ಮು.

(ಊ) 'ಬಗೆ' ಧಾತುವಿಗೆ ಅವಜ್ಞೆಯಿಂದ ಹೋಲಿಸು ಎಂಬರ್ಥವು ಬಂದಾಗ ಕರ್ಮದ ಉಪಮಾನಕ್ಕೆ ವಿಕಲ್ಪದಿಂದ ಚತುರ್ಥಿ ಬರುತ್ತದೆ.

ಉದಾ: ಲಕ್ಷ್ಮಣನು ರಾವಣನನ್ನು ತೃಣಕ್ಕೆ (ತೃಣವನ್ನು) ಬಗೆದನು; ಸಿದ್ಧರು ದೂಷಕರನ್ನು ನಾಯಿಗೆ (ನಾಯಿಯನ್ನು) ಬಗೆಯುತ್ತಾರೆ.

(ಋ) ಕೆಲವು ವಾಕ್ಯಗಳಲ್ಲಿ ಕರ್ತೃವಿಗೆ ಚತುರ್ಥಿ ಬರುವುದುಂಟು.

ಉದಾ: ನನಗೆ ಈಸಲಿಕ್ಕೆ ಬರುತ್ತದೆ; ಅವನಿಗೆ ಲೆಕ್ಕವು ತಿಳಿಯುತ್ತದೆ; ನಿನಗೆ ಆ ಗಿಡವು ಕಾಣುತ್ತದೆ ಮು.

(ಎ) ಕ್ರಯ ಪ್ರಮಾಣವನ್ನು ಹೇಳಲಿಕ್ಕೆ ಚತುರ್ಥಿ ಬರುತ್ತದೆ.

ಉದಾ: ಸೇರಿಗೆ ನಾಲ್ಕು ರೂಪಾಯಿಯಾದರೆ, ಮಣಕ್ಕೆ ಏನು?

(ಏ) ಗಮನಾರ್ಥಕಧಾತುಗಳ ಕರ್ಮಕ್ಕೆ ಚತುರ್ಥಿ ಬರುವುದು.

ಉದಾ: ಅವನು ಊರಿಗೆ ಹೋದನು; ನದಿಗಳು ಸಮುದ್ರಕ್ಕೆ ಹರಿಯುತ್ತವೆ; ರಾಮನು ವನಕ್ಕೆ ನಡೆದನು ಮು.

(ಐ) ಉದ್ದೇಶ ಫಲ ಪ್ರತಿನಿಧಿ ಸದೃಶ ಸೂಚಕ ಶಬ್ದಗಳಿಗೂ ದಿಕ್ಕಾಲ ಮಾರ್ಗವಾಚಕಗಳ ಪೂರ್ವಾವಧಿಗೂ ಚತುರ್ಥಿ ಬರುತ್ತದೆ.

ಉದಾ: ಉದ್ದೇಶ—ತೇರಿಗೆ ಮರ; ಭೂತಗಳಿಗೆ ಬಲಿ; ದೇವರಿಗೆ ನಮಸ್ಕಾರ; ಲೋಕಕ್ಕೆ ಕಲ್ಯಾಣ ಮು. ಫಲ—ಸಿರಿಗೆ ಉದ್ಯೋಗ; ಮಳೆಗೆ ಮುಗಿಲು; ಪಾಪಕ್ಕೆ ಪರಪೀಡೆ; ಪುಣ್ಯಕ್ಕೆ ಪರೋಪಕಾರ; ಜ್ಞಾನಕ್ಕೆ ವಿದ್ಯೆ ಮು.

ಪ್ರತಿನಿಧಿ—ಆಧಿಕ್ಯ ನ್ಯೂನತ್ವಭೇದಾದಿಗಳನ್ನು ತೋರಿಸುವಾಗ ಎದುರಿಸುವ ವಸ್ತುವಿಗೆ ಪ್ರತಿನಿಧಿಯೆನ್ನುವರು.

ಉದಾ: ಶೂದ್ರರಿಗೆ ಬ್ರಾಹ್ಮಣರು ಪೂಜ್ಯರು; ಕಾಗೆಗೆ ನೇರಲಹಣ್ಣು ಕಪ್ಪು; ಅವನಿಗೆ ನಾವು ಹೆರವರು; ರಾಮನಿಗೆ ಕೃಷ್ಣನು ಕಿರಿಯನು.

ಸದೃಶ—ಅವಳಿಗೆ ಇವನು ತಕ್ಕವನು ಮು.

ಶಕುನಸೂಚಕ—ಲೋಕನಾಶಕ್ಕೆ ಕಪ್ಪೆಯ ಚಂಡಿಕೆ, ವಿನಾಶಕಾಲಕ್ಕೆ ವಿಪರೀತ ಬುದ್ಧಿ.

ಪೂರ್ವಾವಧಿ*—ಧಾರವಾಡಕ್ಕೆ ಬೆಳಗಾವಿ ಉತ್ತರ; ಈವೊತ್ತಿಗೆ ವರ್ಷವು; ಈ ಊರಿಗೆ ಆ ಊರು ಹತ್ತು ಹರದಾರಿ ಮು.

(ಒ) ಸಂಬಂಧಕ್ಕೆ ವಿಕಲ್ಪದಿಂದ ಚತುರ್ಥಿ ಬರುತ್ತದೆ.

ಉದಾ: ಲೋಕಕ್ಕೆ (ಲೋಕದ) ತಂದೆ; ನಿನಗೆ (ನಿನ್ನ) ಕಲ್ಯಾಣವಾಗಲಿ ಮು.

೨೪೩. **ಪಂಚಮಿ** (ಅ) ಅಪಾದಾನ ಹೇತು ಪ್ರತಿನಿಧಿಗಳಿಗೆ ಪಂಚಮಿ ಬರುತ್ತದೆ.

ಉದಾಹರಣಗಳು: ಅಪಾದಾನಕ್ಕೆ—ಗಿಡದಿಂದ ಹಣ್ಣು ಬಿತ್ತು; ಲಕ್ಷ್ಮಿಯಿಂದ ಕಾಮನು ಹುಟ್ಟಿದನು.

* ಇದು ಪ್ರತಿನಿಧಿಯ ಭೇದವು.

ಹೇತುವಿಗೆ—ಹುಲಿಯಿಂದ ಅಂಜಿದನು, ಉದ್ಯೋಗದಿಂದ ಸಿರಿ ಬರುತ್ತ[illegible] ಮಧುರವಾಣಿಯಿಂದ ಗಿಳಿಗೆ ಬಂಧನವಾಗುತ್ತದೆ.

ಪ್ರತಿನಿಧಿಗೆ—ಕೃಷ್ಣನಿಂದ ಬಲಭದ್ರನು ಹಿರಿಯನು, ಅರ್ಜುನನಿಂದ ನಕುಲ[illegible] ಕಿರಿಯನು, ಅದರಿಂದ ಇದು ಬೇರೆ, ಕಾಗೆಯಿಂದ ನೀರಲ ಹಣ್ಣು ಕಪ್ಪು, ಬ್ರಾಹ್ಮಣನಿ[illegible] ಶೂದ್ರನು ಕಿರಿಯನು, ರಾಮನಿಂದ ಕೃಷ್ಣನು ಓಡುವನು, ದಾರಿದ್ರ್ಯದಿಂದ ಮ[illegible] ಒಳ್ಳೆಯದು ಮು.

ದಿಕ್ಕಾಲಮಾರ್ಗವಾಚಕಗಳ ಪೂರ್ವಾವಧಿಯಾದರೂ ಪ್ರತಿನಿಧಿ[illegible] ಭೇದವಾಗಿದೆ.. ಅದರಿಂದ ಅದಕ್ಕೂ ಪಂಚಮಿ ಬರುತ್ತದೆ.

ಉದಾ: ಧಾರವಾಡದಿಂದ ಬೆಳಗಾವಿ ಬಡಗಲು, ಚಿಕ್ಕಂದಿನಿಂದ ಅವನು ದರಿದ್ರನು[illegible] ಬಹುಕಾಲದಿಂದ ತಮ್ಮ ದರ್ಶನವಾಯ್ತು, ಊರಿಂದ ಅಡವಿ ಒಂದು ಕೊಗಳತೆ ಅದೆ.

(ಆ) ವಾಕ್ಯದಲ್ಲಿ ಭೂತನ್ಯೂನಕ್ಕೆ ಲೋಪ ಬಂದರೆ, ಆ ನ್ಯೂನಕ್ರಿಯೆಯ[illegible] ಅಧಿಕರಣಕ್ಕೆ ನಿತ್ಯವಾಗಿಯೂ 'ಕಲಿ' ಅರ್ಥದ ಧಾತುವಿನ ಅಧಿಕರಣಕ್ಕೆ ವಿಕಲ್ಪ[illegible] ವಾಗಿಯೂ ಪಂಚಮಿ ಬರುತ್ತದೆ.

ಉದಾ: ಗಿಡದಲ್ಲಿದ್ದು ನೋಡಿದನು =ಗಿಡದಿಂದ ನೋಡಿದನು; ಉಪ್ಪರಿಗೆಯಲ್ಲಿ ಕೂತು ನೋಡಿದನು =ಉಪ್ಪರಿಗೆಯಿಂದ ನೋಡಿದನು; ದ್ರೋಣನು ಪರಶುರಾಮನಿಂ[illegible] (ಪರಶುರಾಮನಲ್ಲಿ) ಶಸ್ತ್ರಾಭ್ಯಾಸ ಮಾಡಿದನು.

೨೪೪. ಸಪ್ತಮಿ: (ಅ) ಅಧಿಕರಣಕ್ಕೆ ಸಪ್ತಮಿ ಬರುತ್ತದೆ.

ಉದಾ: ದೇವದತ್ತನು ಮನೆಯಲ್ಲಿದ್ದಾನೆ, ಮಡಿಕೆಯಲ್ಲಿ ಅನ್ನವನ್ನಿಟ್ಟನು, ಹಾಸಿಗೆ ಯಲ್ಲಿ ಮಲಗು, ಮೈಯ್ಯಲ್ಲಿ ಕಸುವಿದೆ, ಮೋಕ್ಷದಲ್ಲಿ ಇಚ್ಛೆಯಿದೆ, ಒಂದು ತಿಂಗಳಲ್ಲಿ ವ್ಯಾಕರಣ ಓದಿದನು, ಒಂದು ದಿನದಲ್ಲಿ ಕೆಲಸವಾಗುತ್ತದೆ, ಮಾತಿನಲ್ಲಿ ಜಾಣನು.

(ಆ) 'ನಿರ್ಧಾರಣ'ದಲ್ಲಿ ಎಂದರೆ ಜಾತಿ ಗುಣ ಕ್ರಿಯಾ ಸಂಜ್ಞೆಗಳಿಂದ ಒಂದು ವಸ್ತುವನ್ನು ಸಮುದಾಯದಿಂದ ಬೇರೆ ಮಾಡುವಲ್ಲಿ ಸಮುದಾಯ ವಾಚಕಕ್ಕೆ ಸಪ್ತಮಿ ಬರುತ್ತದೆ.

ಉದಾಹರಣಗಳು: ಜಾತಿ—ಮನುಷ್ಯರಲ್ಲಿ ಬ್ರಾಹ್ಮಣನು ಜಾಣನು. ಗುಣ— ಆವುಗಳಲ್ಲಿ ಕಪಿಲೆಯು ಉತ್ತಮ. ಕ್ರಿಯೆ—ಹೋಗುವವರಲ್ಲಿ ಓಡುವವನು ಮುಂದಾ ಗುವನು. ಸಂಜ್ಞೆ—ಹುಡುಗರಲ್ಲಿ ರಾಮನು ಜಾಣನು.

(ಇ) ಇಡಿಯ ಪದಾರ್ಥದಲ್ಲಿ ಒಂದು ಭಾಗವನ್ನು ಹೇಳಬೇಕಾದರೆ ಆ ಪದಾರ್ಥಕ್ಕೆ ಸಪ್ತಮಿ ಬರುತ್ತದೆ.



ಉದಾ: ಈ ಮನೆಯಲ್ಲಿ ಒಂದು ಕೋಣೆ ಸಾಕು.

(ಈ) ಕರಣಕ್ಕೆ ಸಪ್ತಮಿ ಬರುತ್ತದೆ.

ಉದಾ: ಕಾಲಲ್ಲಿ ನಡೆಯುತ್ತೇನೆ, ಕಣ್ಣಲ್ಲಿ ನೋಡುತ್ತೇವೆ.

೨೪೫. ಷಷ್ಠಿ: ಸಂಬಂಧವನ್ನು ಹೇಳಲಿಕ್ಕೆ ಷಷ್ಠಿ ಬರುತ್ತದೆ. ಸಂಬಂಧವು ಮುಖ್ಯವಾಗಿ ಎರಡು ಪ್ರಕಾರವಾಗಿದೆ. ಹೇಗಂದರೆ- (೧) ಭೇದಸಂಬಂಧ, (೨) ಅಭೇದಸಂಬಂಧ.

(೧) ಭಿನ್ನವಸ್ತುಗಳಲ್ಲಿ ಇರುವ ಸಂಬಂಧವು ಭೇದಸಂಬಂಧವು.

ಉದಾ: ಅರಸನ ಹೆಂಡತಿ; ನನ್ನ ತಂದೆ ಮು.

(೨) ಷಷ್ಠ್ಯಂತವಿಶೇಷಣವು ಅದರ ವಿಶೇಷ್ಯವು; ಈಯೆರಡೂ ಒಂದನ್ನೊಂದು ಅಗಲವಂತೆ ಇದ್ದರೆ, ಅವುಗಳ ಸಂಬಂಧವು ಅಭೇದಸಂಬಂಧವು.

ಉದಾ: ಹುಣಸಿಯ ಹಣ್ಣು, ಚಿನ್ನದುಂಗುರ, ಕಸುವಿನಾಳು.

೨೪೬. ಕಾಲಸೂಚಕಗಳಲ್ಲದ* ಕೃದಂತಗಳ ಸಂಗಡ ಇರುವ ಎಲ್ಲ ಕಾರಕಗಳಿಗೂ ಷಷ್ಠಿ ಬರುತ್ತದೆ.

ಉದಾ: ಕರ್ತೃ—ಆನೆಯ ನಡಿಗೆ, ಕೋಗಿಲೆಯ ಕೂಗು, ಅವಳ ಹಾಡು. ಕರ್ಮ—ತಂಗಳ ಊಟ, ಚಿನ್ನದ ಬಯಕೆ, ಹಿರಿಯರ ಉಪದೇಶ. ಕರಣ—ದೊಣ್ಣೆಯ ಹೊಡೆತ, ಕೊಡಲಿಯ ಕಡಿತ, ಉರಿಯ ಕಾವು. ಸಂಪ್ರದಾನ—ದೇವರ ನಮಸ್ಕಾರ. ಅಪಾದಾನಾದಿಗಳು—ಹುಲಿಯ ಹೆದರಿಕೆ, ಕಳ್ಳರಂಜಿಕೆ, ದೂರದ ಬರವಿಕೆ. ಅಧಿಕರಣ—ಅಡವಿಯ ಪ್ರವಾಸ, ಕಾಶಿಯ ವಾಸ, ಮನೆಯ ಊಟ ಮು.

೨೪೭. ಸಂಬೋಧನವು: ಮತ್ತೊಂದು ಕೆಲಸದಲ್ಲಿ ಇರುವವನನ್ನು ತನ್ನ ಕೆಲಸಕ್ಕಾಗಿ ಎಚ್ಚರಿಸಿ, ಎದುರು ಮಾಡಿಕೊಳ್ಳುವುದೇ ಸಂಬೋಧನವು. ಅದಕ್ಕೆ ಸಂಬೋಧನವಿಭಕ್ತಿ ಬರುತ್ತದೆ.

ಉದಾ: ಅರಸೇ ಕೇಳು; ರಂಗಾ ಏಳು; ತುಂಬಿ ಹಾಡು.

(ಅ) ಸಂಬೋಧನಕ್ಕೆ ಸನ್ಮಾನಾರ್ಥದಲ್ಲಿ ಪ್ರಥಮಾ ಬಹುವಚನವು ಬರುತ್ತದೆ. ಇಂಥಲ್ಲಿ ಕೊನೆಯ ಸ್ವರವು ವಿಕಲ್ಪದಿಂದ ದೀರ್ಘವಾಗುತ್ತದೆ.

ಉದಾ: ದೇವರೂ ಬರಬೇಕು; ಸೀತೆಯಣ್ಣಗರು ಕೇಳಿರಯ್.

## ಸರ್ವನಾಮಪ್ರಯೋಗ

೨೪೮. ವಾಕ್ಯದೊಳಗೆ—ಎಲ್ಲೆಲ್ಲಿ ನಾಮದ ಉಚ್ಚಾರವು ಸಲ್ಲದೋ ಅಲ್ಲಲ್ಲಿ ಸರ್ವನಾಮವನ್ನು ಪ್ರಯೋಗಿಸುತ್ತಾರೆ. ಆ ಸ್ಥಳಗಳು ಯಾವುವೆಂದರೆ:

* ವರ್ತಮಾನ ಭೂತ ಭವಿಷ್ಯನ್ನಿಷೇಧಕೃದಂತಗಳೂ, ನ್ಯೂನಗಳೂ ಭಾವರೂಪಗಳೂ ಕ್ರಿಯಾನಾಮಗಳೂ ಅಲ್ಲದ.

(ಅ) ನಾಮದ ಉಚ್ಚಾರವು ಪುನಃಪುನಃ ಆದರೆ ವಾಕ್ಯವು ಅಸಹ್ಯವಾಗು ತ್ತಿದ್ದಲ್ಲಿ.

ಉದಾ: ರಾಮನು ರಾವಣನನ್ನು ಹೊಡೆದದ್ದರಿಂದ ಅವನು ನೆಲಕ್ಕೆ ಬಿದ್ದನು.

(ಆ) ಸನ್ಮಾನಾರ್ಥದಲ್ಲಿ.

ಉದಾ: ತುಳಸೀ, ಅಡಿಗೆ ಆಯಿತು; ಅವರನ್ನು ಊಟಕ್ಕೆ ಎಬ್ಬಿಸು.

(ಇ) ಗಂಡಹೆಂಡಿರು ಪರಸ್ಪರರ ಹೆಸರನ್ನು ಅನ್ನಬಾರದೆಂಬ ವ್ಯವ ಹಾರವಿರುವದರಿಂದ ಅವರ ಮಾತಿನಲ್ಲಿ.

ಉದಾ: ಅಮ್ಮಾ, ಅಳೆ ಎಲ್ಲಿ? ಕಾಣುವದಿಲ್ಲ? ರಂಗಾ, ಅವರ ಹತ್ತರ ಹೋಗು ಜಾಣ.

(ಈ) ಪ್ರಶ್ನೆ ಮಾಡುವಲ್ಲಿ. ಇವಕ್ಕೆ ಪ್ರಶ್ನಾರ್ಥಕಸರ್ವನಾಮುವೆನ್ನುತ್ತಾರೆ.

ಉದಾ: ಯಾರು ಬಂದರು? ಏನು ಹೇಳು.

(ಉ) ತೋರಿಸುವಲ್ಲಿ. ಇವಕ್ಕೆ ದರ್ಶಕ ಸರ್ವನಾಮುವೆನ್ನುತ್ತಾರೆ.

ಉದಾ: ಇದು ನೋಡು ತಮ್ಮಾ; ಅಕ್ಕೊ, ಅವನೇ ಅರ್ಜುನನು.

೨೪೯. ಸರ್ವನಾಮದ ಪ್ರಯೋಗದಿಂದ ಯಥಾರ್ಥಜ್ಞಾನಕ್ಕೆ ಅ ಯಾಗುತ್ತಿದ್ದರೆ ಇಲ್ಲವೆ ಸಂಶಯುವಾಗುತ್ತಿದ್ದರೆ ಅದನ್ನು ಪ್ರಯೋಗಿಸಬಾರದು.

ಉದಾ: ರಾಮನೂ ಕೃಷ್ಣನೂ ಆಡುತ್ತಿರಲು, ಗೋವಿಂದನು ನಡುವೆ ಬಂದನು; ಅದರಿಂದ ಆವನು ಇವನನ್ನು ಹೊಡೆದನು.

ಇಲ್ಲಿ 'ಅವನು' ಎಂಬ ಪದದ ಸ್ಥಳದಲ್ಲಿ ಅಂಕಿತನಾಮುವೇ ಬೇಕು.

೨೫೦. ಹಿಂದಿನ ಸಂಬಂಧವಿಲ್ಲದೆ ವಾಕ್ಯಪ್ರಾರಂಭದಲ್ಲಿ ಸರ್ವನಾಮ ವನ್ನು ಪ್ರಯೋಗಿಸಬಾರದು.

ಉದಾ: ವಾಕ್ಯದಲ್ಲಿ ಅದೇ ಪದವನ್ನು ಎರಡು ಸಾರೆ ಪ್ರಯೋಗಿಸುವದು ಸಮಂಜಸ ಭಾವವೆನಿಸುತ್ತದೆ.

ಇಲ್ಲಿ 'ಅದೆ' ಪದವನ್ನು ಎರಡು ಸಾರೆ ಪ್ರಯೋಗಿಸಿದ್ದು ದೋಷ, ಅದೇ ಅಂದರೆ ಯಾವುದು ಎಂಬ ಪ್ರಶ್ನೆ ಹುಟ್ಟುತ್ತದೆ, ಅದಕ್ಕೆ ಸಮಾಧಾನವಿಲ್ಲ.

೨೫೧. ಹಿಂದಿನ ವಾಕ್ಯದಲ್ಲಿ ಬಂದ ನಾಮಪದವೇ ಅದರ ಮುಂದಿನ ವಾಕ್ಯದ ಕ್ರಿಯೆಗೆ ಸಂಬಂಧಿಸುತ್ತಿದ್ದರೆ, ಸರ್ವನಾಮುವನ್ನು ಪ್ರಯೋಗಿಸ ಬಾರದು.

ಉದಾ: ಕೋಣ ಬೆಳೆದರೆ (ಅದು) ಆನೆಯಾದೀತೇ?

ಇಲ್ಲಿ 'ಅದು' ಎಂಬ ಸರ್ವನಾಮುವು ಬೇಕಾಗಿಲ್ಲ.

೨೫೨. ಪ್ರಶ್ನೆಯಲ್ಲಿ ಹೆಚ್ಚಿನ ಸಾಮರ್ಥ್ಯವನ್ನು ಹುಟ್ಟಿಸುವಲ್ಲಿ ಪ್ರಶ್ನಾರ್ಥಕ ಸರ್ವನಾಮದ ಹಿಂದೆ ಲಿಂಗ ವಚನ ವಿಚಾರವಿಲ್ಲದೆ 'ಅದು' ಶಬ್ದವನ್ನು ಇಡುತ್ತಾರೆ.

ಉದಾ: ನಿನ್ನನ್ನು ಅದಾವಳು ಸರಿಗಟ್ಟುವಳು? ಪತಿಯನ್ನು ಬಿಟ್ಟರೆ ಹೆಣ್ಣಿಗೆ ಅದಾರು ಗತಿ? ದೇವರಿಗಿಂತ ಹೆಚ್ಚಿನ ಸರ್ವಜ್ಞನು ಅದಾವನು? ಇವಕ್ಕೆಲ್ಲ ಉತ್ತರವು ಯಾರೂ ಇಲ್ಲ' ಎಂದೇ ಹೊರಡುತ್ತದೆ.

೨೫೩. ನಿಶ್ಚಯಾರ್ಥವ ಹೇಳುವಾಗ 'ಅದು' ಅಥವಾ 'ಇದು' ಶಬ್ದವು ಪುರುಷ ಲಿಂಗ ವಚನ ಭೇದವಿಲ್ಲದೆ ವಿಶೇಷಣವಾಗುತ್ತದೆ. ಆಗ 'ಏ' ನಿಪಾತವು 'ಅದು, ಇದು' ಶಬ್ದಗಳಿಗೆ ಹತ್ತುತ್ತದೆ, ಉದಾ:

ಅದೇ ಮನುಷ್ಯನನ್ನು ನಾನಿಂ ಕಂಡೆನು; ಅದೇ ಜನರಲ್ಲಿ ಈ ನಡತೆಯುಂಟು; ಇದೇ ಹೆಂಗಸು ಹಾಡುತ್ತಾಳೆ; ಅದೇ ನಾನು ಈಗ ಬಿಕ್ಕೆಯ ಬೇಡುತ್ತೇನೆ; ಇದೇ ಇವನೇ ನನ್ನ ಗೆಳೆಯನು.

೨೫೪. 'ಅದು, ಇದು' ಶಬ್ದಗಳು ಅವ್ಯಯಗಳಾಗಿ ಕೆಲವು ವಾಕ್ಯಗಳಲ್ಲಿ ಪ್ರಯೋಗಿಸಲ್ಪಡುತ್ತವೆ. ಆಗ 'ಏ' ನಿಪಾತವು ಇವುಗಳ ಅಂತ್ಯಕ್ಕೆ ಹತ್ತುವುದು.

ಉದಾ: ನಾನು ಇದೇ ಬಂದೆನು; ಅವರು ಇದೇ ಹೋದರು.

೨೫೫. ಅತಿಶಯಾರ್ಥವನ್ನು ಹೇಳುವುದಾದರೆ ಸರ್ವನಾಮಗಳು ವಾಕ್ಯದಲ್ಲಿ ಪುನಃ ಪುನಃ ಬರುತ್ತವೆ. ಅತಿಶಯಾರ್ಥವು ಸರ್ವನಾಮಕವಿಶೇಷಣಗಳಿಂದಲೂ ಹುಟ್ಟುತ್ತದೆ.

ಉದಾಹರಣಗಳು.

ಸ್ತುತ್ಯತಿಶಯ— ಅವರ ಮಾತೇನು? ಅವರ ಕಥೆಯೇನು? ಅವರ ನಡತೆಯೇನು? ಅವರ ವಿಚಾರವೇನು? ಅವರ ಸೌಜನ್ಯವೇನು? ನಿಂದಾತಿಶಯ—ಈ ಮನೆ, ಈ ಮಾರು, ಈ ಹೆಂಡಿರು, ಈ ಮಕ್ಕಳು, ಈ ಸೌಖ್ಯ, ನಾನೊಲ್ಲೆನೋ ನನ್ನಪ್ಪಾ ನು.

ವಿಶೇಷಣಪ್ರಯೋಗ.

೨೫೬. ವಸ್ತುವಿನ ಗುಣವನ್ನು ವರ್ಣಿಸುವುದಾದರೆ, ವಿಶೇಷಣವು ವಿಶೇಷ್ಯದ ಮುಂದೆ ಬರುತ್ತದೆ. ಆಗ ಅದಕ್ಕೆ ವಿಶೇಷ್ಯದ ಲಿಂಗ ವಚನ ವಿಭಕ್ತಿಗಳು ಬರುತ್ತವೆ. ಇಂಥ ವಿಶೇಷಣಕ್ಕೆ ಉತ್ತರವಿಶೇಷಣ ಅಥವಾ ವಿಧೇಯ ವಿಶೇಷಣವೆಂಬ ಹೆಸರು.

ಉದಾ: [illegible] ಯವು

ಅಪವಾದಗಳು—(ಅ) 'ಎಲ್ಲ' ಶಬ್ದವು ವಿಶೇಷ್ಯದ ಹಿಂದೆ ಅಥವಾ ಮುಂದೆ ಬಂದರೆ, ವಿಭಕ್ತಿಪ್ರತ್ಯಯಗಳಿಗೆ ಲೋಪ ಬರುವುದುಂಟು.

ಉದಾ: ಎಲ್ಲ ಜನರು = ಜನರೆಲ್ಲ, ಎಲ್ಲ ಜನರನ್ನು = ಜನರನ್ನೆಲ್ಲ, ಎಲ್ಲ ಜನರಿಂದ = ಜನರಿಂದೆಲ್ಲ, ಎಲ್ಲ ಜನರಿಗೆ = ಜನರಿಗೆಲ್ಲ ಮು.

(ಆ) 'ಎಲ್ಲ' ಶಬ್ದವು ಉತ್ತರವಿಶೇಷಣವಾದರೆ, ವಿಶೇಷ್ಯಕ್ಕೆ ಬರುವ ವಿಭಕ್ತಿಯು ವಿಕಲ್ಪದಿಂದ 'ಎಲ್ಲ' ಶಬ್ದಕ್ಕೆ ಬರುತ್ತದೆ. ವಿಶೇಷ್ಯವು ಪ್ರಥಮಾ ಬಹುವಚನಾಂತವಾಗುತ್ತದೆ.

ಉದಾ: ಜನರೆಲ್ಲರು, ಜನರೆಲ್ಲರನ್ನು, ಜನರೆಲ್ಲರಿಂದ, ಜನರೆಲ್ಲರಿಗೆ ಮು.

(ಇ) ಸಂಖ್ಯಾವಿಶೇಷಣಗಳಿಗೂ ವಿಶೇಷ್ಯದ ವಿಭಕ್ತಿ ಬರುತ್ತದೆ. ಆಗ ವಿಶೇಷ್ಯವು ಪ್ರಥಮಾಂತವಾಗಿ ವಿಶೇಷಣದ ಹಿಂದೆ ಇರುತ್ತದೆ.

ಉದಾ: ಅವೆರಡನ್ನು ತಾ, ಅವರಿಬ್ಬರನ್ನು ಕರೆ, ದಿನವೊಂದಕ್ಕೆ, ವರುಷ ನೂರು, ದಿನವೊಂದರಲ್ಲಿ ಮು.

೨೫೭. ವಿಶೇಷ್ಯವಿಶೇಷಣಗಳನ್ನು ಕೂಡಿಸುವ ಬೇರೆ ಬೇರೆ ಪ್ರಕಾರಗಳನ್ನು ಕೆಳಗೆ ತೋರಿಸುತ್ತೇವೆ. ಅವುಗಳಲ್ಲಿ ಯಾವುದು ಪ್ರಸಂಗಕ್ಕೆ ಸಲ್ಲುವುದೋ ಅದರಂತೆ ಕೂಡಿಸಬೇಕು,

(ಅ) ಧೀರನು, ಉದಾರನು, ಗುಣಿಯು, ಗಂಭೀರನು, ನಯಶಾಲಿಯು, ಧನುರ್ಧಾರಿಗಳಲ್ಲಿ ಶ್ರೇಷ್ಠನು, ಅವನಿಗೆ ಯಾರು ನಮಸ್ಕರಿಸರು? (ಆ) ಧೀರನೂ, ಉದಾರನೂ, ಗಂಭೀರನೂ ಆದ ಅವನಿಗೆ ಯಾರು ನಮಸ್ಕರಿಸರು? (ಇ) ಧೀರನಾದಂಥ, ಉದಾರನಾದಂಥ, ಗಂಭೀರನಾದಂಥ ದೊರೆಯನ್ನು ಯಾರು ಬಯಸರು! (ಈ) ಎಲಾ, ಈ ಟೊಣಪನನ್ನು ರಂಗನನ್ನು ನೋಡು; ಸಕ್ಕರೆ ಯಾರಿಗೆ ಬೇಕು? ನಿನಗೆ ನಮ್ಮಪ್ಪನಿಗೇನು?

೨೫೮. 'ಉಳ್ಳ' ಶಬ್ದಾಂತಗಳಾದ ವಿಶೇಷಣಗಳು ವಿಕಲ್ಪದಿಂದ ಷಷ್ಠ್ಯಂತವಾಗುತ್ತವೆ.

ಉದಾ: ಒಯ್ಯಾರವುಳ್ಳ ಹೆಂಗಸು = ಒಯ್ಯಾರದ ಹೆಂಗಸು. ಕಡುದಯವುಳ್ಳ ರಾಣಿಯರು = ಕಡುದಯದ ರಾಣಿಯರು. ಗೌರವವುಳ್ಳ ಮಾತು = ಗೌರವದ ಮಾತು.

ಕೆಲವು ಕಡೆಗೆ ರೂಪಕಾರ್ಥದಲ್ಲಿ ಷಷ್ಠಿ ಬರುತ್ತದೆ.

ಉದಾ: ನಗೆಯ ಬೆಳ್ದಿಂಗಳು = ನಗೆಯೆಂಬ ಬೆಳ್ದಿಂಗಳು.

೨೫೯. ಕೃದಂತಗಳು ವಿಶೇಷಣಗಳಾಗಿ ಪ್ರಯೋಗವಾದಾಗ ಕರ್ತೃರೂಪದ ಕೃದಂತಗಳಿಗೆ [illegible] ಕರ್ತೃಪದವು ಪ್ರಥ

ಪ್ಯಂತವಾಗಿಯೇ ಇರಬೇಕು; ಕರ್ಮರೂಪದ ಕೃದಂತಗಳ ಕರ್ತೃವು ತೃತೀಯಾಂತವಾಗಿಯೇ ಇರಬೇಕು.

ಉದಾ: ನಾನು ಮಾಡಿದ (ಮಾಡುವ, ಮಾಡದ) ಕೆಲಸವು; ನನ್ನಿಂದ ಮಾಡಲ್ಪಟ್ಟ (ಮಾಡಲ್ಪಡುವ, ಮಾಡಲ್ಪಡದ) ಕೆಲಸವು.

## ಅವ್ಯಯಗಳು.

### ವಿಭಕ್ತ್ಯವ್ಯಯಗಳ ಪ್ರಯೋಗ.

೨೬೦ ವಿಭಕ್ತ್ಯವ್ಯಯಗಳೆಲ್ಲ ಬಹುಶಃ ಷಷ್ಠಿಗೆ ಪರವಾಗುವುವು. ಕೆಲವು ಮಾತ್ರ ಚತುರ್ಥಿಗೆ ಪರವಾಗುವುವು. ಮತ್ತು ತೃತೀಯಾದಿವಿಭಕ್ತಿಗಳ ಕಾರಕಾರ್ಥಗಳನ್ನು ಹೇಳುವುವು.

ಉದಾಹರಣಗಳು— ಚತುರ್ಥಿಗೆ ಪರವಾಗುವುವು.

ಸಂಪ್ರದಾನಾರ್ಥಕ್ಕೆ— ಓಸುಗ, ಓಸ್ಕರ, ಎಂದು, ಆಗಿ.

ನಾನು ಅವನಿಗೋಸುಗ ಕಷ್ಟಬಡುತ್ತೇನೆ; ದೇವರಿಗೋಸ್ಕರ ನಮಸ್ಕಾರವು; ಉಯಂಗಿಯನ್ನು ನಿನಗೆಂದು ಹೊಲಿಸಿದೆನು; ಶಕುಂತಲೆ ದುಷ್ಯಂತನಿಗಾಗಿ ಹುಟ್ಟಿದಳು; ಎಲ್ಲರೂ ಮಾಡುವದು ಹೊಟ್ಟೆಗಾಗಿ, ಗೇಣುಬಟ್ಟೆಗಾಗಿ.

ಪ್ರತಿಸಿಧ್ಯರ್ಥಕ್ಕೆ— ಇಂತ, ಇಂತಲೂ.

ಆಕಾಶಕ್ಕಿಂತ ತಂದೆ ದೊಡ್ಡವನು, ಎಲ್ಲರಿಗಿಂತಲೂ ದೇವರು ದೊಡ್ಡವನು ಮು.

ಷಷ್ಠಿಗೆ ಪರವಾಗುವುವು:

ನಿಮಿತ್ತಸಂಪ್ರದಾನಾರ್ಥಗಳು—ಸಲುವಾಗಿ, ನಿಮಿತ್ತ ಮು.

ಉದಾ: ನಿನ್ನ ಸಲುವಾಗಿ, ಇದನ್ನು ತಂದೆನು; ಉದರದ ನಿಮಿತ್ತ ಪರಸೇವೆ.

ಅಧಿಕರಣಾರ್ಥಗಳು— ಹತ್ತಿರ, ಬಳಿ, ಮು.

ಉದಾ: ನನ್ನ ಹತ್ತಿರ ಬಹಳ ಧನವಿದೆ; ನಿನ್ನ ಬಳಿ ಕೆಲಸವಿದೆ.

ಸಹಾರ್ಥಗಳು— ಒಡನೆ, ಸಂಗಡ, ಕೂಡ ಮು.

ಉದಾ: ಸಾಧುಗಳೊಡನೆ ಸಹವಾಸಮಾಡು; ದುಷ್ಟರ ಕೂಡ ವಾದಿಸಬೇಡ; ಮಗನು ತಂದೆಯ ಸಂಗಡ ಹೋದನು.

### ಸಮುಚ್ಚಾಯಕಾವ್ಯಯಗಳ ಪ್ರಯೋಗ.

ಸೂಚನೆ—ಸಮುಚ್ಚಾಯಕಾವ್ಯಯಗಳ ಪ್ರಯೋಗವು ಅನ್ವಯಪ್ರಕರಣಕ್ಕೆ ಸಂಬಂಧಿಸಿರುವ ಕಾರಣ ಅವುಗಳ ಪ್ರಯೋಗವನ್ನು ಅನ್ವಯವಿವರದಲ್ಲಿ ಹೇಳುವೆವು.

## ಅನುಕರಣಾವ್ಯಯಗಳ ಪ್ರಯೋಗ.

೨೬೧. ನಾವು ಮಾತಾಡುವಾಗ ನಾನಾ ವಿಧಗಳಾದ ಸಪ್ಪಳಗಳನ್ನೂ ಕೂಗುಗಳನ್ನೂ ಅನ್ಯರ ಮಾತುಗಳನ್ನೂ ಅಂದು ತೋರಿಸುತ್ತೇವೆ. ಅವೆಲ್ಲ ಅನು ಕರಣಗಳಲ್ಲಿ ಬರುತ್ತವೆ. ಅನುಕರಣವೆಂದರೆ "ಅನ್ಯರು ಮಾಡಿದಂತೆ ಮಾಡುವಿಕೆ."

ಉದಾ: ಖಟ್‌ಖಡಲ್ಲೆಂದು (ಖಟ್‌ಖಡಲ್ಲನೆ) ಸಿಡಿಲು ಬಿತ್ತು; ಈ ಕುದುರೆ ಲುಟು ಲುಟು ನಡೆಯುತ್ತದೆ; ನೀರು ದಬ್‌ದಬ್ಬೆಂದು ಬೀಳುತ್ತದೆ; ಹೀಗೆಯೆ ತಿರ್ರನೆ, ಭರ್ರನೆ, ಸುಯ್ಯೆಂದು ಇತ್ಯಾದಿ.

## ಸಂಬೋಧಕಾವ್ಯಯಗಳ ಪ್ರಯೋಗ.

೨೬೨. ಸಂಬೋಧಕಾವ್ಯಯಗಳು ಸಂಬೋಧನವಿಭಕ್ತಿಯ ಹಿಂದೆ ಬರುತ್ತವೆ. ಸಂಬೋಧನವಿಭಕ್ತಿಯ ಅರ್ಥವೇ ಅವುಗಳ ಅರ್ಥವು.

ಉದಾ: ಎಲೈ ದೇವ, ಕೇಳೆಲೆ ನೃಪಾಲ, ಎಲಾ ರಂಗಾ ಮು.

೨೬೩. ಸಂಬೋಧನೆಯಲ್ಲಿ ಒಮ್ಮೊಮ್ಮೆ ಸಂಬೋಧನವಿಭಕ್ತಿಗೆ ಲೋಪ ವಾಗಿ ಬರಿಯ ಅವ್ಯಯದಿಂದಲೇ ಕೆಲಸವಾಗುತ್ತದೆ.

ಉದಾ: ಎಲಾ ಏಳು ಇಲ್ಲಿಂದ; ಎಲೇ ಸುಮ್ಮನಿರು; ಏ ಇಲ್ಲಿ ಬಾ.

## ಭಾವಬೋಧಕಾವ್ಯಯಗಳು.

೨೬೪. ಬೇಸರು, ಸುಖ, ದುಃಖ, ವಿನೋದ, ಆಶ್ಚರ್ಯ ಮುಂತಾದ ಮನೋಭಾವಗಳನ್ನು ತೋರಿಸಲಿಕ್ಕೆ ಪ್ರಯೋಗವಾಗುವ ಅವ್ಯಯಗಳಿಗೆ ಭಾವ ಬೋಧಕಾವ್ಯಯಗಳು ಎನ್ನುತ್ತಾರೆ.

ಉದಾಹರಣಗಳು:—ಎಲಾ ಇವನ ಇದೇನು ಮಾಡಿದೆಯೋ! ಎಲಾ ನಿನ್ನ ಹುಚ್ಚು ಹಾಳಾಗಲಿ! ಎಲಾ ಎಲಾ ಏನು ಕಷ್ಟ ವಿದು? ಹೀಗೆಯೆ ಅಯ್ಯೊ, ಅಯ್ಯಯ್ಯೋ, ಅಹಹ, ಓಹೋ, ಮುಂತಾದವುಗಳ ಪ್ರಯೋಗವನ್ನೂ ತಿಳಿದುಕೊಳ್ಳಬೇಕು.

## ಕ್ರಿಯಾನ್ಯೂನಗಳ ಪ್ರಯೋಗ.

೨೬೫. ಕ್ರಿಯಾನ್ಯೂನವು ಅಸಮಾಪ್ತಕ್ರಿಯೆಯನ್ನು ಹೇಳಿ ವಾಕ್ಯ ವನ್ನು ಮುಗಿಸುವ ಆಖ್ಯಾತಕ್ರಿಯೆಗೆ ಪೂರ್ವಕ್ರಿಯೆಯಾಗಿ ಕೂಡಿಕೊಳ್ಳುತ್ತದೆ. ಇದರ ಅರ್ಥವನ್ನು ಪೂರ್ಣಮಾಡಲಿಕ್ಕೆ ಒಂದು ಕ್ರಿಯಾಪದ ಬೇಕಾಗುವ ಕಾರಣ ಇದಕ್ಕೆ ಕ್ರಿಯಾನ್ಯೂನವೆಂಬ ಹೆಸರು. ಇದು ಹೇಳುವರ್ಥಗಳ ಯಾವುವೆಂದರೆ

ಸಮುಚ್ಚಯಾರ್ಥವು—ಒಬ್ಬನೇ ಕರ್ತೃವು ಅನೇಕ ಕ್ರಿಯೆಗಳನ್ನು ನಡಿಸಿದರೆ, ಕಡೆಗೆ ನಡಿಸಿದ ಕ್ರಿಯೆಯು ಹೇಳುವುದಕ್ಕೆ ಆಖ್ಯಾತಕ್ರಿಯಾಪದವೂ ಅದರ ಮೊದಲಿನ ಕ್ರಿಯೆಗಳಿಗೆಲ್ಲಾ ನ್ಯೂನರೂಪಗಳೂ ಬರುತ್ತವೆ.

ಉದಾ: ನಾನು ಮನೆಗೆ ಹೋಗಿ ಉಂಡು ಪುಸ್ತಕಗಳನ್ನು ತಕ್ಕೊಂಡು ಬರುತ್ತೇನೆ.

ಸಾಧನಾರ್ಥವು—ಕೆಲಕೆಲವು ವಾಕ್ಯಗಳಲ್ಲಿ ನ್ಯೂನಗಳು ಆಖ್ಯಾತಕ್ರಿಯೆಯನ್ನು ಸಾಧಿಸಿದ ರೀತಿ, ಕಾರಣ, ಕರಣ ಮುಂತಾದ ಅರ್ಥಗಳನ್ನು ಹೇಳುವುವು. ಉದಾ:

ರೀತಿ—ನಗುತ್ತ ಹೇಳಿದನು; ಅರಿತು ಮಾತಾಡಿದನು; ತಿಳಿಯದೆ ಮಾಡಿದನು.

ಕಾರಣ—ಹುಡುಗನು ಓದದೆ ಕೆಟ್ಟನು, ಪೆನಸೀಲು ಬರೆದು ಸವೆಯಿತು.

ಕರಣ—ದನಗಳನ್ನು ಹೊಡೆದು ಓಡಿಸಿದನು; ಸಿದ್ಧಾಂತವನ್ನು ಪಾಠ ಮಾಡಿ ಕಲಿತನು.

ಈ ಪ್ರಯೋಗಗಳಲ್ಲಿ ವಿಕಲ್ಪವಾಗಿ ಆಖ್ಯಾತಕ್ರಿಯೆಗೂ ನ್ಯೂನಕ್ರಿಯೆಗೂ ಬೇರೆ ಬೇರೆ ಕರ್ತೃಗಳಿರುತ್ತವೆ; ಆದರೆ ನ್ಯೂನವು ಪ್ರಧಾನ ಕ್ರಿಯಾಪದದ ಕಾರಕದ ಸ್ಥಳದಲ್ಲಿ ಇರುತ್ತದೆ. ಉದಾ:

ಗಾಳಿ ಬೀಸಿ ಮರದಿಂದ ಹಣ್ಣು ಬಿತ್ತು; ಹಣ ಹೋಗಿ ಬಡವನಾದನು; ಹಾವು ಕಚ್ಚಿ, ವಿಷವೇರಿ, ಅರಸು ಸತ್ತನು.

ಕಾಲಾರ್ಥವು—ವಸಂತ ಬರುತ್ತಲೇ ಕೋಗಿಲು ಉಲಿಯುತ್ತದೆ. ಊಟಾ ಮಾಡಿ ಬರುತ್ತೇನೆ ಮು.

ವಿಶೇಷಣಾರ್ಥವೆಂದರೆ—ಕರ್ತೃವು ಏಕಕಾಲಕ್ಕೆ ಅನೇಕ ಕ್ರಿಯೆಗಳನ್ನು ನಡಿಸಿದನೆಂದು ಹೇಳುವುದಿದ್ದರೆ, ಮುಖ್ಯಕ್ರಿಯೆಗೆ ಆಖ್ಯಾತರೂಪವೂ ಅಮುಖ್ಯ ಕ್ರಿಯೆಗಳಿಗೆ ವರ್ತಮಾನನ್ಯೂನರೂಪಗಳೂ ಬರುತ್ತವೆ.

ಉದಾ: ನಗುತ್ತ, ತಿನ್ನುತ್ತ ಹರಟುತ್ತಾನೆ; ರಾಮನು ಹಾಡುತ್ತ, ಬಾರಿಸುತ್ತ, ನಗುತ್ತ ಕುಣಿಯುತ್ತಾನೆ.

೨೬೬. ಅನೇಕ ಕರ್ತೃಗಳು ಒಂದೇ ವೇಳೆಯಲ್ಲಿ ಅನೇಕ ಕ್ರಿಯೆಗಳನ್ನು ನಡಿಸಿದರೆಂದು ಹೇಳುವುದಿದ್ದರೆ, ಅಮುಖ್ಯಕ್ರಿಯೆಗಳಿಗೆಲ್ಲ 'ಅಲು' ಎಂಬ ಪ್ರತ್ಯಯವುಳ್ಳ ಭೂತನ್ಯೂನ ರೂಪಗಳು ಬಂದು ಮುಖ್ಯ ಕ್ರಿಯೆಗೆ ಆಖ್ಯಾತರೂಪವೂ ಬರುತ್ತವೆ. ಇಂತಹ ಪ್ರಯೋಗಗಳಿಗೆ 'ಸತಿಸಪ್ತಮಿ' ಎಂಬ ಹೆಸರು.

ಉದಾ: ಬ್ರಾಹ್ಮಣರು ಮಂತ್ರಗಳನ್ನು ಅನ್ನುತ್ತಿರಲು, ಜನರು ಕೌತುಕದಿಂದ ನೋಡುತ್ತಿರಲು, ವಾದ್ಯಘೋಷಗಳು ಆಕಾಶವನ್ನು ತುಂಬುತ್ತಿರಲು, ವಧೂವರರು ಒಬ್ಬರ ಮೇಲೊಬ್ಬರು ಅಕ್ಷತೆಗಳನ್ನು ಚೆಲ್ಲಿದರು.

## ಅನ್ವಯಪ್ರಕರಣ.

೨೬೭. ವಾಕ್ಯದೊಳಗಿನ ಪದಗಳನ್ನು ಅವುಗಳ ಪರಸ್ಪರ ಸಂಬಂಧಾನುಸಾರವಾಗಿ ಜೋಡಿಸುವುದು ಅನ್ವಯವೆನಿಸುತ್ತದೆ. ಈ ಸಂಬಂಧದ ಮುಖ್ಯ ನಿಯಮಗಳು ಯಾವುವೆಂದರೆ:—

(ಅ) ವಾಕ್ಯದ ಮೊದಲು ಕರ್ತೃಪದವು, ಅಲ್ಲಿಂದ ಕರ್ಮಪದವು, ಕಡೆಯಲ್ಲಿ ಕ್ರಿಯಾಪದವು ಇರಬೇಕು.

ಉದಾ: ನೀಲನು ಕೆಲಸವನ್ನು ಮಾಡುತ್ತಾನೆ; ನೀಲನಿಂದ ಕೆಲಸವು ಮಾಡಲ್ಪಡುತ್ತದೆ.

(ಆ) ಲಕ್ಷಣವಾಚಕ ಆಖ್ಯಾತದಲ್ಲಿ ಮೊದಲು ಉದ್ದೇಶಪದವು, ಅದರ ಮುಂದೆ ಉತ್ತರವಿಶೇಷಣವು, ಕಡೆಗೆ ಕ್ರಿಯಾಪದವು ಇರಬೇಕು.

ಉದಾ: ದೇವರು ದೊಡ್ಡವನಿದ್ದಾನೆ.

(ಇ) ವಿಶೇಷಣಗಳು ತಮ್ಮ ತಮ್ಮ ವಿಶೇಷ್ಯಗಳ ಹಿಂದೆ ಸೇರಿಸಲ್ಪಡಬೇಕು. ಕ್ರಿಯಾವಿಶೇಷಣಗಳು ಕ್ರಿಯಾಪದದ ಹಿಂದೆ ಬರಬೇಕು.

ಉದಾ: ಒಳ್ಳೆಯ ಅರಸು ಎಲ್ಲ ಪ್ರಜೆಗಳನ್ನು ಚೆನ್ನಾಗಿ ಪಾಲಿಸುತ್ತಾನೆ.

(ಈ) ಕರಣ, ಸಂಪ್ರದಾನ, ಅಪಾದಾನ ಮುಂತಾದ ಕಾರಕಪದಗಳು ಕರ್ತೃ ಕರ್ಮ ಕ್ರಿಯಾಪದಗಳೊಳಗೆ ಯಾವ ಪದಕ್ಕೆ ವಿಶೇಷವಾಗಿ ಸಂಬಂಧಿಸಿರುವುವೋ ಆ ಪದದ ಪೂರ್ವದಲ್ಲಿ ಸೇರುವುವು.

ಉದಾ: ಅಯೋಧ್ಯೆಯಲ್ಲಿ ದಶರಥನು ರಾಮನಿಗೆ ಪಟ್ಟಗಟ್ಟುವ ಸಮಾರಂಭವನ್ನು ಸಂತೋಷದಿಂದ ಮಾಡತೊಡಗಿದನು. ಧಾರವಾಡ ಹುಬ್ಬಳ್ಳಿ ಸವಣೂರುಗಳಿಂದ ವರ್ತಕರು ಇಲ್ಲಿಗೆ ಬಂದು, ಇದನ್ನು ಸಾಧಾರಣವಾಗಿ ಎರಡು ರೂಪಾಯಿಗಳಿಗೆ ಮಣವಂತೆ ಕೊಳ್ಳುವರು ಮು.

(ಉ) ಒಂದು ಕ್ರಿಯೆಗೆ ಅನೇಕ ಕ್ರಿಯಾವಿಶೇಷಣಗಳಿದ್ದರೆ, ಮಾತಾಡುವವನಿಗೆ ಯಾವುದು ವಿಶೇಷ ಅವಶ್ಯಕವೋ ಅದು ಕ್ರಿಯಾಪದದ ಹತ್ತಿರ ಇರುತ್ತದೆ, ಉಳಿದುವು ಅದರ ಹಿಂದೆ ಇರುತ್ತವೆ. ಈ ನಿಯಮವು ಕಾರಕಗಳಿಗೂ ಹತ್ತುತ್ತದೆ.

ಉದಾ: ರಾಮನು ನಿನ್ನೆ ಮನೆಯಲ್ಲಿ ಹುಚ್ಚನಂತೆ ಕುಣಿಯುತ್ತಿದ್ದನು; ನಿನ್ನೆ ಮನೆಯಲ್ಲಿ ಹುಚ್ಚನಂತೆ ರಾಮನು ಕುಣಿಯುತ್ತಿದ್ದನು; ರಾಮನು ಮನೆಯಲ್ಲಿ ಹುಚ್ಚನಂತೆ ನಿನ್ನೆ ಕುಣಿಯುತ್ತಿದ್ದನು; ರಾಮನು ನಿನ್ನೆ ಹುಚ್ಚನಂತೆ ಮನೆಯಲ್ಲಿ ಕುಣಿಯುತ್ತಿದ್ದನು.

(೬) ಯಾವುದೊಂದು ಕಾರಕಕ್ಕೆ ಅನೇಕ ವಿಶೇಷಣಗಳು ಇರುವುದರಿಂದ ಕರ್ತೃ ಕರ್ಮ ಕ್ರಿಯಾಪದಗಳು ದೂರದೂರವಾಗಿ ಅರ್ಥಕ್ಕೆ ಸಂಶಯ ಬರುವ ಹಾಗಿದ್ದರೆ, (ಈ ತೊಂದರೆಯನ್ನು ಪರಿಹರಿಸುವುದಕ್ಕಾಗಿ) ಅದನ್ನು ಅದರ ವಿಶೇಷಣಗಳೊಡನೆ ಮೊದಲು ಹೇಳಬಹುದು.

ಉದಾ: ಹಾದಿಯ ತಪ್ಪಿ ಅಗಲಿದ ಮರಿಗಳನ್ನು ನೆನೆದು, ವಾತ್ಸಲ್ಯವು ಹೆಚ್ಚಾಗಿ ಉಕ್ಕಲುಬ್ಬಿ, ಮೊಲೆಗಳು ತೊರೆದು, ಒತ್ತರಿಸಿ, ಚಿಮ್ಮಿ, ಸೋರಸೂಸುವ ಕಾಡೆಮ್ಮೆಗಳ ಹಾಲಧಾರೆಗಳನ್ನು ನೆಕ್ಕುತ್ತ ಅವುಗಳ ಬೆನ್ನುಹತ್ತಿ ಬರುವ ಅಡವಿಯ ಬೆಕ್ಕುಗಳಿಂದ ಆ ವನವು ಒಪ್ಪುತ್ತಿರುವುದು. ಬ್ರಹ್ಮನ ವರದಿಂದ ದುರ್ಜಯನಾದಂಥ, ಮುನಿಗಳನ್ನು ತಿರಸ್ಕರಿಸುವಂಥ, ಸಾಧುಗಳನ್ನು ಪೀಡಿಸುವಂಥ, ಐಶ್ವರ್ಯಮದದಿಂದ ಅಂಧನಾದಂಥ ರಾವಣನನ್ನು ರಾಮನು ಕೊಂದನು.

(೭) ಪ್ರಶ್ನಾರ್ಥಕಶಬ್ದವು ಯಾರನ್ನು ಅಥವಾ ಯಾವುದನ್ನು ಕೇಳುವುದೋ ಆ ಪದದ ಹಿಂದೆ ಇರಬೇಕು, ಎಂದರೆ ಕರ್ತೃವನ್ನು ಕೇಳುವುದಾದರೆ ಕರ್ತೃಪದದ ಹಿಂದೆ, ಕರ್ಮವನ್ನು ಕೇಳುವುದಾದರೆ ಕರ್ಮಪದದ ಹಿಂದೆ ಇರಬೇಕು.

ಉದಾ: ಏನು ಸ್ವಾಮಿ! ಈ ರಾತ್ರಿಯಲ್ಲಿ ಯಾವ ಕೆಲಸಕ್ಕೆ ಯಾವ ಸ್ಥಳಕ್ಕೆ ಹೋಗುತ್ತೀರಿ?

ಅಪವಾದ—(೧) ಪ್ರಶ್ನವನ್ನು ವಿಶೇಷ ಬಲಪಡಿಸಬೇಕಾದರೆ, ಎಲ್ಲ ಪ್ರಶ್ನಗಳನ್ನು ಒಟ್ಟುಗೂಡಿಸುತ್ತಾರೆ.

ಉದಾ: ಏನು ರಾಮಾ, ಇದನ್ನು ಎಷ್ಟಕ್ಕೆ ಯಾರಿಗೆ ಯಾತಕ್ಕೆ ಎಲ್ಲಿಗೆ ತಕ್ಕೊಂಡು ಹೋಗುತ್ತೀ?

(೨) ಕ್ರಿಯಾಪದಕ್ಕೆ ಎಲ್ಲ ಪ್ರಶ್ನಗಳು ಬರುವುದುಂಟು.

ಉದಾ: ಯಾರು ಕೊಂದರು? ಯಾರನ್ನು ಕೊಂದರು? ಯಾತರಿಂದ ಕೊಂದರು? ಯಾಕೆ ಕೊಂದರು? ಎಲ್ಲಿ ಕೊಂದರು? ಹೇಗೆ ಕೊಂದರು? ಯಾವಾಗ ಕೊಂದರು? ಮು.

(೮) ಒಂದು ಹೊಸ ವಾಕ್ಯವನ್ನು ಅದರ ಸಂಬಂಧವುಳ್ಳ ಹಿಂದೆ ಮುಗಿದ ವಾಕ್ಯಕ್ಕೆ ಜೋಡಿಸುವಂಥ ದರ್ಶಕಸರ್ವನಾಮವು ಅಥವಾ ವಿಶೇಷಣವು ಯಾವ ಕಾರಕಾರ್ಥ ಹೇಳಿದರೂ ಹೊಸ ವಾಕ್ಯದ ಆದಿಯಲ್ಲಿ ಇರಬೇಕು.

ಉದಾ: ಭೋಜನು ಉಜ್ಜಯಿನಿಯಲ್ಲಿ ಆಳುತ್ತಿದ್ದನು; ಆತನ ಸಭೆಯಲ್ಲೇ ಕಾಳಿದಾಸನೆಂಬ ಮಹಾಕವಿಯು ಇದ್ದನು; ಆ ಕವಿಯಿಂದ ರಸಭರಿತವಾದ ಎಷ್ಟೋ ಗ್ರಂಥಗಳು ರಚಿಸಲ್ಪಟ್ಟವೆ.

(೯) ವಾಕ್ಯದೊಳಗಿನ ಕೆಲವೊಂದು ಸಂಗತಿಯ ವಿವರವನ್ನಾಗಲಿ ಕಾರಣವನ್ನಾಗಲಿ ಎರಡು ಬಗೆಗಳಿಂದ ಹೇಳಬಹುದು. ಹೇಗೆಂದರೆ:—

(೧) ಮೊದಲು ಕಾರ್ಯವನ್ನು ಹೇಳಿ, ಆ ಮೇಲೆ 'ಏಕೆಂದರೆ, ಹೇಗೆಂದರೆ, ಏನೆಂದರೆ' ಮುಂತಾದ ಸೂಚಕಾವ್ಯಯಗಳಲ್ಲಿ ಒಂದನ್ನು ಕ್ರಿಯಾ ಪದದ ಮುಂದೆ ಬರೆದು, ಬಳಿಕ ಕಾರಣವನ್ನು ಅಥವಾ ವಿವರವನ್ನು ಹೇಳ ಬಹುದು. ಉದಾ:

ಕಾರಣಕ್ಕೆ—ಮೋಸಗಾರರಿಗೆ ಯಾವುದೊಂದು ಕೆಲಸದಲ್ಲಿ ಬಹಳ ಬುದ್ಧಿ ಬೇಕಾಗುತ್ತದೆ, ಯಾಕಂದರೆ ಪ್ರಾಣಿಗಳೆಲ್ಲ ತಮಗೆ ಮೋಸವಾಗಬಾರದೆಂದು ಬಹಳ ಎಚ್ಚರಿಂದ ಇರುತ್ತಾರೆ.

ವಿವರಕ್ಕೆ—ಬೆಕ್ಕುಗಳು ಆಕಳುಗಳನ್ನು ಸಾಕದಿದ್ದರೂ ನಿತ್ಯದಲ್ಲಿ ಹಾಲು ಮೊಸರು ಗಳಿಂದ ಬದಕುತ್ತವೆ; ಹೇಗಂದರೆ ಅವು ಹಗಲುರಾತ್ರಿ ಕ್ಷಣಕ್ಷಣಕ್ಕೆ ಮನೆ–ಮನೆಗೆ ಹೋಗಿ ಎಲ್ಲೆಲ್ಲಿ ಏನೇನಿರುತ್ತದೆಂಬದನ್ನು ಗೊತ್ತುಹಚ್ಚುತ್ತವೆ. ತಮ್ಮ ಆಹಾರವು ನೆಲುವಿನ ಮೇಲಿದ್ದರೂ ಅಲ್ಲಿಗೆ ಹಾರಲಿಕ್ಕೂ ಅದನ್ನು ಉರುಳಿಸಲಿಕ್ಕೂ ಅಲ್ಲೇ ಕುಡಿಯಲಿಕ್ಕೂ ತಕ್ಕ ಚಾಪಲ್ಯವೂ ಶಕ್ತಿಯೂ ಅವಕ್ಕಿರುತ್ತದೆ; ಇದಲ್ಲದೆ ಅವುಗಳ ದೃಷ್ಟಿಯೂ ಘ್ರಾಣವೂ ಮಿತಿಮೀರಿ ತೀಕ್ಷ್ಣವಾಗಿರುತ್ತವೆ; ಮತ್ತು ಮನುಷ್ಯರು ಈ ಪ್ರಾಣಿಗಳ ವಿಷಯಕ್ಕೆ ದಯ ತೋರಿಸುವುದು ಅವಕ್ಕೆ ಮೇಲಾದ ಸಾಧನವಾಗಿರುತ್ತದೆ.

ಗುರುಗಳು ನನಗೆ ಅಪ್ಪಣೆ ಮಾಡಿದ್ದಾರೆ; ಏನಂದರೆ—ಅಥವಾ ಗುರುಗಳು ನನಗೆ ಅಪ್ಪಣೆ ಮಾಡಿದ್ದೇನಂದರೆ—ರಾಮಾ, ನೀನು ಮನೆಗೆ ಹೋಗಿ, ಊಟತೀರಿಸಿಕೊಂಡು ನಮ್ಮ ಮನೆಗೆ ಬಾ; ನಾನು ನಿನಗೆ ಛಂದಸ್ಸಿನ ನಿಯಮವನ್ನು ಹೇಳುತ್ತೇನೆ. ದಶರಥನಿಗೆ ಹೆಂಣು ಗಂಡು ಕೂಡಿ ಅಯ್ದು ಮಂದಿ ಮಕ್ಕಳಿದ್ದರು, ಅವರು ಯಾರಂದರೆ—ರಾಮನು, ಲಕ್ಷ್ಮಣನು, ಭರತನು, ಶತ್ರುಘ್ನನು ಮತ್ತು ಶಾಂತಾದೇವಿಯು.

(೨) ಮೊದಲು ಕಾರ್ಯವನ್ನು ಹೇಳದೆ ಅದರ ಕಾರಣವನ್ನಾಗಲಿ ವಿವರವನ್ನಾಗಲಿ ಹೇಳಿ, ಬಳಿಕ, 'ಅದರಿಂದ, ಆದುದರಿಂದ, ಕಾರಣ, ಎಂಬ' ಮುಂತಾದ ಸಮುಚ್ಚಯಾರ್ಥಕಪದಗಳನ್ನು ಬರೆದು, ಅಲ್ಲಿಂದ ಕಾರ್ಯವನ್ನಾಗಲಿ ಸಂಗತಿಯನ್ನಾಗಲಿ ಹೇಳಬೇಕು.

ಉದಾ: ಪ್ರಾಣಿಗಳೆಲ್ಲರೂ ತಮಗೆ ಮೋಸವಾಗಬಾರದೆಂದು ಎಚ್ಚರಿಂದ ಇರುತ್ತಾರೆ; ಕಾರಣ (ಅದರಿಂದ, ಆದುದರಿಂದ) ಮೋಸಗಾರರಿಗೆ ತಮ್ಮ ಕೆಲಸವನ್ನು ಸಾಧಿಸಲಿಕ್ಕೆ ಬಹಳ ಬುದ್ಧಿ ಬೇಕಾಗುತ್ತದೆ.

ರಾಮಾ, ನೀನು ಮನೆಗೆ ಹೋಗಿ, ಊಟ ತೀರಿಸಿಕೊಂಡು ಬೇಗ ನಮ್ಮ ಮನೆಗೆ ಬಾ; ನಾನು ನಿನಗೆ ಛಂದಸ್ಸಿನ ನಿಯಮಗಳನ್ನು ಹೇಳುತ್ತೇನೆ ಎಂದು ಗುರುಗಳು ನನಗೆ ಅಪ್ಪಣೆ ಮಾಡಿದ್ದಾರೆ. ದಶರಥನಿಗೆ ರಾಮ ಲಕ್ಷ್ಮಣ ಭರತ ಶತ್ರುಘ್ನ ಶಾಂತಾದೇವಿಯರೆಂಬ ಅಯ್ದು ಮಂದಿ ಮಕ್ಕಳಿದ್ದರು.

(೩) ಹೊಸದಾಗಿ ವಾಕ್ಯಗಳನ್ನು ರಚಿಸ ಕಲಿಯುತ್ತಿರುವ ವಿದ್ಯಾರ್ಥಿಗಳು ಮೇಲಿನ ಎರಡು ನಿಯಮಗಳನ್ನು ಲಕ್ಷ್ಯದಲ್ಲಿಡಬೇಕು. ಏಕಂದರೆ—

ಎಷ್ಟೋ ಜನರು ತಿಳಿಯದೆ ಈಯೆರಡೂ ಬಗೆಗಳನ್ನು ಒಮ್ಮೆಗೇ ಉಪಯೋಗಿಸಿ, ವಾಕ್ಯಗಳನ್ನು ಕೆಡಿಸುತ್ತಾರೆ. ಇಂತಹ ದೋಷದ ವಾಕ್ಯಗಳ ಉದಾಹರಣೆ:

ಗುರುಗಳು ಹೇಳಿದ್ದೇನೆಂದರೆ—ರಾಮಾ, ನೀನು ಮನೆಗೆ ಹೋಗಿ, ಊಟ ತೀರಿಸಿಕೊಂಡು ನಮ್ಮ ಮನೆಗೆ ಬಾ; ನಾನು ನಿನಗೆ ಛಂದಸ್ಸಿನ ನಿಯಮಗಳನ್ನು ಹೇಳುವವನಿದ್ದೇನೆ ಎಂದು ಹೇಳಿದರು. ಅವನು ನನಗೆ ಹೀಗೆ ಹೇಳಿದನು—ರಾಮಾ, ನೀನು ನನಗೆ ಹತ್ತು ರೂಪಾಯಿ ಕೊಟ್ಟರೆ, ನಾನು ಈ ಕುದುರೆಯನ್ನು ನಿನಗೆ ಕೊಡುತ್ತೇನೆ ಎಂದು ಹೇಳಿದ್ದರಿಂದ, ನಾನು ಈಗ ಆ ಕುದುರೆಯನ್ನು ಕೊಳ್ಳುತ್ತೇನೆ ಮು.

(ಛ) ಓದುವವರ ಮನಸ್ಸಿನಲ್ಲಿ ಬೇಗ ಬಿಂಬಿಸಬೇಕಾದ ಅರ್ಥದ ಪದವನ್ನು, ಮುಂದಿನ ಅಥವಾ ಹಿಂದಿನ ಪದದೊಡನೆ ಕೂಡಿಸಿ ಪದಾಂತಸಂಧಿಯು ಮಾಡಬಾರದು.

ಉದಾ: ನಾನು ಈ ಸಂಗತಿಯನ್ನು ನಿನಗೆ ಮೊದಲೇ ಹೇಳಲಿಲ್ಲೇ? ಈ ವಾಕ್ಯದಲ್ಲಿ "ಈ" ಶಬ್ದವನ್ನು "ನಾನು" ಈ ಪದದೊಳಗೆ ಕೂಡಿಸಿ, "ನಾನೀ ಸಂಗತಿಯನ್ನು ಮೊದಲೇ ನಿನಗೆ ಹೇಳಲಿಲ್ಲೇ?" ಎಂದು ಬರೆದರೆ ವಾಕ್ಯದಲ್ಲಿ ಮುಖ್ಯವಾದ "ಈ" ಶಬ್ದದ ಅರ್ಥವು ಓದುವವರ ಮನಸ್ಸಿನಲ್ಲಿ ಅಷ್ಟು ಚೆನ್ನಾಗಿ ಬರುವುದಿಲ್ಲ.

(ಜ) ಮಾತಾಡುವಾಗ ತಮ್ಮ ಅಭಿಪ್ರಾಯವು ಬೇಗ ಪರರಿಗೆ ತಿಳಿಯಬೇಕೆಂದು ಅನ್ವಯದ ನಿಯಮಗಳನ್ನು ಲಕ್ಷಿಸದೆ ಅವಶ್ಯದ ಪದಗಳನ್ನು ಮೊದಲಿಗೆ ಇಡುತ್ತಾರೆ, ಮತ್ತು ಪದ್ಯಗಳಲ್ಲಂತೂ ಛಂದಸ್ಸಿನ ನಿಯಮವು ಬಲವತ್ತರವಾಗಿರುವ ಕಾರಣ ಈ ನಿಯಮಗಳು ನಡೆಯುವುದಿಲ್ಲ. ಉದಾ:

ತಂಗೀ, ಎಲ್ಲಿಗೆ ಹೋಗುತ್ತೀ ಬಹಳ ಗಡಬಡಿಯಿಂದ? ಇದೇನು ಬಂತಪ್ಪಾ ನನಗೆ ಪೇಚಾಟ?

## ಪದಸಮುಚ್ಚಯವು.

೨೬೮. ಒಂದೇ ಕ್ರಿಯೆಯಲ್ಲಿ ಅನ್ವಯಿಸಲ್ಪಡತಕ್ಕ ಸರೂಪ ಪದಗಳಿಗೆ (ರೂಪಸಾಮ್ಯ ಮತ್ತು ಅರ್ಥಸಾಮ್ಯವುಳ್ಳ ಪದಗಳಿಗೆ) ಸಮಾನಾಧಿಕರಣ ಪದಗಳೆಂಬ ಹೆಸರು. ಅವು ಕಾರಕಗಳಾಗಲಿ, ಕ್ರಿಯಾವಿಶೇಷಣಗಳಾಗಲಿ ಇರಬಹುದು. ಇಂಥ ಪದಗಳನ್ನು ಕೂಡಿಸುವದು ಪದಸಮುಚ್ಚಯವು, ವಿರೂಪದ ಎಂದರೆ ವ್ಯಧಿಕರಣದ ಪದಗಳ ಸಮುಚ್ಚಯವು ಆಗುವುದಿಲ್ಲ.

ಉದಾ: (೧) ಹಾಲಿಗೆ ಹೆಪ್ಪುಹಾಕಿ ಮೊಸರನ್ನು ಮಾಡುತ್ತಾರೆ; (೨) ಮೊಸರ ಕಡೆದು ಮಜ್ಜಿಗೆಯನ್ನು ತಯಾರಿಸುತ್ತಾರೆ; (೩) ಮಜ್ಜಿಗೆಯ ಕುದಿಸಿ ಪಳದೆಯನ್ನು ಮಾಡುತ್ತಾರೆ.

ಈ ಮೂರು ವಾಕ್ಯಗಳಲ್ಲಿ ಮೊಸರನ್ನು, ಮಜ್ಜಿಗೆಯನ್ನು, ಪಳದೆಯನ್ನು ಈ ಮೂರು ಪದಗಳು ಸರೂಪಗಳಾಗಿವೆ, ಮತ್ತು ಮಾಡುತ್ತಾರೆಂಬ ಕ್ರಿಯೆಯು ಮೂರಕ್ಕೂ ಸಾಧಾರಣವಾಗಿದೆ. ಆದದ್ದರಿಂದ ಇವು ಸಮಾನಾಧಿಕರಣ ಪದಗಳು, ಕಾರಣ ಇವುಗಳ ಸಮುಚ್ಚಯವು ಆಗುತ್ತದೆ. ಹೇಗಂದರೆ—

'ಹಾಲಿಗೆ ಹೆಪ್ಪು ಹಾಕಿ ಮೊಸರನ್ನೂ ಮೊಸರು ಕಡೆದು ಮಜ್ಜಿಗೆಯನ್ನೂ ಮಜ್ಜಿ ಕುದಿಸಿ ಪಳದೆಯನ್ನೂ ಮಾಡುತ್ತಾರೆ' ಆದರೆ 'ಮೊಸರ ಕಡೆದು, ಮಜ್ಜಿಗೆಯ ಕುದಿಸಿ' ಎಂಬಲ್ಲಿ ಮೊಸರ, ಮಜ್ಜಿಗೆಯ ಈ ಎರಡು ಪದಗಳು ಸರೂಪವಾಗಿದ್ದರೂ 'ಕಡೆದು, ಕುದಿಸಿ' ಎಂಬ ಅವುಗಳ ಕ್ರಿಯೆಗಳು ಭಿನ್ನವಾಗಿರುವುದರಿಂದ 'ಮೊಸರು, ಮಜ್ಜಿಗೆಯು' ಎಂಬ ಪದಗಳ ಸಮುಚ್ಚಯವು ಆಗುವುದಿಲ್ಲ. ಬೆಳ್ಳಿಯಿಂದ ರೂಪಾಯಿಗಳಾಗುತ್ತವೆ; ಗಿಡಗಳಿಗೆ ಕಾಯಿಗಳಾಗುತ್ತವೆ; ಇಲ್ಲಿ 'ಬೆಳ್ಳಿಯಿಂದ, ಗಿಡಗಳಿಗೆ' ಈ ಎರಡು ಪದಗಳಿಗೆ 'ಆಗುತ್ತವೆ' ಎಂಬ ಕ್ರಿಯೆ ಸಾಧಾರಣವಾಗಿದ್ದರೂ ಪದಗಳಲ್ಲಿ ರೂಪಾರ್ಥಸಾಮ್ಯವಿಲ್ಲದ್ದರಿಂದ 'ಬೆಳ್ಳಿಯಿಂದ, ಗಿಡಗಳಿಗೆ' ಎಂಬ ಪದಗಳ ಸಮುಚ್ಚಯವು ಆಗುವುದಿಲ್ಲ.

೨೬೯. ಪದಸಮುಚ್ಚಯವು ಮೂರು ಸಾಧನಗಳಿಂದ ಆಗುತ್ತದೆ. (ಅ) ದ್ವಂದ್ವಸಮಾಸ, (ಆ) ಸಂಗ್ರಹಣ, (ಇ) ಸಮುಚ್ಚಯ.

(ಅ) ದ್ವಂದ್ವಸಮಾಸದ ನಿಯಮಗಳನ್ನು ಸಮಾಸಪ್ರಕರಣದಲ್ಲಿ ನೋಡಿ ಕೊಳ್ಳಬೇಕು.

ಉದಾ: ರಾಮನು ಖರನನ್ನೂ ದೂಷಣನನ್ನೂ ಕೊಂದನು. ಈ ವಾಕ್ಯದಲ್ಲಿರುವ ಸಮಾನಾಧಿಕರಣ ಪದಗಳನ್ನು ದ್ವಂದ್ವಸಮಾಸದಿಂದ ಕೂಡಿಸಿ ಬರೆದರೆ— ರಾಮನು ಖರ ದೂಷಣರನ್ನು ಕೊಂದನು ಎಂದಾಗುತ್ತದೆ.

(ಆ) ದ್ವಂದ್ವಸಮಾಸದಿಂದ ಸಮುಚ್ಚಯವು ಆಗದ ಹಾಗಿದ್ದರೆ, ಸಂಗ್ರಹಣದಿಂದ ಮಾಡಬೇಕು. ಇದು ಹೇಗೆಂದರೆ— ಸಮುಚ್ಚಯಿಸತಕ್ಕ ಪದಗಳನ್ನು ಒಂದರ ಮುಂದೆ ಒಂದನ್ನು ಪ್ರಥಮಾಂತವಾಗಿ ಬರೆದ ಬಳಿಕ ಅವನ್ನೆಲ್ಲ ಸಂಗ್ರಹಿಸುವ ಸರ್ವನಾಮಕ್ಕಾಗಲಿ, ಜಾತಿವಾಚಕಕ್ಕಾಗಲಿ ಮುಖ್ಯ ವಿಭಕ್ತಿಯನ್ನು ಹಚ್ಚಿ ಬರೆದು ಕ್ರಿಯೆಯನ್ನು ಪೂರ್ಣಮಾಡಿದರೆ, ಸಂಗ್ರಹಣ ಸಮುಚ್ಚಯವಾಗುತ್ತದೆ.

ಉದಾ: ಕೌರವನು, ಅವನ ಗುರುಗಳು, ತಮ್ಮಂದಿರು, ಮಿತ್ರರು, ಆ ಮಿತ್ರರ ಹಿತ ಚಿಂತಕರು ಇವರೆಲ್ಲರನ್ನು ಪಾಂಡವರು ಸಂಗರದಲ್ಲಿ ಜಯಿಸಿದರು. ಮೆಯ್ಗೆ ಒಪ್ಪುವ ದೂ ಆ ರೂಪವನ್ನು ಅಲಂಕರಿಸುವ ಹೊಸ ಯೌವನ, ಆ ರಮ್ಯವಾದ ಯೌವನಕ್ಕೆ ತಕ್ಕ ವಿಲಾಸ, ಆ ವಿಲಾಸವನ್ನು ಹೆಚ್ಚಿಸುವ ಜಾಣ್ಮೆ, ಆ ಜಾಣ್ಮೆಯನ್ನು ಒಪ್ಪುಗೊಳಿಸುವ ಸುಗುಣ ಇವೆಲ್ಲವುಗಳಿಂದ ಆ ರಾಜಪುತ್ರಿಯು ಒಪ್ಪುತ್ತಿರುವಳು.

(ಇ) ಸಮುಚ್ಚಯವು— ಸಮುಚ್ಚಯಿಸತಕ್ಕ ಪದಗಳ ತುದಿಗೆ 'ಊ' ಎಂಬ ಅವ್ಯಯವನ್ನು ಜೋಡಿಸಿದರೆ ಶುದ್ಧಸಮುಚ್ಚಯವಾಗುತ್ತದೆ. ಕೆಲವರು ನಿಪಾತವನ್ನು ಇಡದೆ ಪದಗಳನ್ನು ಕೂಡಿಸಿರುತ್ತಾರೆ; ಅದು ಶಿಥಿಲಸಮುಚ್ಚಯವೆನಿಸುತ್ತದೆ. ಉದಾ:

ಶುದ್ಧಸಮುಚ್ಚಯಕ್ಕೆ— ಎಚ್ಚರದಲ್ಲಿಯೂ ಗಾಢನಿದ್ರೆಯಲ್ಲಿಯೂ ದೇವರು ನಿನ್ನ ಕಾಯುತ್ತಾನೆ. ಶುದ್ಧವಾಗಿಯೂ ಸ್ಪಷ್ಟವಾಗಿಯೂ ಕೇಳಿಸುವಂತೆಯೂ ಓದು ಮು.

ಶಿಥಿಲಸಮುಚ್ಚಯವು— ಎಚ್ಚರದಲ್ಲಿ ಕನಸಿನಲ್ಲಿ ಗಾಢನಿದ್ರೆಯಲ್ಲಿ ನಿನ್ನನ್ನು ದೇವರು ಕಾಯುತ್ತಾನೆ. ಶುದ್ಧವಾಗಿ ಸ್ಪಷ್ಟವಾಗಿ ಕೇಳಿಸುವಂತೆ ಓದು.

ಷಷ್ಠ್ಯಂತಪದಗಳನ್ನು ಸಮುಚ್ಚಯಿಸಲಿಕ್ಕೆ ಅವ್ಯಯಗಳು ಬರುವುದಿಲ್ಲ. ಉದಾ: ರಾಮನ ಮಕ್ಕಳನ್ನೂ ಕೃಷ್ಣನ ಮಕ್ಕಳನ್ನೂ ತೋರಿಸು = ರಾಮನ ಕೃಷ್ಣನ* ಮಕ್ಕಳನ್ನು ತೋರಿಸು.

## ಪದಸಮಭಿಹಾರವೆಂದರೆ— ದ್ವಿರುಕ್ತಿ ಬಹೂಕ್ತಿಗಳು.

೩೭೦. ಒಂದೇ ಪದವನ್ನು ಅಥವಾ ವಾಕ್ಯವನ್ನು ಎರಡು ಸಾರೆ ನುಡಿದರೆ ದ್ವಿರುಕ್ತಿಯಾಗುತ್ತದೆ, ಬಹಳ ಸಾರೆ ನುಡಿದರೆ ಬಹೂಕ್ತಿ ಎನಿಸುತ್ತದೆ. ಉದಾ: ರಾಮ ರಾಮ, ನಡೆ ನಡೆ, ಇಲ್ಲ ಇಲ್ಲ ಇಲ್ಲ ಮು.

೩೭೧. ದೂರ, ಸಮೀಪ, ಅಭೀಕ್ಷ್ಣ್ಯ, ವೀಪ್ಸೆ, ಚಾಪಲ್ಯ, ಸಾತತ್ಯ, ಸಾಕಲ್ಯ, ಆಧಿಕ್ಯ, ಆನುಪೂರ್ವಿ, ಅಸೂಯೆ, ಅಸಮ್ಮತಿ, ಕೋಪ, ಕುತ್ಸನ, ಭರ್ತ್ಸನ, ಅನುಗುಣ ಮುಂತಾದ ಅರ್ಥಗಳು ತೋರುವಾಗ ದ್ವಿರುಕ್ತಿ ಬರುತ್ತದೆ.

ಉದಾಹರಣಗಳು:

ದೂರಕ್ಕೆ— ಆಚನೇ ಆಚನೇ ರಾಜ್ಯ, ಅತ್ತತ್ತ ಸರಿ.

ಸಮೀಪಕ್ಕೆ— ಕೆಳಕೆಳಗೆ ನೀರು; ಇತ್ತಿತ್ತ ಬಾ; ಮೇಲೆಮೇಲೆ ಗಾಳಿ.

ಅಭೀಕ್ಷ್ಣ್ಯ (ಎಂದರೆ ಬಹಳ ಸಾರೆ)-ಓದೋದಿ ಬೇಸತ್ತನು; ಆಡಾಡಿ ಕೆಟ್ಟನು.

ವೀಪ್ಸೆ (ಎಂದರೆ ಪ್ರತಿಯೊಂದೆಂಬರ್ಥವು)-ಊರೂರಲ್ಲಿ, ಕೇರಿಕೇರಿಗೆ, ಬಾರಿ ಬಾರಿಗೆ.

ಚಾಪಲ್ಯ (ಎಂದರೆ ಗಡಬಡಿ)— ಒಪ್ಪಿಸೊಪ್ಪಿಸು, ಹಿಡಿ ಹಿಡಿ.

ಸಾತತ್ಯ (ಎಂದರೆ ಒಂದು ಕೆಲಸವು ಅವಕಾಶವಿಲ್ಲದೆ ಸಾಗುವಿಕೆ)— ಬರುತ್ತ ಹೋಗುತ್ತ, ಬರುತ್ತ ಹೋಗುತ್ತ ಇದ್ದಾನೆ.

---

* ಇಂತಹ ಹಳೆಯ ಪ್ರಯೋಗವು— ಜಯಮಿನಿ ೩ನೆಯ ಸಂಧಿ ೬೭ನೆಯ ಪದ್ಯ.

ಆಧಿಕ್ಯ ( ಎಂದರೆ ಎಲ್ಲಾ ಅಥವಾ ಸಾಂಗೋಪಾಂಗವಾಗಿ ಎಂಬರ್ಥ)—ಸವ ಸವನೆಂದು ಸವರಿದನು; ಕುಡಿ ಕುಡಿ ಎಂದು ಕುಡಿದನು; ಎಣಿಸೆಣಿಸೆಂದು ಎಣಿಸಿದನು.

ಆಧಿಕ್ಯ (ಎಂದರೆ ಯಾವದೊಂದರ ಹೆಚ್ಚುವಿಕೆ)—ದೊಡ್ಡ ದೊಡ್ಡ, ಸಣ್ಣ ಸಣ್ಣ

ಆನುಪೂರ್ವಿ (ಎಂದರೆ ಕ್ರಮ)-ಮೊದಮೊದಲು ದಪ್ಪವು, ತುದಿ ತುದಿಗೆ ಸಣ್ಣ

ಅಸೂಯೆ ( ಎಂದರೆ ಗುಣಕ್ಕೆ ದೋಷವೆನ್ನುವುದು )—ಸಾಕ ಸಾಕು, ಏಳೇಳು ಇತ್ಯಾದಿ.

ತ್ವರೆ, ಭಯ ಮುಂತಾದವುಗಳಲ್ಲಿ ಬಹೂಕ್ತಿ ಬರುತ್ತದೆ. ಉದಾ: ತ್ವರೆ—ಸರಿ ಸರಿ ಸರಿ ಸರಿ; ಏಳೇಳೇಳು; ಜಗ್ಗು ಜಗ್ಗು ಜಗ್ಗು; ಭಯ— ಬಂತು ಬಂತು ಬಂತು, ಹುಲಿ ಬಂತು; ಸತ್ತೆ ಸತ್ತೆ, ಸತ್ತೆ ಸತ್ತೆ, ಎಲಾ ಹಾವು ಹಾವು ಹಾವು! ಇ.

## ಸಮುಚ್ಚಾಯಕಾವ್ಯಯಗಳು.

೨೭೨. ಸಮುಚ್ಚಾಯಕಾವ್ಯಯಗಳು ಅನೇಕ ಪದಗಳನ್ನಾಗಲಿ ಅನೇಕ ವಾಕ್ಯಗಳನ್ನಾಗಲಿ ಅನೇಕ ಅರ್ಥಗಳನ್ನಾಗಲಿ ಕೂಡಿಸುತ್ತವೆ.

(ಅ) ಪದಗಳನ್ನು ಕೂಡಿಸುವುದು.

ಉದಾ: ರಾಮನೂ ಕೃಷ್ಣನೂ ಬರುತ್ತಾರೆ; ಸ್ಪಷ್ಟವಾಗಿಯೂ ಕೇಳಿಸುವಂತೆಯೂ ಓದು. ಇಲ್ಲಿ 'ಊ' ನಿಪಾತವು ಪದಗಳನ್ನು ಕೂಡಿಸುವ ಕಾರಣ ಅದು ಸಮುಚ್ಚಾಯಕಾವ್ಯಯವು.

(ಆ) ವಾಕ್ಯಗಳನ್ನು ಕೂಡಿಸುವುದು.

ಉದಾ: ರಾಮನು ಅಡಿಗೆಯು ಮಾಡುತ್ತಾನೆ, ಮತ್ತು ಉತ್ತಮ ಕವಿತ್ವಗಳನ್ನು ರಚಿಸುತ್ತಾನೆ. ಇಲ್ಲಿ 'ಮತ್ತು' ಎಂಬದು ಎರಡು ವಾಕ್ಯಗಳನ್ನು ಕೂಡಿಸುತ್ತದೆ.

(ಇ) ಅರ್ಥಗಳನ್ನು ಕೂಡಿಸುವುದಕ್ಕೆ:

ಉದಾ: ಇದನ್ನು ನೀನಾಗಲಿ ಅವನಾಗಲಿ ಮಾಡಬೇಕು. ಇಲ್ಲಿ ಇಂಥವರೇ ಮಾಡಬೇಕೆಂಬ ನಿಯಮವಿಲ್ಲದ್ದರಿಂದ, ಆಗಲಿ—ಆಗಲಿ ಎಂಬಿವು ವಿಕಲ್ಪಾರ್ಥವನ್ನು ಸೂಚಿಸುತ್ತವೆ.

೨೭೩. ಸಮುಚ್ಚಾಯಕಾವ್ಯಯಗಳ ರೂಪ * ವನ್ನು ನೋಡಿದರೆ, ಅವು ಅವ್ಯಯಗಳು, ಕ್ರಿಯಾರೂಪಗಳು ಅಥವಾ ವಿಭಕ್ತಿರೂಪಗಳು, ನಿಪಾತಗಳು ಎಂದು ಮೂರು ವಿಧವಾಗಿವೆ. ನಿಪಾತಗಳಿಗೆ ಸ್ವತಂತ್ರಾರ್ಥವೂ ಪ್ರಯೋಗವೂ ಇಲ್ಲ. ಅವು ಪದಗಳ ತುದಿಯಲ್ಲಿ ಸೇರಿದರೆ ಮಾತ್ರ ಬೇರೆ ಬೇರೆ ಅರ್ಥವನ್ನು ಹುಟ್ಟಿಸುತ್ತವೆ. ಉಳಿದವುಗಳು ಪದಗಳ ಮುಂದೆ ಬರುತ್ತವೆ. ಇವೆಲ್ಲವುಗಳ (ಅರ್ಥಭೇದ ರೂಪಭೇದ ಈಯೆರಡರ) ಪ್ರಯೋಗವಿವರವು ಹೇಗಂದರೆ:—

---

* ಶಬ್ದವಿಚಾರದಲ್ಲಿ ಅವ್ಯಯಪ್ರಕರಣದ ೧೩೭ನೆಯ ನಿಯಮದ ಉದಾಹರಣೆಗಳನ್ನು ನೋಡು.

(ಅ) 'ಊ—ಊ, ಆದರೂ—ಆದರೂ, ಸಹ, ಸಹಿತ, ಇಲ್ಲವೆ, ಅಲ್ಲವೆ, ಆಗಲಿ—ಆಗಲಿ' ಎಂಬಿವು ಹಲವು ವಿಧದ ಸಮುಚ್ಚಯಾರ್ಥದಲ್ಲಿ ಪದಗಳನ್ನು ಒಂದಕ್ಕೊಂದು ಕೂಡಿಸುವುವು.

ಉದಾ: ಪ್ರೀತಿಯಿಂದಲೂ ಭಕ್ತಿಯಿಂದಲೂ ದೇವರನ್ನು ಸೇವಿಸು; ಉಣ್ಣುವುದಕ್ಕೆ ಮುಂಚೆಯಾಗಲಿ ಉಂಡ ಮೇಲಾಗಲಿ ದೇವರನ್ನು ಸ್ತುತಿಸು; ಕತ್ತಲೆಯಲ್ಲಿ ಅಥವಾ ಏಕಾಂತದಲ್ಲಿ ಚಿಕ್ಕವರು ಅಂಜುತ್ತಾರೆ; ಮನುಷ್ಯನ ಮನಸ್ಸು ಅವನ ನುಡಿಯಿಂದ ಇಲ್ಲವೆ ನಡೆಯಿಂದ ತಿಳಿಯುತ್ತದೆ; ಅರಸು ಸೇನಾಪತಿಯ ಸಹಿತ ಯುದ್ಧಕ್ಕೆ ಹೋದನು; ಅವನು ಇವನು ಸಹ ರಣದಲ್ಲಿ ಸತ್ತರು.

(ಆ) ಆಧಿಕ್ಯಾರ್ಥಕಗಳು—'ಊ' ಆದರೂ, ಕೂಡ, ಸಹ' ಮುಂತಾದುವು ಜೋಡಿಲ್ಲದ ಪದಗಳಿಗೆ ಪರವಾದರೆ, ಆಧಿಕ್ಯಾರ್ಥವನ್ನು ಹುಟ್ಟಿಸುತ್ತದೆ. ಊ, ಆದರೂ ಎಂಬಿವು ಸರ್ವನಾಮಗಳಿಗೂ ಅವುಗಳ ಸಂಬಂಧದ ಕ್ರಿಯಾವಿಶೇಷಣಗಳಿಗೂ ಪರವಾದರೆ ಅವುಗಳ ಅರ್ಥವು ಸಾಮಾನ್ಯವಾಗುತ್ತದೆ. ಇದರ ವಿವರವನ್ನು ಸರ್ವನಾಮಪ್ರಕರಣದಲ್ಲಿ ಹೇಳಿದ್ದೇವೆ.

ಉದಾ: ಹಿರಿಯರು ಸಹ ದುರ್ಮಾರ್ಗಿಗಳಾದರೆ ಚಿಕ್ಕವರಿಗೆ ಸನ್ಮಾರ್ಗವೆಲ್ಲಿಂದ ಬರಬೇಕು? ಗುರುಗಳೂ ಪಾಪಕ್ಕಂಜದಿದ್ದರೆ ಶಿಷ್ಯರು ಹೇಗೆ ಅಂಜುವರು? ಬುದ್ಧಿಗೇಳದವನನ್ನು ದೇವರು ಕೂಡ ರಕ್ಷಿಸಲಾರನು; ಋಷಿಗಳಿಂದಾದರೂ ಗರ್ವವನ್ನು ಗೆಲ್ಲುವುದಾಗದು; ದೇವರಿಗೆ ತಿಳಿಯದ್ದು ಒಂದೂ ಇಲ್ಲ.

(ಇ) ನಿಷೇಧಾರ್ಥಗಳು—'ಅಲ್ಲದೆ, ಹೊರತು, ಹೊರತಾಗಿ' ಎಂಬವು ನಿಷೇಧಾರ್ಥದಲ್ಲಿ ಪೂರ್ವಪದಕ್ಕೆ ಉತ್ತರಪದವನ್ನು ಎದುರಿಟ್ಟು ಸಮುಚ್ಚಯ ಮಾಡುವುವು.

ಉದಾ: ಪಾಪಿಗಳಿಗೆ ನರಕವಲ್ಲದೆ ಮೋಕ್ಷವಿಲ್ಲ; ಆತನ ವಾಕ್ಯವೇ ಹೊರತು ನಮಗೆ ಬೇರೆ ಶಾಸ್ತ್ರವಿಲ್ಲ; ನಾವು ಬೇಡಿದ ಹೊರತಾಗಿ ದೇವರು ಕೊಡನು.

(ಈ) ನಿಪಾತಗಳು—'ಆ' ನಿಪಾತವು ಮಧ್ಯಮಪುರುಷದ ಕ್ರಿಯಾಪದದ ಮೇಲೆ ಬಂದರೆ ಪ್ರಶ್ನಾರ್ಥ ಹುಟ್ಟುತ್ತದೆ.--ಬಂದೆಯಾ? ಮಾಡುತ್ತೀಯಾ? ಬಂದಿರಾ? ಮಾಡುವಿರಾ?

'ಏ' ನಿಪಾತವು ಪ್ರಶ್ನೆ, ಸಂಬೋಧನ, ವಿರೋಧ, ವ್ಯವಚ್ಛೇದ ಮುಂತಾದ ಅರ್ಥಗಳಲ್ಲಿ ಬರುತ್ತದೆ. ಉದಾ:

ಪ್ರಶ್ನಕ್ಕೆ—ಇವನು ರಾಮನೇ? ಅವನು ಹೋದನೇ? ಇದು ಒಳ್ಳೇದೇ?

ಸಂಬೋಧನಕ್ಕೆ—ಮಗನೇ ಬಾ!

ವಿರೋಧಕ್ಕೆ—ರಾಮಾ, ಕೆಲಸವ ಹೇಳಿದರೆ ನಿನಗೇ ಹೇಳಬೇಕು ನೋಡು.

ವ್ಯವಚ್ಛೇದವೆಂದರೆ ನಿಶ್ಚಯ. ಇದು ಮೂರು ವಿಧವಾಗಿದೆ, (೧) ಅನ್ಯಯೋಗವ್ಯವಚ್ಛೇದ. (೨) ಅಯೋಗವ್ಯವಚ್ಛೇದ, (೩) ಅತ್ಯಂತಾಯೋಗ ವ್ಯವಚ್ಛೇದ

(೧) ಏಕಾರವು ವಿಶೇಷ್ಯಕ್ಕೆ ಹತ್ತಿದರೆ ಅನ್ಯಯೋಗವ್ಯವಚ್ಛೇದವಾಗುತ್ತದೆ. ಎಂದರೆ ಅಂತಹ ಅನ್ಯವಸ್ತುಗಳ ಯೋಗವು ಇಲ್ಲೆಂಬರ್ಥವಾಗುತ್ತದೆ.

ಉದಾ: ಪಾರ್ಥನೇ ಧನುರ್ಧರನು.

(೨) ಏಕಾರವು ವಿಶೇಷಣಕ್ಕೆ ಹತ್ತಿದರೆ ಅಯೋಗವ್ಯವಚ್ಛೇದವಾಗುತ್ತದೆ. ಎಂದರೆ ಅಂತಹ ಅನ್ಯವಸ್ತುಗಳ ಅಯೋಗವು ಇಲ್ಲೆಂದು ಅರ್ಥವಾಗುತ್ತದೆ; ಅಥವಾ ಅಂತಹ ಅನ್ಯ ವಸ್ತುಗಳು ಉಂಟೆಂದು ಅರ್ಥವಾಗುತ್ತದೆ.

ಉದಾ: ಪಾರ್ಥನು ಧನುರ್ಧರನೇ.

(೩) ಏಕಾರವು ಕ್ರಿಯೆಗೆ ಸೇರಿದರೆ ಅತ್ಯಂತಾಯೋಗವ್ಯವಚ್ಛೇದವಾಗುತ್ತದೆ, ಎಂದರೆ ಒಂದು ವಸ್ತು ಇಲ್ಲವೇ ಇಲ್ಲೆಂಬ ಮಾತು ನಿಷಿದ್ಧವಾಗುತ್ತದೆ. ಈ ಪ್ರಯೋಗದಲ್ಲಿ ಕ್ರಿಯಾಪದದ ಹಿಂದೆ ಅದೇ ಕ್ರಿಯೆಯ ಭೂತನ್ಯೂನವನ್ನಿಟ್ಟು ಅದಕ್ಕೆ ಏಕಾರವನ್ನು ಸೇರಿಸಬೇಕು.

ಉದಾ: ಕನ್ನಡಿಯಲು ಸಿಕ್ಕೇಸಿಕ್ಕುತ್ತದೆ; ಜ್ಞಾನಿಗಳು ವಿಷಯಸುಖವನ್ನು ಬಿಟ್ಟೇ ಬಿಡುತ್ತಾರೆ.

(೪) ಬೇಕು, ಬೇಡ, ಅಲ್ಲ, ಇಲ್ಲ ಮುಂತಾದ ಅವ್ಯಯ ಕ್ರಿಯಾಪದಗಳಿಗೆ ಏಕಾರವು ನಿಶ್ಚಯಾರ್ಥದಲ್ಲಿ ಹತ್ತುವುದು.

ಉದಾ: ಸೃಷ್ಟಿಯಲ್ಲಿ ಅಯೋಗ್ಯವಾದವುಗಳು ಇಲ್ಲೇ ಇಲ್ಲ; ಅನ್ಯಾಯದ ಹಣವು ನಮಗೆ ಬೇಡೇ ಬೇಡ.

ಓ ನಿಪಾತವು-ಪ್ರಶ್ನೆ, ಸಂದೇಹ ಮುಂತಾದರ್ಥಗಳಲ್ಲಿ ಬರುತ್ತದೆ. ಉದಾ:

ಪ್ರಶ್ನೆಕ್ಕೆ—ಬಂದವನು ಅವನೋ ಇವನೋ? ಕೆಲಸವ ಮಾಡಿದನೋ? ಊರಿಗೆ ಹೋದನೋ?

ಸಂದೇಹಕ್ಕೆ—ಯಾರೋ, ಏನೋ.

## ವಾಕ್ಯಸಮುಚ್ಚಯ

೨೭೪. ಅರ್ಥದಿಂದ ಒಂದಕ್ಕೊಂದು ಸಂಬಂಧಿಸಿರುವ ವಾಕ್ಯಗಳನ್ನು ಕೂಡಿಸುವುದೇ ವಾಕ್ಯಸಮುಚ್ಚಯವೆನಿಸುತ್ತದೆ.

೨೭೫. ಸ್ವತಂತ್ರವಾಕ್ಯಗಳು: ವಾಕ್ಯಗಳು ಎರಡು ವಿಧವಾಗಿವೆ—(೧) ಸಾಪೇಕ್ಷ, (೨) ನಿರಪೇಕ್ಷ. ನಿರಪೇಕ್ಷ ವಾಕ್ಯಗಳ ಸಮುಚ್ಚಯವಾಗುವುದಿಲ್ಲ ವಾದುದರಿಂದ ಅವುಗಳಿಗೆ ಸ್ವತಂತ್ರವಾಕ್ಯಗಳೆನ್ನಬಹುದು.

ಉದಾ: ಸೂರ್ಯನು ಪ್ರಕಾಶಿಸುತ್ತಾನೆ. ನಾನು ನಿಮ್ಮಲ್ಲಿಗೆ ಬರುವುದಿಲ್ಲ—ಇತ್ಯಾದಿ.

ಸಾಪೇಕ್ಷವಾಕ್ಯಗಳು: ಒಂದೇ ವಸ್ತುವಿನ ಅಥವಾ ಹಲವು ವಸ್ತುಗಳ ವಿಷಯಕ್ಕೆ ಪರಸ್ಪರಸಂಬಂಧವುಳ್ಳ ಬೇರೆ ಬೇರೆ ಆಲೋಚನೆಗಳನ್ನು ಹೇಳುವ ಪೂರ್ಣವಾಕ್ಯಗಳಿಗೆ ಸಾಪೇಕ್ಷವಾಕ್ಯಗಳೆಂಬ* ಹೆಸರು. ಉದಾ:

ಒಂದೇ ವಸ್ತುವಿಗೆ— ಸೂರ್ಯನು ಪ್ರಕಾಶಿಸುತ್ತಾನೆ; ಆತನ ಕಿರಣಗಳಿಂದ ನಮಗೆ ಕಾವು ದೊರೆಯುತ್ತದೆ; ಕಾವಿನಿಂದ ನಮ್ಮ ಆಹಾರಗಳಲ್ಲಿ ಮಾಧುರ್ಯ ಹುಟ್ಟುತ್ತದೆ.

ಭಿನ್ನವಸ್ತುವಿಗೆ—ಸಜ್ಜನರು ಬದುಕಿದ್ದರೆ ಜನರಿಗೆ ಸುಖ ಕೊಡುತ್ತಾರೆ; (ಆದರೆ) ದುರ್ಜನರು ಸತ್ತರೆ ಜನರಿಗೆ ಸುಖ ಕೊಡುತ್ತಾರೆ. ಮು.

ಇಂತಹ ವಾಕ್ಯಗಳನ್ನು ಅನೇಕ ವಿಧವಾಗಿ ಸಮುಚ್ಚಯಮಾಡಬಹುದು.

## ಸಾಪೇಕ್ಷವಾಕ್ಯಸಮುಚ್ಚಯ.

೨೭೬. ವಾಕ್ಯಗಳ ಸಂಬಂಧವನ್ನು ತೋರಿಸುವುದಕ್ಕಾಗಿ ನಾಲ್ಕು ವಿಧದ ವಾಕ್ಯಸಮುಚ್ಚಾಯಕ ಪದಗಳು ಪ್ರಯೋಗಿಸಲ್ಪಡುತ್ತವೆ. ಯಾವುವೆಂದರೆ—

(ಅ) ಪೂರ್ವವಾಕ್ಯಕ್ಕೆ ಪರವಾಕ್ಯವನ್ನು ಜೋಡಿಸುವಂತಹವು- ಮತ್ತು, ಹಾಗು, ಇನ್ನು, ಆ ಮೇಲೆ, ಬಳಿಕ, ತರುವಾಯ, ಕಡೆಗೆ, ಇದಲ್ಲದೆ ಮು.

ಉದಾ:—ಪ್ರಾಣಿಗಳು ಉಸುರಾಡಿಸುತ್ತವೆ, ಮತ್ತು ನೀರು ಕುಡಿಯುತ್ತವೆ, ಹಾಗು ಸಂಚರಿಸುತ್ತವೆ. ಮನುಷ್ಯರು ಹುಟ್ಟಿದಾಗ ಮಲಗುವರು, ಆ ಮೇಲೆ ಕೂತುಕೊಳ್ಳುವರು, ಬಳಿಕ ಅಂಬೆಗಾಲಿಡುವರು, ತರುವಾಯ ನಡೆದಾಡುವರು, ಆಲ್ಲಿಂದ ಅಕ್ಷರಾಭ್ಯಾಸ ಮಾಡುವರು, ಆ ಮೇಲೆ ಒಂದು ಉದ್ಯೋಗ ನಡಿಸುವರು, ಕಡೆಗೆ ಸಾಯುವರು. ಪಶುಗಳು ಮನುಷ್ಯರಿಗೆ ಹಾಲು ಕೊಡುತ್ತವೆ, ಇದಲ್ಲದೆ ನೇಗಿಲು ಬಂಡಿ ಮುಂತಾದವುಗಳನ್ನು ಎಳೆಯುತ್ತವೆ, ಮತ್ತು ಭಾರವನ್ನು ಹೊತ್ತುಕೊಂಡು ಹೋಗುತ್ತವೆ ಮು.

* ಒಂದಕ್ಕೊಂದು ಅರ್ಥ ಸಂಬಂಧವಿಲ್ಲದ ವಾಕ್ಯಗಳು ನಿರಪೇಕ್ಷ ಸ್ವತಂತ್ರ ವಾಕ್ಯಗಳು; ಇವುಗಳನ್ನು ಕೂಡಿಸಲಿಕ್ಕೆ ಬರುವುದಿಲ್ಲ. ಉದಾ: ದೇವರು ಲೋಕವನ್ನು ರಕ್ಷಿಸುತ್ತಾನೆ; ಬಾಣಸಿಗನು ಅಡಿಗೆಯ ಮಾಡುತ್ತಾನೆ.

(ಆ) ಪೂರ್ವವಾಕ್ಯಕ್ಕೆ ಪರವಾಕ್ಯವನ್ನು ಎದುರಿಡುವಂತಹವು ಎಂದ
ವಿರುದ್ಧಾರ್ಥದ ಎರಡು ವಾಕ್ಯಗಳನ್ನು ಕೂಡಿಸುವಂತಹವು. ಇವಕ್ಕೆ
ಪ್ರತಿಪಕ್ಷಾರ್ಥ ಸಮುಚ್ಚಾಯಕಗಳೆಂಬ ಹೆಸರು.

ಆದರೆ, * ಆದರೂ, ಆದಾಗ್ಯೂ, ಇದ್ದರೂ, ಇದ್ದಾಗ್ಯೂ, ಅಲ್ಲ
ಹೊರತು, ಇಲ್ಲವೆ, ಅಲ್ಲವೆ ಮು.

ಉದಾ: ಅನೇಕರಿಗೆ ಒಳ್ಳೇ ಉಪಾಯ ತಿಳಿಯುವದು; ಆದರೆ ಅದನ್ನು ನಡಿಸು
ಸಾಮರ್ಥ್ಯವಿರುವದಿಲ್ಲ. ಉಪಾಧ್ಯಾಯನು ಪಾಠವನ್ನು ಚೆನ್ನಾಗಿ ಹೇಳಿದನು; ಆದ
ವಿದ್ಯಾರ್ಥಿಯು ಗ್ರಹಿಸಲಿಲ್ಲ. ಹಾಲು ಮೊಸರಾಗುವುದಲ್ಲದೆ ಮೊಸರು ಹಾಲಾದೀತೇ
ಸದ್ವಿಶ್ವಾಸಕ್ಕೆ ದೇವರು ಮೆಚ್ಚುವನು ಹೊರತು ಮತ್ತೇನು ಮಾಡಿದರೂ ಮೆಚ್ಚ
ಅರಸಾ, ನಿನಗೆ ಪರಾಕ್ರಮವಿದ್ದರೆ ಸಿಂಹಾಸನವನ್ನೇರು, ಇಲ್ಲವೆ ಬೇಡ ಮು.

(ಇ) ಪೂರ್ವವಾಕ್ಯವು ಪರವಾಕ್ಯಕ್ಕೆ ಕಾರಣ ಅಥವಾ ಹೇತುವೆಂದು
ಹೇಳುವಂತಹವು—ಆದುದರಿಂದ, ಕಾರಣ, ಆದಕಾರಣ, ಹೀಗಿರಲಾಗಿ
ಅದರಿಂದ, ಹಾಗಾದರೆ ಮು.

ಉದಾ: ಮನುಷ್ಯರು ಪಾಪದಲ್ಲಿ ಬಿದ್ದರು, ಆದಕಾರಣ ಇಷ್ಟು ಕಷ್ಟಬಡುತ್ತಾ
ಜೀವವು ಸ್ಥಿರವಲ್ಲ, ಆದುದರಿಂದ ಮುಂದಿನ ಕಾರ್ಯವನ್ನು ಚಿಂತಿಸು; ಅವನು ಮ
ಯನ್ನು ಪೀಡಿಸುವನು, ಆದರಿಂದ ಸರಕಾರದವರು ಅವನನ್ನು ಸೆರೆಹಾಕಿದ್ದಾರೆ.

(ಈ) ಪೂರ್ವವಾಕ್ಯಕ್ಕೆ ಪರವಾಕ್ಯವು ವಿವರವೆಂದು ಹೇಳುವಂತಹವು—
ಎಂದರೆ, ಏನಂದರೆ, ಹೇಗಂದರೆ ಮು.

ಉದಾ: ಮನುಷ್ಯರು ಮರ್ತ್ಯರು ಎಂದರೆ ಅವರು ಸಾಯುವರು. ಪರರನ್ನು ಪೀ
ಸುವ ಗುಣವು ಕೆಲವರಲ್ಲಿ ಬಹಳ ಇರುತ್ತದೆ; ಏಕೆಂದರೆ ಪಾಪ ಪುಣ್ಯಗಳ ವಿಚಾರ
ಲೋಕಾಪವಾದದ ಭಯವೂ ಅವರಿಗಿಲ್ಲ. ಪಾಪಿಗಳ ಮೇಲೆ ದೇವರ ಕೋಪವು ಬ
ವಾಗಿದೆ; ಹೇಗಂದರೆ ಅವರಿಗೆ ಒಳಗೆ ಹೊರಗೆ ಸಮಾಧಾನವಿಲ್ಲ; ಮತ್ತು ಅವರು ಅನೇ
ವ್ಯಸನೋಪದ್ರವಗಳಿಂದ ಕಷ್ಟಬಡುತ್ತಾರೆ.

(ಉ) ಪೂರ್ವವಾಕ್ಯಕ್ಕೆ ಪರವಾಕ್ಯವು ಕಾರಣವೆಂದು ಹೇಳುವಂತಹವು—
ಏತಕ್ಕೆಂದರೆ, ಏಕೆಂದರೆ, ಏನು ಕಾರಣವೆಂದರೆ ಮು.

ಉದಾ: ದುಷ್ಟರು ನಿರಪರಾಧಿಗಳನ್ನು ಕೆಡಿಸುತ್ತಾರೆ; ಏಕೆಂದರೆ ಅವರು ಸ್ವಾ
ವನ್ನು ಸಾಧಿಸುವದೇ ಪೌರುಷವೆಂದು ತಿಳಿಯುತ್ತಾರೆ,

---

* ಆದರೆ ಎಂಬುದು ಪಕ್ಷಾರ್ಥಕ ಪೂರ್ವವಾಕ್ಯವನ್ನು ಪರವಾಕ್ಯಕ್ಕೆ ಕೂಡಿಸುವುದು
ಆಗ ಆದರೆ ಎಂಬುದು ಪಕ್ಷಾರ್ಥಕ ಸಮುಚ್ಚಾಯಕಾವ್ಯಯವೆನಿಸುತ್ತದೆ. ಪಕ್ಷಾರ್ಥವೆಂದ
ಪೂರ್ವವಾಕ್ಯದಲ್ಲಿ ಹೇಳಿದ ಕ್ರಿಯೆ ಸಂಭವಿಸಿದರೆ ಉತ್ತರವಾಕ್ಯದ ಕ್ರಿಯೆ ನಡೆಯುವುದು
ಎಂದು ಹೇಳುವದು. ಉದಾ: ಮಳೆಯಾದರೆ ಹೊಲ ಬೆಳೆಯುವುದು ಮು.

ವಾಕ್ಯಗಳನ್ನು ಇನ್ನೊಂದು ಬಗೆಯಿಂದ ಕೂಡಿಸಬಹುದು. ಹೇಗಂದರೆ– ಪೂರ್ವವಾಕ್ಯದೊಳಗಿನ ಯಾವ ಪದದ ಸಂಬಂಧವು ಪರವಾಕ್ಯಕ್ಕೆ ಉಂಟೋ [ಆ] ಪದವನ್ನು ಪರವಾಕ್ಯದ ಪ್ರಾರಂಭದಲ್ಲಿ ಬರೆದರೆ ಪೂರ್ವೋತ್ತರ ವಾಕ್ಯಗಳು [ಕೂ]ಡಿಕೊಳ್ಳುತ್ತವೆ. ಸಮುಚ್ಚಾಯಕಾವ್ಯಯಗಳು ಬೇಕಾಗುವುದಿಲ್ಲ.

ಉದಾ: ಸೂರ್ಯನು ಪ್ರಕಾಶಿಸುತ್ತಾನೆ, ಪ್ರಕಾಶದಿಂದ ಕಾವು ಉಂಟಾಗುತ್ತದೆ. [ಕಾ]ವಿನಿಂದ ಫಲಗಳಲ್ಲಿ ಮಾಧುರ್ಯ ಹುಟ್ಟುತ್ತದೆ.

## ಉಪವಾಕ್ಯಸಮುಚ್ಚಯವು.

೨೭೭. ಸಂಪೂರ್ಣಾಲೋಚನೆಯನ್ನು ಹೇಳದೆ ಮತ್ತೊಂದು ವಾಕ್ಯದ [ಕಾ]ರಕಪದದ ಸ್ಥಳದಲ್ಲಿ ಅಥವಾ ಕ್ರಿಯಾವಿಶೇಷಣದ ಸ್ಥಳದಲ್ಲಿ ಸೇರುವ ವಾಕ್ಯಕ್ಕೆ ಉಪವಾಕ್ಯವೆಂಬ ಹೆಸರು. ಏಕಂದರೆ, ಇಂತಹ ವಾಕ್ಯವು ಸ್ವತಂತ್ರ[ವಾ]ಗಿರದೆ ಮತ್ತೊಂದು ವಾಕ್ಯಕ್ಕೆ ಅಧೀನವಾಗಿರುತ್ತದೆ. ಉಪವಾಕ್ಯವನ್ನು [ತ]ನ್ನೊಳಗೆ ಸಂಗ್ರಹಿಸುವ ವಾಕ್ಯಕ್ಕೆ ಪ್ರಧಾನವಾಕ್ಯವೆಂಬ ಹೆಸರು.

೨೭೮. ಉಪವಾಕ್ಯಗಳು ಎರಡು ವಿಧ: (ಅ) ಅಪೂರ್ಣೋಪವಾಕ್ಯ. (ಆ) ಪೂರ್ಣೋಪವಾಕ್ಯ.

(ಅ) ಉಪವಾಕ್ಯಗಳ ಕಡೆಯಲ್ಲಿ ಕ್ರಿಯಾಪದಗಳಿದ್ದರೆ ಅವು [ಪೂ]ರ್ಣೋಪವಾಕ್ಯಗಳು.

ಉದಾ: ಸದಾಚರಣದಿಂದ ಸುಖವಾಗುವುದು, ಎಂಬ ಸಿದ್ಧಾಂತವು ಅನುಭವಸಿದ್ಧ[ವಾ]ಗಿದೆ, ಯಾವನು ಉದ್ಯೋಗ ಮಾಡುವನೋ ಅವನು ಸುಖಪಡುತ್ತಾನೆ. ಇಲ್ಲಿ "[ಸದಾ]ಚರಣದಿಂದ ಸುಖವಾಗುವುದು" ಎಂಬದೂ "ಯಾವನು ಉದ್ಯೋಗ ಮಾಡು[ವ]ನೋ" ಎಂಬುದೂ ಪೂರ್ಣ ಉಪವಾಕ್ಯಗಳಾಗಿವೆ. ಏಕಂದರೆ ಅವು ಮುಂದಿನ ಪ್ರಧಾನ[ವಾ]ಕ್ಯಗಳಿಗೆ ಅಧೀನವಾಗಿವೆ, ಮತ್ತು ಪೂರ್ಣವಾಗಿವೆ.

(ಅ) ಅಪೂರ್ಣೋಪವಾಕ್ಯಗಳ ಕಡೆಗೆ ಕ್ರಿಯಾಪದಗಳಿರುವುದಿಲ್ಲ; [ಅ]ಪೂರ್ಣಕ್ರಿಯೆಯನ್ನು ಹೇಳುವಂತಹ ಕೃದಂತ, ಕ್ರಿಯಾನಾಮ, ಕ್ರಿಯಾ[illegible] ಇವುಗಳಲ್ಲಿ ಯಾವುದಾದರೂ ಒಂದು ಇರುತ್ತದೆ.

ಉದಾ: ಹೋದವರ್ಷ ನಮಗೆ ಉಪಕಾರ ಮಾಡಿದಮನುಷ್ಯನು ಈಗ ಇಲ್ಲಿಗೆ ಬಂದಿ[ದ್ದಾ]ನೆ. ಇಲ್ಲಿ "ಹೋದವರ್ಷ ನಮಗೆ ಉಪಕಾರ ಮಾಡಿದ" ಎಂಬುದು ಅಪೂರ್ಣೋಪ[ವಾ]ಕ್ಯವಾಗಿದೆ.

## ಅಪೂರ್ಣೋಪವಾಕ್ಯಸಮುಚ್ಚಯ

೨೭೯. ಅಪೂರ್ಣೋಪವಾಕ್ಯಗಳ ಸಮುಚ್ಚಯಕ್ಕೆ ಬಹುಶಃ ಬೇರೆ ಸಮುಚ್ಚಾಯಕಗಳು ಬೇಕಾಗುವುದಿಲ್ಲ. ಅವುಗಳ ಕೊನೆಯಲ್ಲಿ ಒಂದು

ಅಪೂರ್ಣಕ್ರಿಯೆಯನ್ನು ಹೇಳುವ ಕೃದಂತ-ಕ್ರಿಯಾನಾಮಾದಿಗಳಿಂದಲೇ ಅವು ಪ್ರಧಾನವಾಕ್ಯಕ್ಕೆ ಜೋಡಿಸಲ್ಪಡುತ್ತವೆ.

ಉದಾ:

ಕೃದಂತ–ತಂದೆ ಹೇಳಿದ ಕಾರಣ ಮಗನು ಮಾಡಿದನು; ಮನುಷ್ಯನು ಉದ್ಯೋಗ ಮಾಡುವನಾದಕಾರಣ ಸುಖಪಡುತ್ತಾನೆ.

ನ್ಯೂನ—ನಾನು ಕೆಲಸ ಮಾಡಿ, ಬೇಸತ್ತು ಹೋಗಿದ್ದೇನೆ. ರಾವಣನು ಸೀತೆಯನ್ನು ಕದ್ದೊಯ್ಯಲು, ರಾಮನು ಅವನನ್ನು ಕೊಂದನು ಮು.

ಕ್ರಿಯಾನಾಮ—ದೇವರು ಲೋಕವ ನಿರ್ಮಿಸಿದ್ದನ್ನು ಯಾರೂ ನೋಡಿಲ್ಲ.

(ಆ) ಉಪವಾಕ್ಯಕ್ಕೂ ಪ್ರಧಾನವಾಕ್ಯಕ್ಕೂ ಒಬ್ಬನೇ ಕರ್ತೃವಾದ್ದರೆ ಪ್ರಧಾನವಾಕ್ಯದಲ್ಲಿ ಕರ್ತೃವನ್ನು ಸೂಚಿಸುವ ಸರ್ವನಾಮಕ್ಕೆ ವಿಕಲ್ಪದಿಂದ ಲೋಪ ಬರುತ್ತದೆ.

ಉದಾ: ಕೋಣ ಬೆಳೆದರೆ (ಅದು) ಆನೆಯಾಗುವುದೇ ? ಮು.

## ಪೂರ್ಣೋಪವಾಕ್ಯಸಮುಚ್ಚಯವು.

೨೮೦. ಪೂರ್ಣೋಪವಾಕ್ಯಗಳು ಎರಡು ವಿಧವಾಗಿವೆ. ಸಂಬದ್ಧೋಪವಾಕ್ಯ, ಸೂಚಿತೋಪವಾಕ್ಯ. ಇವುಗಳ ಲಕ್ಷಣಗಳು:—

(ಅ) ಸಂಬಂಧಕ ಶಬ್ದಗಳಿಂದ ಕೂಡಿಸಲ್ಪಡುವ ಉಪವಾಕ್ಯಗಳೇ ಸಂಬದ್ಧೋಪವಾಕ್ಯಗಳು.

(ಆ) 'ಎನ್ನು' ಎಂಬರ್ಥದ ಧಾತುಗಳ ರೂಪಗಳಿಂದ ಪ್ರಧಾನವಾಕ್ಯಕ್ಕೆ ಜೋಡಿಸಲ್ಪಡುವ ಉಪವಾಕ್ಯಗಳೇ ಸೂಚಿತೋಪವಾಕ್ಯಗಳು (ಇವುಗಳ ಉದಾಹರಣಗಳನ್ನು ಮುಂದಿನ ನಿಯಮಗಳಲ್ಲಿ ನೋಡಿರಿ.)

೨೮೧. ಸಂಬದ್ಧೋಪವಾಕ್ಯಸಮುಚ್ಚಯವು-ಉಪವಾಕ್ಯದಲ್ಲಿ ತಕ್ಕಂತೆ ಪ್ರಶ್ನಾರ್ಥಕ ಶಬ್ದವನ್ನೂ ಪ್ರಧಾನವಾಕ್ಯದ ಆದಿಯಲ್ಲಿ ಆ ಪ್ರಶ್ನೆಗೆ ತಕ್ಕಂತೆ ನಿದರ್ಶಕ ಶಬ್ದವನ್ನೂ ಸೇರಿಸುವುದರಿಂದ ಸಂಬದ್ಧೋಪವಾಕ್ಯಗಳು ಪ್ರಧಾನವಾಕ್ಯಕ್ಕೆ ಕೂಡುವುವು.* ಈ ಪ್ರಯೋಗದಲ್ಲಿ ಉಪವಾಕ್ಯದ ಕಡೆಯಲ್ಲಿ 'ಓ' ನಿಪಾತವು ಸೇರುತ್ತದೆ.

ಉದಾ: ನಿನ್ನ ಸಂಗಡ ಅನ್ಯರು ಹೇಗೆ ವರ್ತಿಸಬೇಕೋ ಹಾಗೆ ಅನ್ಯರ ಸಂಗಡ ನೀನು ನಡೆಕೋ! ಯಾವನು ಸತ್ಕಾರ್ಯಗಳನ್ನು ಮಾಡುವನೋ ಅವನು ಸುಖಪಡುತ್ತಾನೆ.

---

* ಅಂದರೆ ಸಂಬಂಧಿಸರ್ವನಾಮ ವಿಶೇಷಣ ಅವ್ಯಯಗಳಲ್ಲಿ ಯಾವುದಾದರೂ ಒಂದರಿಂದ ಸಂಬದ್ಧೋಪವಾಕ್ಯಗಳು ಪ್ರಧಾನವಾಕ್ಯಕ್ಕೆ ಕೂಡಿಸಲ್ಪಡುತ್ತವೆ.

ವಿಕಲ್ಪವಾಗಿ ಸಂಬದ್ಧೋಪವಾಕ್ಯಗಳಿಗೆ ಕೃದಂತಗಳ ರೂಪವ ಕೊಟ್ಟು, ಅವನ್ನು ಪ್ರಧಾನವಾಕ್ಯಗಳಿಗೆ ಕೂಡಿಸುವರು. ಈ ಪದ್ಧತಿಯ ವ್ಯಾಪ್ತಿ ಬಹಳವಿದೆ.

ಉದಾ: ಜನರು ನಿನ್ನ ಕೂಡ ನಡಕೊಳ್ಳಬೇಕೆಂದು ನೀನು ಇಚ್ಛಿಸುವಂತೆ, ಅವರ ಕೂಡ ನಡಕೋ; ಸತ್ಕಾರ್ಯಗಳನ್ನು ಮಾಡುವವನು ಸುಖಪಡುತ್ತಾನೆ.

ಉಪವಾಕ್ಯಗಳು ಹಲವು ಇದ್ದರೆ ಅವುಗಳ ಕಡೆಯಲ್ಲಿ 'ಓ' ನಿಪಾತವನ್ನು ಸೇರಿಸದೆ ಪ್ರಶ್ನವಾಕ್ಯಗಳಂತೆ ಬರೆದು, ಪ್ರಧಾನವಾಕ್ಯದ ಆದಿಯಲ್ಲಿ ನಿದರ್ಶಕ ಶಬ್ದವನ್ನು ಇಡುತ್ತಾರೆ. ಈ ಪದ್ಧತಿಯು ವಿರಳವಾಗಿದೆ.

ಉದಾ: ಮಾಮಾ ಈಪೊತ್ತು ನೀನು ಯಾವ ಸೇನಾಪತಿಯ ಸಂಗಡ ರಣಕ್ಕೆ ಹೋದೆ? ಯುದ್ಧ ಮಾಡಬೇಕೆಂಬ ಶೂರರ ತೋಳ ತಿಂಡಿಯನ್ನು ಯಾರು ಬಿಡಿಸುತ್ತಿದ್ದರು? ಯಾವಾಗಲೂ ಮನೋಹರವಾದ ವಿನೋದಗಳನ್ನು ನೀನು ಯಾರ ಕೂಡ ಆಡುತ್ತಿದ್ದೆ? ನಿನ್ನ ತಂಗಿಗೆ ಉತ್ತಮ ಪತಿಯು ಯಾವನಾಗಿದ್ದನು? ಅಂಥ ನಮ್ಮ ತಂದೆಯನ್ನು ಎಲ್ಲಿ ಬಿಟ್ಟು ಬಂದೆ? ಹೇಳು.

## ಸೂಚಿತೋಪವಾಕ್ಯಸಮುಚ್ಚಯವು.

೨೮೨. (ಅ) 'ಹೇಳು, ನುಡಿ' ಮುಂತಾದ ವಚನಾರ್ಥಕ, 'ತಿಳಿ, ಕಾಣು' ಮುಂತಾದ ಜ್ಞಾನಾರ್ಥಕ, 'ಬೇಡು, ಅಜ್ಞಾಪಿಸು' ಮುಂತಾದ ಇಚ್ಛಾರ್ಥಕ ಧಾತುಗಳ ವಿಷಯಗಳಾದ ಆಖ್ಯಾತಕ್ರಿಯೆಗಳನ್ನು ಪ್ರಧಾನವಾಕ್ಯಗಳಲ್ಲಿ ಸೇರಿಸಿ ಸೂಚಿಸುವುದಕ್ಕೆ 'ಎಂದು' ಎಂಬ ನ್ಯೂನರೂಪಗಳು ಪ್ರಯೋಗಿಸಲ್ಪಡುವುವು.

ಉದಾ: ದೇವರು ಎಲ್ಲಿ? ಎಂದು ಕೇಳುವ ಅವಿಶ್ವಾಸಿಗಳು ಅನೇಕರಿದ್ದಾರೆ. ಆದರೂ ದೇವರು ಇದ್ದಾನೆಂದು ದೆವ್ವಗಳು ಸಹ ಬಲ್ಲವು.

(ಆ) ಮಾತು, ಆಲೋಚನೆ, ಅಪೇಕ್ಷೆ ಮುಂತಾದ ವಚನಾರ್ಥಕ ಜ್ಞಾನಾರ್ಥಕ, ಇಚ್ಛಾರ್ಥಕ ನಾಮಪದಗಳ ವಿವರವಾದ ಆಖ್ಯಾತಕ್ರಿಯೆಯಗಳನ್ನು—'ಎಂಬ' ಈ ಕೃದಂತವನ್ನು ಆ ನಾಮಪದಗಳ ಪೂರ್ವದಲ್ಲಿ ಸೇರಿಸಿ ಸೂಚಿಸುವುದುಂಟು.

ಉದಾ: ಪರದ್ರವ್ಯವ ಅಶಿಸಬಾರದು ಎಂಬ ನೀತಿವಾಕ್ಯವು ಎಲ್ಲರ ಬಾಯಲ್ಲಿ ಇರುತ್ತದೆ; ಆದರೆ, ಆದರಂತೆ ನಡೆಯುವವರು ಕಡಿಮೆ; ಯಾಕೆಂದರೆ ತಾವು ಸುಖಪಡಬೇಕೆಂಬ ಭ್ರಮೆ ದೊಡ್ಡದು; ಅದರಿಂದ ಕೆಡುತ್ತೇವೆಂಬ ಭಯವು ಕೆಲವರಿಗೆ ಮಾತ್ರ ಇರುತ್ತದೆ.

(ಇ) 'ಎಂಬುದು' ಈ ನಾಮಪದದಿಂದ ಜೋಡಿಸಲ್ಪಟ್ಟ ಉಪವಾಕ್ಯವು ಪ್ರಧಾನವಾಕ್ಯದ ಕಾರಕಪದವಾಗುತ್ತದೆ.

ಉದಾ: ದೇವರು ಸರ್ವಜ್ಞನು, ಸರ್ವತ್ರಾಣಿ, ಸರ್ವವ್ಯಾಪಿ ಎಂಬುದು ಎಲ್ಲರಿಗೂ ತಿಳಿಯಬಹುದು; ಆದರೆ ಮರೆಯಲ್ಲಿ ಪಾಪಕರ್ಮವ ಮಾಡಬಾರದೆಂಬುದನ್ನು ಯಾರೂ ಲಕ್ಷಿಸುವುದಿಲ್ಲ.

## ಅಧ್ಯಾಹಾರ.

೨೮೩. ವಾಕ್ಯದಲ್ಲಿ ಕೆಲವು ಪದಗಳನ್ನು ಹೇಳದಿದ್ದರೂ ಉಕ್ತಾನುಕ್ತ ಪದಗಳ ಪರಸ್ಪರ ಸಂಬಂಧದಿಂದ ಅನುಕ್ತಪದಗಳು ಸಹಜವಾಗಿ ತಿಳಿಯುತ್ತವೆ. ಈಯನುಕ್ತಪದಗಳನ್ನು ಕಂಡುಕೊಳ್ಳಲಿಕ್ಕೆ ಅಧ್ಯಾಹಾರವೆಂತಲೂ ಅಧ್ಯಾರೋಪವೆಂತಲೂ ಹೆಸರುಗಳು.

ಅಧ್ಯಾಹಾರದಿಂದ ಕಂಡುಹಿಡಿದ ಪದಕ್ಕೆ 'ಅಧ್ಯಾಹೃತ' ಅಥವಾ 'ಅಧ್ಯಾರೋಪಿತ' ಪದವೆಂಬ ಹೆಸರು.

ಉದಾ: ಮೃತ್ಯುವಿಗೆ ಕಾರಣ ಉಂಟೆ? ಇಲ್ಲಿ — 'ಇಲ್ಲ' ಎಂಬ ಉತ್ತರವು 'ಅಧ್ಯಾಹೃತವಾ'ಗಿದೆ.

೨೮೪. ಆಖ್ಯಾತ ಪ್ರತ್ಯಯದಿಂದ ಕರ್ತೃ ಕರ್ಮಗಳು ತಿಳಿಯುವಂತೆ ಇದ್ದರೆ, ಅವಕ್ಕೆ ಲೋಪ ಬರುವುದುಂಟು.

ಉದಾ: ಈಗ ಬಂದೆನು. ಇಲ್ಲಿ 'ನಾನು' ಎಂಬುದೂ, ರಾಮಾ ಬರುತ್ತೀಯಾ, ಎಂಬಲ್ಲಿ 'ನೀನು' ಎಂಬುದೂ, ಈಗ ಬರುತ್ತಾಳೆ ಎಂಬಲ್ಲಿ 'ಅವಳು' ಎಂಬುದೂ, ಕೋಣ ಬೇಡದೆ ಆನೆಯಾದೀತೇ? ಎಂಬಲ್ಲಿ 'ಅದು' ಎಂಬುದೂ, ಅರಸನಿಂದ ಕರೆಯಲ್ಪಟ್ಟಿದ್ದೇನೆ ಎಂಬಲ್ಲಿ 'ನಾನು' ಎಂಬುದೂ ಅಧ್ಯಾರೋಪದಿಂದ ನಿಶ್ಚಯಿಸಲ್ಪಡತಕ್ಕ ಪದಗಳು.

೨೮೫. ಲಕ್ಷಣವಾಚಕಾಖ್ಯಾತಗಳ ಪ್ರಯೋಗಗಳಲ್ಲಿ ಆಖ್ಯಾತಕ್ಕೆ ಬಹುಶಃ ಲೋಪ ಬರುತ್ತದೆ.

ಉದಾ: 'ದೇವರು ದೊಡ್ಡವನು' ಎಂಬಲ್ಲಿ 'ಇದ್ದಾನೆ' ಎಂಬುದೂ 'ಹರಿಯು ಭಕ್ತವತ್ಸಲನು' ಎಂಬಲ್ಲಿ ಆಗಿದ್ದಾನೆಂಬುದೂ ಅಧ್ಯಾಹಾರ್ಯಗಳಾಗಿವೆ.

೨೮೬. ಲಕ್ಷಣವಾಚಗಳ ಪ್ರಯೋಗವಿಲ್ಲದಿದ್ದರೂ ಸಹಜವಾಗಿ ತಿಳಿಯುವಂತಹ ಬೇರೆ ಕ್ರಿಯಾಪದಗಳಿಗೂ ವಾಕ್ಯದಲ್ಲಿ ಲೋಪ ಬರುವುದುಂಟು.

ಉದಾ: 'ಚಳಿಗಾಲಕ್ಕೆ ಚಳಿ, ಬೇಸಿಗೆಗೆ ಬಿಸಿಲು' ಎಂಬ ವಾಕ್ಯಗಳಲ್ಲಿ 'ಬೀಳುತ್ತದೆ' ಅಥವಾ 'ಇರುತ್ತದೆ' ಎಂಬುದೂ 'ಶಿಷ್ಯರಿಗೆ ಮಾನ, ದುಷ್ಟರಿಗೆ ದಂಡ, ಪಾಪಕ್ಕೆ ನರಕ, ವಿದ್ಯೆಯಿಂದ ಸನ್ಮಾನ, ಅಪರಾಧಕ್ಕೆ ಶಿಕ್ಷೆ' ಎಂಬ ವಾಕ್ಯಗಳಲ್ಲಿ 'ಆಗುತ್ತದೆ' ಅಥವಾ 'ದೊರೆಯುತ್ತದೆ' ಎಂಬ ಪದವೂ ಅಧ್ಯಾಹಾರ್ಯಗಳಾಗಿವೆ.

೨೮೭. ಸಮುಚ್ಚಯದಿಂದ ಕೂಡಿಸಲ್ಪಟ್ಟ ಪ್ರತಿಯೊಂದು ಕಾರಕದ ಮುಂದೆ ಬರತಕ್ಕ ಕ್ರಿಯಾಪದಗಳನ್ನು ಅಧ್ಯಾಹಾರದಿಂದ ತಿಳಕೊಳ್ಳಬೇಕು.

ಉದಾ: ಸೀತೆಯೂ ರಾಮನೂ ಲಕ್ಷ್ಮಣನೂ ವನಕ್ಕೆ ಹೋದರು; ಇಲ್ಲಿ "ವನಕ್ಕೆ ಹೋದಳು, ವನಕ್ಕೆ ಹೋದನು" ಎಂಬ ಎರಡು ಪದಗಳನ್ನು ಸೀತೆ ಮುಂತಾದ ಮೂರು ಪದಗಳ ಮುಂದೆ ಪ್ರತ್ಯೇಕವಾಗಿ ಅಧ್ಯಾಹಾರ ಮಾಡಬೇಕು. ಎಂದರೆ 'ಸೀತೆ ವನಕ್ಕೆ ಹೋದಳು, ರಾಮನು ವನಕ್ಕೆ ಹೋದನು, ಲಕ್ಷ್ಮಣನು ವನಕ್ಕೆ ಹೋದನು' ಎಂದು ತಿಳಿಯಬೇಕು.

೨೮೮. ಶಿಥಿಲಸಮುಚ್ಚಯದಿಂದ ಕೂಡಿಸಿದ ಪದಗಳಿಗೆ ಬೇಕಾದ 'ಊ' ನಿಪಾತವನ್ನು ಅಧ್ಯಾಹಾರದಿಂದ ತಕ್ಕೊಳ್ಳಬೇಕು.

ಉದಾ: 'ಭಯದಿಂದ ಭಕ್ತಿಯಿಂದ ಗುರುವಿಗೆ ನಡಕೋ!' ಇಲ್ಲಿ 'ಭಯದಿಂದಲೂ ಭಕ್ತಿಯಿಂದಲೂ' ಎಂದು ತಿಳಿಯಬೇಕು.

೨೮೯. ಸಂಬೋಧನವಿಭಕ್ತಿಯೊಡನೆ ಬರುವ ವಿಧ್ಯರ್ಥದ ಕ್ರಿಯಾಪದವು ಲುಪ್ತವಾಗಿದ್ದರೆ ಅದು ಅಧ್ಯಾಹಾರ್ಯವಾಗುತ್ತದೆ.

ಉದಾ: 'ರಾಮಾ ಏನು ಮಾಡುತ್ತೀ?' ಎಂಬಲ್ಲಿ 'ಹೇಳು' ಎಂಬುದು ಅಧ್ಯಾಹಾರ್ಯವು.

೨೯೦. ಪ್ರಶ್ನಾರ್ಥಕ ವಾಕ್ಯಗಳಲ್ಲಿ ಸಾಮಾನ್ಯವಾಗಿ ನಿಶ್ಚಯಿಸಲ್ಪಡತಕ್ಕ ಉತ್ತರವು ಅಧ್ಯಾಹಾರ್ಯವಾಗುತ್ತದೆ.

ಉದಾ: 'ಪುರುಷೋತ್ತಮನು ಮನುಷ್ಯನೇ?' ಎಂಬಲ್ಲಿ 'ಅಲ್ಲ' ಎಂಬುದು ಅಧ್ಯಾಹಾರ್ಯವಾಗುತ್ತದೆ. 'ದೇವರು ಯಾವಲ್ಲಿ ಇಲ್ಲ?' ಎಂಬಲ್ಲಿ 'ಎಲ್ಲ ಕಡೆಯಲ್ಲಿ ಇದ್ದಾನೆ' ಎಂಬ ವಾಕ್ಯವು ಅಧ್ಯಾಹಾರ್ಯವಾಗಿದೆ.

೨೯೧. ಆಖ್ಯಾತಕ್ಕೂ ಕಾರಕಕ್ಕೂ ಇರುವ ಸಂಬಂಧದಿಂದ ಪ್ರಸಂಗವಿಶೇಷದಲ್ಲಿ ಎಲ್ಲ ಕಾರಕಗಳಿಗೂ ಲೋಪಬರುವುದುಂಟು. ಅವನ್ನು ಅಧ್ಯಾಹಾರದಿಂದ ಸ್ವೀಕರಿಸಬೇಕಾಗುತ್ತದೆ.

ಉದಾ: (೧) ಬರುತ್ತೇನೆ, ಇಲ್ಲಿ "ನಾನು;" (೨) ಅವನು ಉತ್ತಮನು, ಹೊಡೆಯಬೇಡ, ಇಲ್ಲಿ "ಅವನನ್ನು;" (೩) ಈ ಕೊಡಲಿ ಹದನಾಗಿದೆ, ಕಟ್ಟಿಗೆಯನ್ನು ಕಡಿ, ಇಲ್ಲಿ "ಇದರಿಂದ"; (೪) ಬ್ರಾಹ್ಮಣನು ಸಾತ್ವಿಕನಿದ್ದಾನೆ; ಹತ್ತು ರೂಪಾಯಿ ಕೊಡು, ಇಲ್ಲಿ "ಇವನಿಗೆ"; (೫) ರಾಮನು ಗಿಡದ ಮೇಲೆ ಹತ್ತಿದ್ದನು, ಈಗ ಇಳಿದನು, ಇಲ್ಲಿ "ಗಿಡದ ಮೇಲಿಂದ"; (೬) ನಮಸ್ಕಾರ ರಾಯರೇ! ಗುರುತು ಸಿಕ್ಕಿತೇ? ಇಲ್ಲಿ "ನಿಮಗೆ" ಮತ್ತು "ನನ್ನ" ಅಥವಾ "ನಮ್ಮ"; (೭) ಸಪ್ಪನ್ನ ಹಾಲು ನನಗೆ ಸೇರುವದಿಲ್ಲ, ಸಕ್ಕರೆಯ ಹಾಕು; ಇಲ್ಲಿ "ಇದರಲ್ಲಿ" ಅಥವಾ "ಈ ಹಾಲಿನಲ್ಲಿ" ಎಂಬ ಪದವು ಅಧ್ಯಾಹಾರ್ಯವಾಗಿದೆ.

೨೯೨. ಸಂಭಾಷಣಗಳಲ್ಲಿ ವಾಕ್ಯಗಳ ಪರಸ್ಪರ ಸಂಬಂಧವು ಬಹಳ ಇರುತ್ತದೆ. ಕಾರಣ ಅನೇಕ ಪದಗಳ ಅಧ್ಯಾಹಾರ್ಯಗಳಾಗುತ್ತವೆ.

ಉದಾಹರಣಗಳು:

(ಪ್ರ) ರಾಮಾ ಯಾಕೆ ಓಡುತ್ತೀ?

(ಉ.) ಕೆಲಸವಿದೆ; ಇಲ್ಲಿ 'ಎಂದು ಓಡುತ್ತೇನೆ' ಈ ಎರಡುಪದಗಳು ಅಧ್ಯಾಹಾರ.

(ಪ್ರ.) ನಿನ್ನೆ ನಾನು ನಿಮ್ಮ ಮನೆಗೆ ಬಂದಾಗ ನೀನು ಯಾರ ಮನೆಗೆ ಹೋಗಿದ್ದಿ?

(ಉ) ಗೋವಿಂದನ ಮನೆಗೆ; ಇಲ್ಲಿ 'ನಿನ್ನೆ ನೀನು ಬಂದಾಗ ನಾನು ಹೋಗಿದ್ದೆನು' ಈ ಎಲ್ಲಾ ಪದಗಳು ಅಧ್ಯಾಹಾರ್ಯಗಳಾಗುತ್ತವೆ.

## ವಾಕ್ಯವಿಭಜನೆ.

ಯಾವುದೊಂದು ವಾಕ್ಯದೊಳಗಿನ ಬೇರೆ ಬೇರೆ ಭಾಗಗಳನ್ನೂ ಅವುಗಳ ಪರಸ್ಪರ ಸಂಬಂಧವನ್ನೂ ತಿಳಿಸುವುದಕ್ಕೆ ವಾಕ್ಯವಿಭಜನೆಯೆನ್ನುವರು.

ವಾಕ್ಯಗಳಲ್ಲಿ (೧) ಶುದ್ಧವಾಕ್ಯ (೨) ಮಿಶ್ರವಾಕ್ಯ (೩) ಸಂಯೋಜಿತ ವಾಕ್ಯವೆಂದು ಮೂರು ವಿಧವು.

(೧) ವಾಕ್ಯದಲ್ಲಿ ಒಂದೇ ಕ್ರಿಯಾಪದವಿದ್ದು ಅದರ ಕರ್ತೃಕರ್ಮಾದಿ ಕಾರಕಗಳೂ ಅವುಗಳ ವಿಶೇಷಣಗಳೂ ಕ್ರಿಯಾವಿಶೇಷಣಗಳೂ ಮಾತ್ರ ಇದ್ದರೆ ಅದಕ್ಕೆ ಶುದ್ಧವಾಕ್ಯವೆನ್ನುವರು. ಇವೇ ಸ್ವತಂತ್ರ ವಾಕ್ಯಗಳು.

ಉದಾ: ಒಳ್ಳೆಯ ವಿದ್ಯಾರ್ಥಿಯು ತನ್ನ ಅಭ್ಯಾಸವನ್ನು ಯಾವಾಗಲೂ ನೆಟ್ಟಗೆ ಮಾಡುತ್ತಾನೆ.

(೨) ಉಪವಾಕ್ಯಗಳಿಂದೊಡಗೂಡಿದ ಮುಖ್ಯ ವಾಕ್ಯಕ್ಕೆ ಮಿಶ್ರವಾಕ್ಯವೆನ್ನುವರು.

ಉದಾ: ಮನುಷ್ಯರಲ್ಲಿ ಅಜ್ಞಾನವು ಬಹಳವಾಗಿರುವುದರಿಂದ ಕೆಲವರು ಮಾತ್ರ ಮಹತ್ಕಾರ್ಯಗಳನ್ನು ಮಾಡುತ್ತಾರೆ.

(೩) ಸಾಪೇಕ್ಷ ಪೂರ್ಣವಾಕ್ಯಗಳು ಸಂಯೋಜಿತವಾಕ್ಯಗಳು.

ಉದಾ: ಕೃಷ್ಣನು ದ್ರೋಣನಿಗೆ ಭಯವುಂಟಾಗುವಂತೆ, ಧರ್ಮರಾಜನಿಂದ ಕೂಗಿಸಿದನು, ಏಕೆಂದರೆ ದ್ರೋಣನು ಬದುಕಿದ್ದರೆ ಮುಷ್ಪನ್ನಿಗ್ರಹಕ್ಕೆ ಅಸಾಧ್ಯನಾಗುತ್ತಿತ್ತು.

## ವಾಕ್ಯದಲ್ಲಿರುವ ಪದಗಳು.

(ಅ) ವಾಕ್ಯದಲ್ಲಿ ಆಖ್ಯೇಯ, ಆಖ್ಯಾತಗಳೆಂಬ ಎರಡೇ ಪದಗಳು ಮುಖ್ಯವಾಗಿರುತ್ತವೆ. ಹಲವು ವಾಕ್ಯಗಳಲ್ಲಿ ಆಖ್ಯೇಯ, ಆಖ್ಯಾತಗಳಿಗೆ

ಸಂಬಂಧಿಸಿದ ಅನೇಕ ಪದಗಳಿರುತ್ತವೆ. ಆಖ್ಯೇಯಕ್ಕೆ ವಿಶೇಷಣಗಳೂ, ಷಷ್ಠ್ಯಂತಗಳೂ, ವಾಕ್ಯಗಳೂ, ವಾಕ್ಯಾಂಶಗಳೂ ಸಂಬಂಧಿಸಿರುತ್ತವೆ; ಆಖ್ಯಾತಕ್ಕೆ ಕ್ರಿಯಾವಿಶೇಷಣಗಳೂ, ಉಳಿದ ಕಾರಕಗಳೂ, ವಾಕ್ಯಗಳೂ, ವಾಕ್ಯಾಂಶಗಳೂ ಸಂಬಂಧಿಸಿರುತ್ತವೆ. (ಇವೆಲ್ಲವುಗಳ ಉದಾಹರಣೆಗಳನ್ನು ಮುಂದಿನ ವಾಕ್ಯಗಳಲ್ಲಿ ನೋಡಬೇಕು)

(ಆ) ಆಖ್ಯೇಯವು ನಾಮವಾಗಲಿ, ಸರ್ವನಾಮವಾಗಲಿ, ವಿಶೇಷಣವಾಗಲಿ, ಕ್ರಿಯಾನಾಮವಾಗಲಿ, ಕೃದಂತವಿಶೇಷಣವಾಗಲಿ ಸಾಧಾರಣವಾಗಿ ಇರುವುದು. ಆಖ್ಯಾತವು ಕ್ರಿಯಾಪದರೂಪದಲ್ಲಿರುತ್ತದೆ.

(ಇ) ಆಖ್ಯೇಯಕ್ಕೂ ಅದಕ್ಕೆ ಸಂಬಂಧಿಸಿದ ಪದಗಳಿಗೂ ಕೂಡಿ ಆಖ್ಯೇಯಭಾಗವೆಂದೂ, ಆಖ್ಯಾತಕ್ಕೂ ಅದಕ್ಕೆ ಸಂಬಂಧಿಸಿದ ಪದಗಳಿಗೂ ಕೂಡಿ ಆಖ್ಯಾತಭಾಗವೆಂದೂ ಎನ್ನುವರು.

| ಆ. ಭಾಗ | ಆ. ಭಾಗ |
|---|---|
| (೧) ಕುದುರೆಯು | ಹೋಗುತ್ತದೆ. |
| (೨) ದೊಡ್ಡ ಕುದುರೆಯು | ತೀವ್ರವಾಗಿ ಹೋಗುತ್ತದೆ. |
| (೩) ರಾಮನ ದೊಡ್ಡ ಕುದುರೆಯು | ತೀವ್ರವಾಗಿ ಬಹುದೂರ ಹೋಗುತ್ತದೆ. |

(ಈ) ಆಖ್ಯೇಯಭಾಗದಲ್ಲಿ ಆಖ್ಯೇಯದ ಅರ್ಥವನ್ನು ವಿಸ್ತರಿಸುವುದಕ್ಕಾಗಿಯೂ, ಆಖ್ಯಾತಭಾಗದಲ್ಲಿ ಆಖ್ಯಾತದ ಅರ್ಥವನ್ನು ವಿಸ್ತರಿಸುವುದಕ್ಕಾಗಿಯೂ ವಿಶೇಷಣ, ಕೃದಂತವಿಶೇಷಣಗಳು ಮುಂತಾದ ಪದಗಳನ್ನು ಹಾಕಿರುತ್ತಾರೆ. ಮೇಲಿನ ೧ನೆಯ ಉದಾಹರಣೆಯಂತೆ ಆ ವಿಶೇಷಣಾದಿಗಳು ಇಲ್ಲದಿದ್ದರೂ ವಾಕ್ಯದ ಅರ್ಥವು ಪೂರ್ಣವಾಗುತ್ತದೆ. ಆದರೆ ವಿಶೇಷಾರ್ಥವು ಬೇಕಾಗಿದ್ದರೆ ಮೇಲಿನ ೨ನೆಯ ಮತ್ತು ೩ನೆಯ ಉದಾಹರಣೆಗಳಂತೆ ಅವಶ್ಯಕ ಪದಗಳನ್ನು ಹಾಕಬೇಕಾಗುವುದು.

(ಉ) ಕ್ರಿಯಾಪದವು ಅಕರ್ಮಕವಾಗಿದ್ದರೆ ಎರಡೇ ಪದಗಳಿಂದ ಅರ್ಥವು ಪೂರ್ಣವಾಗುತ್ತದೆ. ಆದರೆ ಸಕರ್ಮಕವಿದ್ದರೆ ಕರ್ಮಪದವಿಲ್ಲದೆ ಅರ್ಥವು ಪೂರ್ಣವಾಗುವುದಿಲ್ಲ. ಅಲ್ಲಿ ಅದು ಅವಶ್ಯಕವಾಗಿರುತ್ತದೆ. ಅದಾದರೂ ಆಖ್ಯಾತಭಾಗದಲ್ಲಿ ಬರುತ್ತದೆ. ಕರ್ಮಕ್ಕೆ ಆಖ್ಯಾತಸಮಾಪಕವೆನ್ನುವರು. ಕರ್ಮಪದವಾದರೆ, ಕರ್ತೃವಿನಂತೆ ಅನೇಕ ಪ್ರಕಾರದ ಶಬ್ದವಿರಬಹುದು.

(ಊ) ಯಾವುದೊಂದು ವಾಕ್ಯದಲ್ಲಿ ಹೀಗೆ ೨ ಮುಖ್ಯ ಭಾಗಗಳು: (೧) ಆಖ್ಯೇಯಭಾಗ (೨) ಆಖ್ಯಾತಭಾಗ [illegible] (೧) ಆಖ್ಯೇ

ಯಕ್ಕೆ ಸಂಬಂಧಿಸಿದ ಪದಗಳು (೨) ಆಖ್ಯೇಯವು— ಹೀಗೆ ೨ ಭಾಗಗಳು. ಆಖ್ಯಾತಭಾಗದಲ್ಲಿ: (೧) ಆಖ್ಯಾತಸಮಾಪಕ (ಕರ್ಮ ಮುಂ.), (೨) ಆಖ್ಯಾತಕ್ಕೆ ಸಂಬಂಧಿಸಿದ ಉಳಿದ ಪದಗಳು, (೩) ಆಖ್ಯಾತವು—ಇಷ್ಟು.

## ಶುದ್ಧ (ಅಥವಾ ಸ್ವತಂತ್ರ) ವಾಕ್ಯಗಳ ವಿಭಜನೆ.

(೧) ರಾಮನು ತೀವ್ರವಾಗಿ ಹೋಗುತ್ತಾನೆ.

(೨) ಬುದ್ಧಿವಂತನಾದ ಮನುಷ್ಯನು ತನ್ನ ಕೆಲಸಗಳನ್ನು ಚೆನ್ನಾಗಿ ಮಾಡುತ್ತಾನೆ.

(೩) ರಾಮನ ತಂದೆಯು ನಾಳೆ ಬರುವನು.

(೪) ಜಲಚರಗಳು ನೀರಲ್ಲಿ ಬಹು ತೀವ್ರ ಹೋಗುತ್ತವೆ.

(೫) ಕುದುರೆಯ ಮರಿಯು ಎಳೆ ಹುಲ್ಲನ್ನು ಪ್ರೀತಿಯಿಂದ ತಿನ್ನುತ್ತದೆ.

(೬) ಸೇವಕನಿಂದ ಕೆಲಸವು ಮಾಡಲ್ಪಟ್ಟಿತು.

ಇವುಗಳ ವಿಭಜನೆಯನ್ನು ಮುಂದಿನ ಪಟ್ಟಿಯಲ್ಲಿ ಮಾಡಿ ತೋರಿಸಿದೆ.

| ವಾಕ್ಯ ಸಂಖ್ಯೆ | ಆಖ್ಯೇಯ ಭಾಗ | | ಆಖ್ಯಾತ ಭಾಗ | | |
|---|---|---|---|---|---|
| | ಆಖ್ಯೇಯಕ್ಕೆ ಸಂ. ಪದಗಳು | ಆಖ್ಯೇಯ | ಆಖ್ಯಾತ ಸಮಾಪಕ (ಕರ್ಮ) | ಆಖ್ಯಾತ ವಿವರಣೆ | ಆಖ್ಯಾತ |
| ೧ | .... | ರಾಮನು | .... | ತೀವ್ರವಾಗಿ | ಹೋಗುತ್ತಾನೆ |
| ೨ | ಬುದ್ಧಿವಂತನಾದ | ಮನುಷ್ಯನು | ತನ್ನ ಕೆಲಸಗಳನ್ನು | ಚೆನ್ನಾಗಿ | ಮಾಡುತ್ತಾನೆ |
| ೩ | ರಾಮನ | ತಂದೆಯು | .... | ನಾಳೆ | ಬರುವನು |
| ೪ | .... | ಜಲಚರಗಳು | .... | (೧) ನೀರಲ್ಲಿ (ಸ್ಥಾನ) (೨) ಬಹುತೀವ್ರ (ರೀತಿ) | ಹೋಗುತ್ತವೆ. |
| ೫ | ಕುದುರೆಯ | ಮರಿಯು | ಎಳೆ ಹುಲ್ಲನ್ನು | ಪ್ರೀತಿಯಿಂದ | ತಿನ್ನುತ್ತದೆ |
| ೬ | .... | ಕೆಲಸವು | .... | ಸೇವಕನಿಂದ (ಕರ್ತೃ) | ಮಾಡಲ್ಪಟ್ಟಿತು |

## ಮಿಶ್ರವಾಕ್ಯಗಳು.

(ಅ) ಮಿಶ್ರವಾಕ್ಯಗಳಲ್ಲಾದರೂ ಆಖ್ಯೇಯ-ಆಖ್ಯಾತಗಳೆಂಬ ಎರಡೇ ಪದಗಳು ಮುಖ್ಯವಾಗಿರುತ್ತವೆ. ಆದರೆ ಆಖ್ಯೇಯವು (ಹಿಂದೆ ಹೇಳಿದ ಶಬ್ದಗಳ ಹೊರತು) ವಾಕ್ಯವಾಗಲಿ ಅಥವಾ ವಾಕ್ಯಾಂಶವಾಗಲಿ ಇರಬಹುದು. ಅದರಂತೆ ಕರ್ಮವು, ಉಳಿದ ಕಾರಕಗಳು ಮತ್ತು ಕ್ರಿಯಾವಿಶೇಷಣಗಳು, ಇವುಗಳಾದರೂ ವಾಕ್ಯಗಳಾಗಲಿ, ವಾಕ್ಯಾಂಶಗಳಾಗಲಿ ಇರಬಹುದು. ಅಂತೂ ಮಿಶ್ರವಾಕ್ಯಗಳಲ್ಲಿ ಒಂದಾಗಲಿ ಹಲವಾಗಲಿ ಉಪವಾಕ್ಯಗಳು ಇರುತ್ತವೆ.

(ಆ) ಮಿಶ್ರವಾಕ್ಯಗಳ ವಿಭಜನೆಯನ್ನು ಮಾಡುವಾಗ ಉಪವಾಕ್ಯ, ಪ್ರಧಾನವಾಕ್ಯಗಳ ಸಂಬಂಧವನ್ನು ಹೇಳುವುದಕ್ಕಾಗಿಯೂ, ವಿಭಜನೆಯನು ಮಾಡುವ ವಾಕ್ಯವು ಯಾವ ಪ್ರಕಾರದ್ದೆಂಬದನ್ನು ಹೇಳುವುದಕ್ಕಾಗಿಯೂ ಒಂದು ಕೋಷ್ಟಕವನ್ನು ಹೆಚ್ಚು ಹಾಕಬೇಕಾಗುವುದು.

(೭) ಅವನು ಬಂದಮೇಲೆ ನಾನು ಹೋಗುತ್ತೇನೆ.

ಈ ಮಿಶ್ರವಾಕ್ಯದಲ್ಲಿ (ಅ) ಅವನು ಬಂದಮೇಲೆ (ಆ) ನಾನು ಹೋಗುತ್ತೇನೆ, ಎಂಬ ಎರಡು ವಾಕ್ಯಗಳಿವೆ. ಇವುಗಳಲ್ಲಿ ಮೊದಲಿನ ವಾಕ್ಯವು ಅಪೂರ್ಣೋಪವಾಕ್ಯವು, ಎರಡನೆಯ ವಾಕ್ಯವು ಪ್ರಧಾನವಾಕ್ಯವು. ಉಪವಾಕ್ಯವು ಪ್ರಧಾನವಾಕ್ಯದ ಕ್ರಿಯೆಯ ವಿವರಣೆಯನ್ನು (ಕಾಲವನ್ನು ಸೂಚಿಸಿ) ಮಾಡುತ್ತದೆ.

| ವಾಕ್ಯ | ಎಂಥ ವಾಕ್ಯ / ಸಂಬಂಧ | ಆಖ್ಯೇಯ ಭಾಗ | | ಆಖ್ಯಾತ ಭಾಗ | | |
|---|---|---|---|---|---|---|
| | | ಆ. ಪ. ಪ. | ಆಖ್ಯೇಯ | ಆ. ಸಮಾಪಕ ವಿ. ಪ. | ಆಖ್ಯಾತ ವಿವರಣೆ | ಆಖ್ಯಾತ |
| (೧) | ಅಪೂರ್ಣೋಪ ವಾಕ್ಯ (ಕ್ರಿ. ವಿ.) | .... | ಅವನು | .... | .... | ಬಂದ ಮೇಲೆ |
| (೨) | ಪ್ರಧಾನವಾಕ್ಯ | .... | ನಾನು | .... | ೧ ವಾಕ್ಯವು (ಕಾಲ ಸೂಚಕ) | ಹೋಗು ತ್ತೇನೆ |

(೮) ನೆಪೋಲಿಯನನಲ್ಲಿ ಅಪ್ರತಿಮ ಶೌರ್ಯಕಲ್ಪನಾಶಕ್ತಿಗಳಿದ್ದುದರಿಂದಲೇ ಅವನು ಅಲೌಕಿಕ ಕಾರ್ಯವನ್ನು ಮಾಡಿದನು.

ಈ ಮಿಶ್ರವಾಕ್ಯದಲ್ಲಿ (೧)ನೆಪೋಲಿಯನನಲ್ಲಿ ಅಪ್ರತಿಮ ಶೌರ್ಯಕಲ್ಪನಾ ಶಕ್ತಿಗಳಿದ್ದುದರಿಂದಲೇ (೨) ಅವನು ಅಲೌಕಿಕ ಕಾರ್ಯವನ್ನು ಮಾಡಿದನು, ಎಂಬ ಎರಡು ವಾಕ್ಯಗಳಿವೆ. ಇವುಗಳಲ್ಲಿ ೧ನೆಯ ವಾಕ್ಯವು ಅಪೂರ್ಣೋಪ ವಾಕ್ಯವಾಗಿದ್ದು ೨ನೆಯ ಪ್ರಧಾನವಾಕ್ಯದ ಹೇತುವಾಗಿದೆ.

| ವಾಕ್ಯ | ಎಂಥ ವಾಕ್ಯ / ಸಂಬಂಧ | ಆಖ್ಯೇಯ ಭಾಗ | | ಆಖ್ಯಾತ ಭಾಗ | | |
|---|---|---|---|---|---|---|
| | | ಆ. ಸ. ಪ. | ಆಖ್ಯೇಯ | ಆ. ಸಮಾಪಕ ವಿ. ಸ. | ಆಖ್ಯಾತ ವಿವರಣೆ | ಆಖ್ಯಾತ |
| (೧) | ಅಪೂರ್ಣೋಪ ವಾಕ್ಯ (ಪ್ರ. ವಾ. ಕಾರಕ) | ಅಪ್ರತಿಮ | ಶೌರ್ಯಕಲ್ಪನಾ ಶಕ್ತಿಗಳು | .... | ನೆಪೋಲಿಯನನಲ್ಲಿ (ಸಪ್ತಮಿ=ಆಧಾರ) | ಇದ್ದುದರಿಂದಲೇ |
| (೨) | ಪ್ರಧಾನ ವಾಕ್ಯ | .... | ಅವನು | ಅಲೌಕಿಕ ಕಾರ್ಯವನ್ನು | (೧) ವಾಕ್ಯ (ಹೇತು) | ಮಾಡಿದನು |

(೯) ದೇವರು ಇರುತ್ತಾನೆಂಬುದನ್ನು ಎಲ್ಲರೂ ನಂಬುತ್ತಾರೆ.

ಈ ಮಿಶ್ರವಾಕ್ಯದಲ್ಲಿ (೧) ದೇವರು ಇರುತ್ತಾನೆ (೨) ಎಂಬುದನ್ನು ಎಲ್ಲರೂ ನಂಬುತ್ತಾರೆ. ಈ ಎರಡು ವಾಕ್ಯಗಳಿವೆ. ಇವುಗಳಲ್ಲಿ (೧) ವಾಕ್ಯವು ಸೂಚಕಪೂರ್ಣೋಪವಾಕ್ಯವು (೨) ವಾಕ್ಯವು ಪ್ರಧಾನವಾಕ್ಯವು. ಉಪ ವಾಕ್ಯವು ಪ್ರಧಾನವಾಕ್ಯದ ಕರ್ಮವಾಗಿದೆ.

| ವಾಕ್ಯ | ಎಂಥ ವಾಕ್ಯ / ಸಂಬಂಧ | ಆಖ್ಯೇಯ ಭಾಗ | | ಆಖ್ಯಾತ ಭಾಗ | | |
|---|---|---|---|---|---|---|
| | | ಆ. ಸ. ಪ. | ಆಖ್ಯೇಯ | ಆ. ಸಮಾಪಕ ವಿ. ಸ. | ಆಖ್ಯಾತ ವಿವರಣೆ | ಆಖ್ಯಾತ |
| (೧) | ಉಪವಾಕ್ಯ (ಪ್ರ. ವಾ. ಕರ್ಮ) | .... | ದೇವರು | .... | .... | ಇರುತ್ತಾನೆ |
| (೨) | ಪ್ರಧಾನ ವಾಕ್ಯ | .... | ಎಲ್ಲರೂ | ಎಂಬುದನ್ನು | .... | ನಂಬುತ್ತಾರೆ |

(೧೦) ಯಾವನು ವಸಂತಸೇನೆಯು ಕೂಡ ನಿಷ್ಕಾರಣವಾಗಿ ಪಶುವಿನಂತೆ ಆಚರಿಸಿದನು ಅಂತಹ ಶಕಾರನು ವಧಿಸಲ್ಪಡಲಿ.

ಈ ಮಿಶ್ರವಾಕ್ಯದಲ್ಲಿ (೧) ಯಾವನು ವಸಂತಸೇನೆಯು ಕೂಡ ನಿಷ್ಕಾರಣವಾಗಿ ಪಶುವಿನಂತೆ ಆಚರಿಸಿದನು, (೨) ಅಂಥ ಶಕಾರನು ವಧಿಸಲ್ಪಡಲಿ, ಈ ಎರಡು ಮಿಶ್ರವಾಕ್ಯಗಳಿವೆ. ಇವುಗಳಲ್ಲಿ (೧) ವಾಕ್ಯವು ಸಂಬಂಧ ಪೂರ್ಣೋಪವಾಕ್ಯವು (೨) ವಾಕ್ಯವು ಪ್ರಧಾನವಾಕ್ಯವು. ಉಪವಾಕ್ಯವು ಪ್ರಧಾನವಾಕ್ಯದ ಕರ್ತೃವನ್ನು ವಿಶೇಷಿಸುತ್ತದೆ.

| ವಾಕ್ಯ | ಎಂಥ ವಾಕ್ಯ | ಆಖ್ಯೇಯ ಭಾಗ | | ಆಖ್ಯಾತ ಭಾಗ | | |
|---|---|---|---|---|---|---|
| | ಸಂಬಂಧ | ಆ. ಸ. ಪ. | ಆಖ್ಯೇಯ | ಆ. ಸಮಾಪಕ ವಿ. ಸ | ಆಖ್ಯಾತ ವಿವರಣೆ | ಆಖ್ಯಾತ |
| (೧) | ಉಪವಾಕ್ಯ (ಪ್ರ. ವಾ. ಕ. ವಿ.) | .... | ಯಾವನು | .... | (೧) ವಸಂತಸೇನೆಯು ಕೂಡ (ಸಹಾಯಾರ್ಥ) (೨) ನಿಷ್ಕಾರಣವಾಗಿ (ರೀತಿ) (೩) ಪಶುವಿನಂತೆ (ರೀತಿ) | ಆಚರಿಸಿದನು |
| (೨) | ಪ್ರಧಾನವಾಕ್ಯ | ಅಂಥ | ಶಕಾರನು | ಅಂಥ ಶಕಾರನು | .... | ವಧಿಸಲ್ಪಡಲಿ |

(೧೧) ಸಮುದ್ರ ಮುಂತಾದ ಜಲಾಶಯಗಳ ಬುಡದಲ್ಲಿ ರೇವೆ ಕೂತು, ಹೊಸ ಶಿಲೆಗಳ ತರಗಳು ಹುಟ್ಟುತ್ತವೆಂದು ಹಿಂದೆ ಹೇಳಿದೆವು.

ಈ ಮಿಶ್ರವಾಕ್ಯದಲ್ಲಿ (೧) ಸಮುದ್ರ ಮುಂತಾದ ಜಲಾಶಯಗಳ ಬುಡದಲ್ಲಿ ರೇವೆ ಕೂತು, (೨) ಹೊಸ ಶಿಲೆಗಳ ಥರಗಳು ಹುಟ್ಟುತ್ತವೆ. (೩) ಎಂದು ಹಿಂದೆ ಹೇಳಿದೆವು. ಈ ಮೂರು ವಾಕ್ಯಗಳಿವೆ. ಇವುಗಳಲ್ಲಿ (೧) ವಾಕ್ಯವು (೨) ಉಪವಾಕ್ಯದ ಅಪೂರ್ಣೋಪವಾಕ್ಯವು. (೨) ವಾಕ್ಯವು ಸೂಚಿತಪೂರ್ಣೋಪ

ವಾಕ್ಯವು. (೩) ವಾಕ್ಯವು ಪ್ರಧಾನವಾಕ್ಯವು. (೧) ಉಪವಾಕ್ಯವು (೨) ಉಪ
ವಾಕ್ಯದ ಕಾರಣವು. (೩) ಉಪವಾಕ್ಯವು ಪ್ರಧಾನವಾಕ್ಯದ ಕರ್ಮವು.

| ವಾಕ್ಯ | ಎಂಥ ವಾಕ್ಯ | ಆಖ್ಯೇಯ ಭಾಗ | | ಆಖ್ಯಾತ ಭಾಗ | | |
|---|---|---|---|---|---|---|
| | ಸಂಬಂಧ | ಆ. ಸ. ಪ. | ಆಖ್ಯೇಯ | ಕರ್ಮ / ಪೂರಕ | ಆಖ್ಯಾತ ವಿವರಣೆ | ಆಖ್ಯಾತ |
| (೧) | ಉಪವಾಕ್ಯ (ಕಾರಕ) | .... | ರೇವೆ | .... | ಸಮುದ್ರ ಮುಂತಾದ ಜಲಾಶಯಗಳ ಬುಡದಲ್ಲಿ (ಸ್ಥಾನ) | ಕೂಡು |
| (೨) | ಉಪವಾಕ್ಯ (ಪ್ರ. ವಾ. ಕರ್ಮ) | ಹೊಸ ಶಿಲೆಗಳ | ತರಗಳು | .... | .... | ಹುಟ್ಟುತ್ತವೆ |
| (೩) | ಪ್ರಧಾನವಾಕ್ಯ | .... | ನಾವು (ಅಧ್ಯಾಹಾರ) | ಎಂದು | ಹಿಂದೆ (ಕಾಲ) | ಹೇಳಿದವು. |

(೧೨) ತಳಿರ್ಗಳ್, ತನಿವಣ್ಗಳ್, ಸುಮಕುಳಂಗಳ್ ಇಡಿಕಿರಿದ ಚೂತ
ಶಾಖಾಂತರದೊಳ್ ಕಳಕಂಠಂಗಳ ಬಗ್ಗಣೆ, ಗಿಳಿಗಳ ಚಪ್ಪರಣೆ, ಅಳಿಗಳ
ಇಂಚರಂ ಎಸೆಗುಂ.

ಈ ಮಿಶ್ರವಾಕ್ಯದಲ್ಲಿ (ಅ) ತಳಿರ್ಗಳ್, ತನಿವಣ್ಗಳ್, ಸುಮಕುಳಂಗಳ್
ಇಡಿಕಿರಿದ (ಆ) ಚೂತಶಾಖಾಂತರದೊಳ್ ಕಳಕಂಠಂಗಳ ಬಗ್ಗಣೆ, ಗಿಳಿಗಳ
ಚಪ್ಪರಣೆ, ಅಳಿಗಳ ಇಂಚರಂ ಎಸೆಗುಂ ಈ ಎರಡು ವಾಕ್ಯಗಳು ಇರುವವು.
ಇವುಗಳಲ್ಲಿ (ಅ) ವಾಕ್ಯವು ಉಪವಾಕ್ಯವು. (ಆ) ವಾಕ್ಯವು ಪ್ರಧಾನವಾಕ್ಯವು.
ಉಪವಾಕ್ಯವು ಪ್ರಧಾನವಾಕ್ಯದ ಕಾರಕದ ವಿಶೇಷಣವು.

| ವಾಕ್ಯ | ಎಂತಹ ವಾಕ್ಯ | ಆಖ್ಯೇಯ ಭಾಗ | | ಆಖ್ಯಾತ ಭಾಗ | | |
|---|---|---|---|---|---|---|
| | ಸಂಬಂಧ | ಆ. ಸ. ಪ. | ಆಖ್ಯೇಯ | ಆ. ಸಮಾಪಕ ವಿ.ಸ | ಆಖ್ಯಾತ ವಿವರಣೆ | ಆಖ್ಯಾತ |
| (೮) | ಉಪವಾಕ್ಯ (ಪ್ರ. ವಾ. ಕಾಲಕದ ವಿ) | .... | ತಳಿರ್ಗಳ್ ತನಿವಣ್ಗಳ್ ಸುಮಕುಳಂಗಳ್ | .... | .... | ಇಡಿಕಿರಿದ (ವಿಶೇಷಣ 'ಚೂತಶಾಖಾಂತರದೊಳ್'ಕ್ಕೆ) |
| (೯) | ಪ್ರಧಾನ ವಾಕ್ಯ | ಕಳಕಂಠಂಗಳ ಗಿಳಿಗಳ ಅಳಿಗಳ | ಬಗ್ಗಣೆ ಚಪ್ಪರಣೆ ಇಂಚರಂ | .... | ಚೂತ ಶಾಖಾಂತರ ದೊಳ್ (ಸ್ಥಾನ) | ಎಸೆಗುಂ |

ಸೂ—ಈ ಎಲ್ಲ ಮಿಶ್ರವಾಕ್ಯಗಳಲ್ಲಿ "ಎಂತಹ ವಾಕ್ಯ"ವೆಂಬ ಎರಡನೆಯ ಕೋಷ್ಠದಲ್ಲಿ ಉಪವಾಕ್ಯ ಪ್ರಧಾನವಾಕ್ಯಗಳೆಂದು ಬರೆದಿವೆ. ಅವು ಮಿಶ್ರವಾಕ್ಯದ ಅಂಗಗಳೇ ಆದ್ದರಿಂದ "ಮಿಶ್ರವಾಕ್ಯ"ವೆಂದು ಬರೆದಿಲ್ಲ,

## ಸಂಯೋಜಿತವಾಕ್ಯಗಳು.

(೧೩) ದೇವರು ಪ್ರತಿಯುಗದಲ್ಲಿಯೂ ಅವತರಿಸುತ್ತಾನೆ; ಏಕೆಂದರೆ ಸಜ್ಜನರಕ್ಷಣೆಯೆ ಅವನ ಕರ್ತವ್ಯವಾಗಿರುತ್ತದೆ.

ಈ ಸಂಯೋಜಿತವಾಕ್ಯಗಳನ್ನು "ಏಕೆಂದರೆ" ಈ ಸಮುಚ್ಚಯ ಶಾವ್ಯಯವು ಕೂಡಿಸುತ್ತದೆ. ಎರಡನೆಯ ವಾಕ್ಯವು ಮೊದಲನೆಯ ವಾಕ್ಯದ ಕಾರಣವನ್ನು ಹೇಳುವುದು.

| ವಾಕ್ಯ | ಎಂತಹ ವಾಕ್ಯ | ಆಖ್ಯೇಯ ಭಾಗ | | ಆಖ್ಯಾತ ಭಾಗ | | |
|---|---|---|---|---|---|---|
| | | ಆ. ಸ. ಪ. | ಆಖ್ಯೇಯ | ಆ. ಸಮಾಪಕ. ವಿ. ಸ. | ಆಖ್ಯಾತ ವಿವರಣೆ | ಆಖ್ಯಾತ |
| (೧) | ಪೂರ್ಣವಾಕ್ಯ | .... | ದೇವರು | .... | ಪ್ರತಿಯುಗದಲ್ಲಿಯೂ (ಕಾಲ) | ಅವತರಿಸುತ್ತಾನೆ. |
| (೨) | ಪೂರ್ಣವಾಕ್ಯ (೧ನೆಯವಾಕ್ಯದ ಕಾರಣ) | .... | ಸಜ್ಜನರಕ್ಷಣೆ ಏ=ಅನ್ಯಯೋಗವ್ಯವಚ್ಛೇದ | .... | ಅವನ ಕರ್ತವ್ಯವಾಗಿ | ಇರುತ್ತದೆ. |

(೧೪) ಚಿತ್ತೂರಿನ ರಜಪೂತರು ಯುದ್ಧದಲ್ಲಿ ಪ್ರಾಣವನ್ನು ಕೊಟ್ಟರಲ್ಲದೆ ಅಕಬರನಿಗೆ ಶರಣಾಗತರಾಗರು; ಏಕೆಂದರೆ ಅವರು ಪಾರತಂತ್ರ್ಯಕ್ಕಿಂತ ಮರಣವೇ ಲೇಸೆಂದು ಬಗೆಯುತ್ತಿದ್ದರು.

ಇದರಲ್ಲಿ ಮೊದಲಿನವೆರಡು ವಾಕ್ಯಗಳು ಪೂರ್ಣಸಾಪೇಕ್ಷ ವಾಕ್ಯಗಳು. ಮೂರನೆಯದು ನಾಲ್ಕನೆಯ ವಾಕ್ಯದ ಉಪವಾಕ್ಯವು. ನಾಲ್ಕನೆಯದು ಪ್ರಧಾನ ವಾಕ್ಯವು. ಉಪವಾಕ್ಯವು ಪ್ರಧಾನವಾಕ್ಯದ ಕರ್ಮವಾಗಿದೆ.

| ವಾಕ್ಯ | ಎಂಥ ವಾಕ್ಯ ಸಂಬಂಧ | ಆಖ್ಯೇಯಭಾಗ | | ಆಖ್ಯಾತಭಾಗ | | |
|---|---|---|---|---|---|---|
| | | ಆ. ಸ. ಪ. | ಆಖ್ಯೇಯ | ಆ. ಸ. ಮಾಪಕ ವಿ. ಸ. | ಆಖ್ಯಾತ ವಿವರಣ | ಆಖ್ಯಾತ |
| (೧) | ಪೂರ್ಣ ಸಾಪೇಕ್ಷ | ಚಿತ್ತೂರಿನ | ರಜಪೂತರು | ಪ್ರಾಣವನ್ನು | ಯುದ್ಧದಲ್ಲಿ | ಕೊಟ್ಟರು |
| (೨) | ಪೂರ್ಣ ಸಾಪೇಕ್ಷ | .... | ರಜಪೂತರು | .... | ಅಕಬರನಿಗೆ (ಸಮ್ಮಸ) ಶರಣಾಗತರು* (ವಿಧೇಯ ವಿ) | ಆಗರು |
| (೩) | ಉಪವಾಕ್ಯ (ಪ್ರ. ವಾ. ಕರ್ಮ) | .... | ಮರಣವು | .... | ಪಾರತಂತ್ರ್ಯಕ್ಕಿಂತ (ಪ್ರತಿಸಿಧಿ, ಲೇಸು (ವಿ. ಆ.) | ಇರುತ್ತದೆ. (ಅಧ್ಯಾಹಾರ) |
| (೪) | ಪ್ರಧಾನ ವಾಕ್ಯ | .... | ಅವರು | ಎಂದು | ... | ಬಗೆಯುತ್ತಿದ್ದರು |

ವಾಕ್ಯಗಳೊಳಗಿನ ಪದಗಳ ವ್ಯಾಕರಣ ಹೇಳುವುದು.

'ದೇವರು ಎಲ್ಲರನ್ನು ಕಾಯುತ್ತಾನೆ'

ಈ ವಾಕ್ಯದಲ್ಲಿ 'ದೇವರು' ಕರ್ತೃ, 'ಎಲ್ಲರನ್ನು' ಕರ್ಮ, 'ಕಾಯುತ್ತಾನೆ' ಕ್ರಿಯಾಪದ. ಸಕರ್ಮಕ ಕರ್ತರಿ ಪ್ರಯೋಗ.

* ಇದು ಉತ್ತರವಿಶೇಷಣವು, ಇದಕ್ಕಾಗಿ ಆಖ್ಯೇಯಭಾಗದಲ್ಲಿ ಮೂರನೆಯ ದೊಂದು ಕೋಷ್ಟಕವನ್ನು ಹಾಕಿಸಬೇಕಾಗುವದು.

ದೇವರು—'ದೇವ' ಅಕಾರಾಂತ, ಅನ್ವರ್ಥಕನಾಮ, ಪುಲ್ಲಿಂಗ, ಪ್ರಥಮೆಯ ಬಹುವಚನ; ಪ್ರಥಮೆಯ ಅರ್ಥ ಕರ್ತೃ, ಕಾಯುತ್ತಾನೆ ಎಂಬ ಕ್ರಿಯಾಪದಕ್ಕೆ.

ಎಲ್ಲರನ್ನು—'ಎಲ್ಲ' ಅಕಾರಾಂತ ವಿಶೇಷಣನಾಮ, ಪುಂಸ್ತ್ರೀಲಿಂಗ, ದ್ವಿತೀಯಾ ವಚನ; ದ್ವಿತೀಯೆಯ ಅರ್ಥ ಕರ್ಮ; ಕಾಯುತ್ತಾನೆಂಬ ಕ್ರಿಯಾಪದಕ್ಕೆ.

ಕಾಯುತ್ತಾನೆ—ಕ್ರಿಯಾಪದ; ಕಾ ಧಾತು, ಸಕರ್ಮಕ, ಸಂಭವಾರ್ಥ, (ಪ್ರಕೃತಿ ಸೂಚಕ) ವರ್ತಮಾನಕಾಲ, ಪ್ರಥಮಪುರುಷ, ಪುಲ್ಲಿಂಗ, ಏಕವಚನ.

"ಹರಿಯಿಂದ ಅರ್ಜುನನಿಂದ ಕರ್ಣನು ಕೊಲ್ಲಿಸಲ್ಪಟ್ಟನು"

ಈ ವಾಕ್ಯದಲ್ಲಿ 'ಹರಿಯಿಂದ' ಕರ್ತೃ, 'ಕರ್ಣನು' ಕರ್ಮ, 'ಕೊಲ್ಲಿಸಲ್ಪಟ್ಟನು' ಕ್ರಿಯಾಪದ; ಕರ್ಮಣಿಪ್ರಯೋಗ.

ಹರಿಯಿಂದ—'ಹರಿ'; ಇಕಾರಾಂತ, ಅಂಕಿತನಾಮ, ಪುಲ್ಲಿಂಗ, ತೃತೀಯಾ ಏಕವಚನ, ತೃತೀಯೆಯ ಅರ್ಥಪ್ರೇರಕ ಕರ್ತೃ.

ಅರ್ಜುನನಿಂದ—ತೃತೀಯಾರ್ಥ, ಪ್ರಯೋಜ್ಯ ಕರ್ತೃ 'ಕೊಲ್ಲಿಸಲ್ಪಟ್ಟನು' ಎಂಬ ಕ್ರಿಯಾಪದಕ್ಕೆ (ಉಳಿದದ್ದು ಮೇಲಿನಂತೆ.)

ಕರ್ಣನು—'ಕರ್ಣ'; ಅಕಾರಾಂತ, ಅಂಕಿತನಾಮ, ಪುಲ್ಲಿಂಗ, ಪ್ರಥಮಾ, ಏಕವಚನ; ಪ್ರಥಮೆಯ ಅರ್ಥ ಕರ್ಮ.

ಕೊಲ್ಲಿಸಲ್ಪಟ್ಟನು—ಕ್ರಿಯಾಪದ; ಕೊಲ್ಲಿಸು ಧಾತು, ಸಕರ್ಮಕ, ಸಂಭವಾರ್ಥ, ಭೂತಕಾಲ, ಪ್ರಥಮಪುರುಷ, ಪುಲ್ಲಿಂಗ, ಏಕವಚನ.

"ಆ ಹುಡುಗನ ಕಯ್ಕಾಲುಗಳು ಕುಣಿಯುತ್ತಿರುತ್ತವೆ,"

ಈ ವಾಕ್ಯದಲ್ಲಿ 'ಕಯ್ಕಾಲುಗಳು' ಕರ್ತೃ, 'ಕುಣಿಯುತ್ತಿರುತ್ತವೆ' ಕ್ರಿಯಾಪದ; ಅಕರ್ಮಕ ಕರ್ತರಿಪ್ರಯೋಗ.

ಆ ಹುಡುಗನ—ಆ ಹುಡುಗ ಅಕಾರಾಂತ, ಗಮಕಸಮಾಸ, ಪುಲ್ಲಿಂಗ, ಷಷ್ಠೀ ಏಕವಚನ, ಷಷ್ಠಿಯ ಅರ್ಥ ಸಂಬಂಧ ಕಯ್ಕಾಲುಗಳಿಗೆ.

ಕಯ್ಕಾಲುಗಳು—ಕಯ್ಕಾಲು ಉಕಾರಾಂತ, ರೂಢನಾಮ, ನಪುಂಸಕಲಿಂಗ, ಪ್ರಥಮಾ ಬಹುವಚನ; ಪ್ರಥಮೆಯ ಅರ್ಥ ಕರ್ತೃ.

ಕುಣಿಯುತ್ತಿರುತ್ತವೆ—ಕ್ರಿಯಾಪದ; ಕುಣಿಯುತ್ತಿರು ಧಾತು, ಅಕರ್ಮಕ, ಸಂಭವಾರ್ಥ, [illegible] ಪ್ರಥಮಪುರುಷ, ನಪುಂಸಕಲಿಂಗ, ಬಹುವಚನ.

"ನನಗೆ ಊರು ಕಾಣುತ್ತದೆ"

ಈ ವಾಕ್ಯದಲ್ಲಿ 'ಊರು' ಕರ್ತೃ, 'ಕಾಣುತ್ತದೆ' ಕ್ರಿಯಾಪದ; ಅಕರ್ಮಕ ಕರ್ತರಿಪ್ರಯೋಗ.

ನನಗೆ—ನಾನು ಉತ್ತಮಪುರುಷ, ಸರ್ವನಾಮ, ಚತುರ್ಥಿ, ಏಕವಚನ; ಚತುರ್ಥಿಯ ಅರ್ಥ ಕರ್ತೃ, ಕಾಣುವ ಕ್ರಿಯೆಗೆ; ಉಳಿದದ್ದು ಸುಲಭವಾಗಿದೆ.

"ಈ ಪುಸ್ತಕದಲ್ಲಿ ಎಷ್ಟೋ ಸೋಜಿಗದ ಸಂಗತಿಗಳು ಬರೆದಿರುತ್ತವೆ."

ಈ ವಾಕ್ಯದಲ್ಲಿ 'ಸಂಗತಿಗಳು' ಕರ್ಮ, 'ಬರೆದಿರುತ್ತವೆ' ಕ್ರಿಯಾಪ ಸಂಕ್ಷಿಪ್ತ ಕರ್ಮಣಿಪ್ರಯೋಗ.

ಈ ಪುಸ್ತಕದಲ್ಲಿ—ಈ ಪುಸ್ತಕ ಅಕಾರಾಂತ, ರೂಢನಾಮ, ನಪುಂಸಕಲಿಂ ಸಪ್ತಮೀ ಏಕವಚನ; ಸಪ್ತಮಿಯ ಅರ್ಥ ಅಧಿಕರಣ; ಬರೆದಿರುತ್ತವೆ ಎಂಬ ಕ್ರಿಯೆಗೆ.

ಎಷ್ಟೋ—ಸಾಮಾನ್ಯ ಸಂಖ್ಯಾವಾಚಕ ವಿಶೇಷಣ ಸಂಗತಿಗಳಿಗೆ.

ಸೋಜಿಗ—ಗುಣವಾಚಕವಿಶೇಷಣ ಸಂಗತಿಗಳಿಗೆ.

ಸಂಗತಿಗಳು—ಸಂಗತಿ ಭಾವವಾಚಕನಾಮ, ಇಕಾರಾಂತ, ನಪುಂಸಕಲಿಂಗ ಪ್ರಥಮಾ ಬಹುವಚನ. ಇದರರ್ಥ ಕರ್ಮ, ಬರೆದಿರುತ್ತವೆ ಎಂಬ ಕ್ರಿಯಾಪದಕ್ಕೆ.

ಬರೆದಿರುತ್ತವೆ—ಬರೆದಿರು ಧಾತು, ಸಕರ್ಮಕ, ಸಂಭವಾರ್ಥ, ಪೂರ್ಣಭೂತ ಕಾಲ, ಪ್ರಥಮಪುರುಷ, ನಪುಂಸಕಲಿಂಗ ಬಹುವಚನ.

———

# ನಾಲ್ಕನೆಯ ಭಾಗ–ಲಘುಛಂದಸ್ಸು

೧. ಛಂದಃಶಾಸ್ತ್ರವು ಪದ್ಯಗಳ ರಚನೆಗೆ ಅವಶ್ಯವಾದ ಕ್ರಮವನ್ನೂ ಯಮಗಳನ್ನೂ ತಿಳಿಸುತ್ತದೆ. ಎಂದರೆ ಪದ್ಯರಚನೆಗೆ ಬೇಕಾದ ಪಾದ, ಗಣ, ತ್ರೆ, ಗುರು, ಲಘು, ಪ್ರಾಸ, ಯತಿ ಮುಂತಾದ ವಿಚಾರಗಳನ್ನು ಈ ಸ್ತ್ರವು ಹೇಳುತ್ತದೆ.

೨. ಪದ್ಯದ ಒಂದೊಂದು ಸಾಲಿಗೆ ಚರಣ ಅಥವಾ ಪಾದ ಎಂಬ ಹೆಸರು. ಒಂದೊಂದು ಪಾದವು ಗಣಗಳಿಂದ ಕೂಡಿರುತ್ತದೆ.

೩. ಗಣಗಳು ಎರಡು ವಿಧ: (೧) ಅಕ್ಷರಗಣ, (೨) ಮಾತ್ರಾಗಣ. ಅಕ್ಷರಗಣಗಳು ಗುರು-ಲಘು ಅಕ್ಷರಗಳ ವಿನ್ಯಾಸದಿಂದ ರಚಿತವಾಗಿರುತ್ತವೆ. ಮಾತ್ರಾಗಣಗಳು ಮಾತ್ರೆಗಳ ಲೆಕ್ಕದಿಂದ ರಚಿತವಾಗಿರುತ್ತವೆ.

೪. ದೀರ್ಘಾಕ್ಷರ (ಎಂದರೆ ದೀರ್ಘಸ್ವರವಾಗಲಿ ದೀರ್ಘಸ್ವರ ಕೂಡಿದ ವ್ಯಂಜನವಾಗಲಿ), ಒತ್ತಕ್ಕರದ ಹಿಂದಿನ ಅಕ್ಷರ (ಹ್ರಸ್ವವಿರಲಿ ದೀರ್ಘವಿರಲಿ), ಅನುಸ್ವಾರದಿಂದ ಇಲ್ಲವೆ ವಿಸರ್ಗದಿಂದ ಕೂಡಿದ ಅಕ್ಷರ- ಇವುಗಳಿಗೆಲ್ಲ ಗುರು ಎಂಬ ಸಂಜ್ಞೆ.

ಉದಾ: ಆ, ಸ್ತ್ರೀ, ಕಂ, ಅಃ, ಇತ್ಯಾದಿ.

೫. ಹ್ರಸ್ವಾಕ್ಷರಗಳಿಗೆ (ಹ್ರಸ್ವಸ್ವರವಾಗಲಿ ಹ್ರಸ್ವಸ್ವರ ಕೂಡಿದವ್ಯಂಜನವಾಗಲಿ) ಲಘು ಎಂಬ ಸಂಜ್ಞೆ.

ಉದಾ: ಇ, ಕ್ರ, ಸ್ತ್ರ, ಇತ್ಯಾದಿ.

೬. ಒಂದು ಲಘು ಅಕ್ಷರವನ್ನು ಉಚ್ಚಾರಮಾಡಲಿಕ್ಕೆ ಬೇಕಾಗುವಷ್ಟು ಕಾಲಕ್ಕೆ ಮಾತ್ರೆ ಎಂಬ ಹೆಸರು. ಒಂದು ಗುರು ಅಕ್ಷರವನ್ನು ಉಚ್ಚರಿಸಲಿಕ್ಕೆ ಬೇಕಾಗುವ ಕಾಲಕ್ಕೆ ಎರಡು ಮಾತ್ರೆಗಳಾಗುತ್ತವೆ.

೭. ವ್ಯಂಜನಾಕ್ಷರಕ್ಕೆ ಅರ್ಧ ಮಾತ್ರೆ ಬೇಕಾಗುವುದರಿಂದ ಅದನ್ನು ಎಣಿಸದೆ ಅದರ ಹಿಂದಿನ ಅಕ್ಷರವನ್ನೆ ಗುರುವೆಂದು ತಿಳಿದು ಎರಡು ಮಾತ್ರೆಗಳ ಎಣಿಕೆ ಮಾಡಬೇಕಾಗುತ್ತದೆ.

ಉದಾ: ಕಣ್, ಇಲ್ಲಿ ಣ್ ಎಂಬುದು ಅರ್ಧ ಮಾತ್ರೆಯಾಗಿರುವುದರಿಂದ ಹಿಂದಿನ ಕ ಎಂಬುದನ್ನೆ ಗುರುವೆಂದೂ ಎರಡು ಮಾತ್ರೆಯೆಂದೂ ತಿಳಿಯಬೇಕು.

೮. ಪಾದದ ಕೊನೆಯ ಲಘು ಅಕ್ಷರವು ವಿಕಲ್ಪದಿಂದ ಗುರುವಾಗುವುದರಿಂದ ಅವಶ್ಯವಿದ್ದಲ್ಲಿ ಅದನ್ನು ಗುರು ಎಂದು ತಿಳಿದುಕೊಳ್ಳಬಹುದು.

೯. ಕೆಲವು ಶಬ್ದಗಳೊಳಗಿನ ಒತ್ತಕ್ಷರಗಳನ್ನು ವ್ಯಾಕರಣಕಾರರು ಶಿಥಿಲಾಕ್ಷರಗಳೆಂದು ಗ್ರಹಿಸಿರುವುದರಿಂದ ಅವುಗಳನ್ನು ಹಗುರಾಗಿ ಉಚ್ಚರಿಸಬೇಕಾಗುವುದು. ಆದುದರಿಂದ ಇಂತಹ ಅಕ್ಷರಗಳ ಹಿಂದಿನ ಲಘುವನ್ನು ಗುರು ಎಂದು ತಿಳಿಯಬಾರದು.

ಉದಾ: ಎ*ರ್ದೆ, ಬ*ರ್ದಿಲ, ಅಮ*ರ್ದು, ಮುಗು*ಳ್ಗಳ್—ಇಲ್ಲಿ * ಹೀಗೆ ಗುರ್ತು ಮಾಡಿದ ಸಂಯುಕ್ತಾಕ್ಷರಗಳು (ರ್ದೆ, ರ್ದಿ, ರ್ದು, ಳ್ಗ) ಶಿಥಿಲಗಳಾದುದರಿಂದ ಹಿಂದಿನ ಅಕ್ಷರಗಳು (ಎ, ಬ, ಮ, ಗು) ಲಘುವೆಂದೇ ತಿಳಿಯಬೇಕು.

೧೦. ಕನ್ನಡದಲ್ಲಿ ಪ್ರತ್ಯಯಾಂತ ಶಬ್ದದ ಮುಂದೆ ಸಂಯುಕ್ತಾಕ್ಷರದಿಂದ ಆರಂಭವಾಗುವ ಶಬ್ದವು ಬಂದಾಗ ಮೊದಲಿನ ಶಬ್ದದ ಕೊನೆಯ ಹ್ರಸ್ವಾಕ್ಷರವನ್ನು ಲಘುವೆಂದು ಗ್ರಹಿಸಿದ ಉದಾಹರಣೆಗಳು ಬಹಳ ದೊರೆಯುತ್ತವೆ. ಆದರೆ ಛಂದಃಶಾಸ್ತ್ರದ ಪ್ರಕಾರ ಹೀಗೆ ತಿಳಿಯುವದು ತಪ್ಪು. ಅಂತಹ ಅಕ್ಷರಗಳನ್ನು ಗುರುವೆಂದು ತಿಳಿದರೆ ಎರಡೂ ಶಬ್ದಗಳನ್ನು ಕೂಡಿಸಿಯೆ ಓದಬೇಕಾಗುವುದು. ಇದು ಸಂಧಿದೋಷವೆಂದು ವ್ಯಾಕರಣಕಾರರು ಹೇಳುವರು. ಕೆಲವರು ರೇಫಸಂಯುಕ್ತಾಕ್ಷರ ಬಂದಾಗ ಹಿಂದಿನ ಶಬ್ದದ ಕೊನೆಯ ಹ್ರಸ್ವವನ್ನು ಲಘುವೆಂದು ತಿಳಿದರೆ ತಪ್ಪಲ್ಲವೆಂದು ಹೇಳುವರು. ಆದರೂ ಹೀಗೆ ಶಬ್ದಗಳು ಬಾರದಂತೆ ನೋಡಿಕೊಳ್ಳುವುದು ಒಳ್ಳೆಯದು.

ಉದಾ: ಲಘುವೆಂದು ತಿಳಿದುದಕ್ಕೆ; ಮುನಿಗಳ್ ನೊಂದರೊ ಕಾಡ ಕ್ರೂರಮೃಗಗಳ್ಗಾ ಭೂರುಹಂಗಳ್ಗನಾ —ಇಲ್ಲಿ 'ಕಾಡ' ಶಬ್ದವು ಕನ್ನಡ ಷಷ್ಠೀ ಪ್ರತ್ಯಯಾಂತವಾದುದರಿಂದ 'ಕ್ರೂ' ಎಂಬುದನ್ನು ಶಿಥಿಲವೆಂದು ಗ್ರಹಿಸಿದೆ (ಎಂದರೆ 'ಕಾಡ'ದೊಳಗಿನ 'ಡ' ಲಘುವಾಗಿದೆ.)

ಗುರುವೆಂದು ತಿಳಿದುದಕ್ಕೆ: ಬರಿಸಿ ಪ್ರಧಾನರಂ ಕುಳ್ಳಿರಿಸಿ—ಈ ಕಂದ ಭಾಗದಲ್ಲಿ 'ಪ್ರ' ಎಂಬುದನ್ನು ಶಿಥಿಲವಲ್ಲವೆಂದು ಗ್ರಹಿಸಿ 'ಬರಿಸಿ' ಯೊಳಗಿನ 'ಸಿ' ಎಂಬುದನ್ನು ಗುರುವೆಂದು ಗ್ರಹಿಸಿದೆ.

## ಅಕ್ಷರಗಣಗಳು

೧೧. ಅಕ್ಷರಗಣವೊಂದರಲ್ಲಿ ಮೂರು ಅಕ್ಷರಗಳಿರುತ್ತವೆ. ಗುರುಲಘು ಅಕ್ಷರಗಳು ಬೇರೆ ಬೇರೆ ರೀತಿಯಿಂದ ಕೂಡುವುದರಿಂದ ಇಂತ ಮೂರಕ್ಷರದ

ಗಣಗಳು ಎಂಟು ಆಗುತ್ತವೆ. ಅವುಗಳ ವಿವರವನ್ನು ಕೆಳಗಿನ ಪಟ್ಟಿಯಲ್ಲಿ ಕೊಟ್ಟಿದೆ.

ಈ ಗಣಗಳನ್ನು ಕ್ರಮವಾಗಿ ಮಗಣ, ಯಗಣ, ಮುಂತಾಗಿ ಕರೆಯುತ್ತಾರೆ.

## ಅಕ್ಷರಗಣಗಳ ವಿವರ

— ಇದು ಗುರ್ವಕ್ಷರ ಚಿಹ್ನ; ⏑ ಇದು ಲಘ್ವಕ್ಷರ ಚಿಹ್ನ

| ಅಂಕೆ | ಗಣವಿವರ | ಉದಾಹರಣೆ | ಪ್ರಸ್ತಾರ | ಸಂಕೇತಾಕ್ಷರ | ಗಣ ನಾಮ |
|---|---|---|---|---|---|
| ೧ | ಮೂರೂ ಗುರು | ಶ್ರೀಶೈಲಂ | — — — | ಮ | ಧರಣಿ |
| ೨ | ಆದಿಲಘು | ಪ್ರವಾಹಂ | ⏑ — — | ಯ | ಜಲ |
| ೩ | ಮಧ್ಯಲಘು | ವಾರಿಜಂ | — ⏑ — | ರ | ಅಗ್ನಿ |
| ೪ | ಅಂತ್ಯಗುರು | ವನಜಂ | ⏑ ⏑ — | ಸ | ಮರುತ |
| ೫ | ಅಂತ್ಯಲಘು | ಭೂಕಾಂತ | — — ⏑ | ತ | ವ್ಯೋಮ |
| ೬ | ಮಧ್ಯಗುರು | ಮುರಾರಿ | ⏑ — ⏑ | ಜ | ರವಿ |
| ೭ | ಆದಿಗುರು | ಪಾವನ | — ⏑ ⏑ | ಭ | ಶಶಾಂಕ |
| ೮ | ಮೂರೂ ಲಘು | ಗಗನ | ⏑ ⏑ ⏑ | ನ | ಸ್ವರ್ಗ |

## ಮಾತ್ರಾಗಣಗಳು

೧೨. ಮಾತ್ರಾಗಣಗಳು ಮೂರು ಪ್ರಕಾರದವಿರುವುವು. (೧) ಮೂರು ಮಾತ್ರೆಗಳ ಗಣ. (೨) ನಾಲ್ಕು ಮಾತ್ರೆಗಳ ಗಣ. (೩) ಅಯ್ದು ಮಾತ್ರೆಗಳ ಗಣ. ಈ ಗಣಗಳಲ್ಲಿ ಗುರುಲಘುಗಳು ಯಾವುದೊಂದು ಕ್ರಮದಿಂದ ಬರಬೇಕೆಂಬ ನಿಯಮವಿಲ್ಲ. ಆದರೆ ಈ ಗಣಗಳ ಆರಂಭದಲ್ಲಿ ಲಘ್ವಕ್ಷರ ಇದ್ದರೆ ಅದರ ಮುಂದೆ ಗುರ್ವಕ್ಷರವು ಬರಬಾರದೆಂಬ ಸಾಮಾನ್ಯ ನಿಯಮವಿದೆ.

ಕನ್ನಡ ಛಂದಸ್ಸಿಗೆ ಸೇರಿದ ಷಟ್ಪದಿ, ತ್ರಿಪದಿ, ಕಂದ, ರಗಳೆ ಮೊದಲಾದುವು ಗಳು ಈ ಗಣಗಳಿಂದ ರಚಿತವಾಗುತ್ತವೆ.

೧೩. ಮೂರು ಮಾತ್ರೆಯ ಗಣಗಳು ಮೂರು ಬಗೆಯಾಗಿಯೂ ನಾಲ್ಕು ಮಾತ್ರೆಯ ಗಣಗಳು ಐದು ಬಗೆಯಾಗಿಯೂ, ಐದು ಮಾತ್ರೆಯ ಗಣಗಳು ಎಂಟು ಬಗೆಯಾಗಿಯೂ ಇರುವುವು.

ಉದಾ: ಮೂರು ಮಾತ್ರೆಯವು: (೧)—⏑ (೨) ⏑⏑⏑ (೩) ⏑

ನಾಲ್ಕು ಮಾತ್ರೆಯವು: (೧)—— (೨)—⏑⏑ (೩)⏑⏑— (೪) ⏑⏑⏑⏑ (೫) ⏑—⏑

ಐದು ಮಾತ್ರೆಯವು: (೧)——⏑ (೨)—⏑— (೩)—⏑⏑⏑ (೪) ⏑⏑—⏑ (೫)⏑⏑⏑— (೬)⏑⏑⏑⏑⏑ (೭)⏑—— (೮)⏑—⏑⏑

ಮಾತ್ರಾಗಣಗಳ ಮಾತ್ರೆಗಳ ಲೆಕ್ಕ ಮಾಡುವಾಗ ಪ್ರತಿಯೊಂದು ಗಣದ ಕೊನೆಯ ಅಕ್ಷರಕ್ಕೆ ಮಾತ್ರೆಗಳ ನಿಯಮಿತ ಸಂಖ್ಯೆಯು ಪೂರ್ಣವಾಗಬೇಕು.

## ಯತಿ

೧೪. ಪದ್ಯವನ್ನು ಹೇಳುವಾಗ ಉಸಿರು ಬಿಡುವದಕ್ಕಾಗಿ ಅಲ್ಲಲ್ಲಿ ನಿಲ್ಲಬೇಕಾಗುತ್ತದೆ, ದೊಡ್ಡ ದೊಡ್ಡ ಚರಣಗಳುಳ್ಳ ಪದ್ಯಗಳನ್ನು ಹೇಳುವಾಗ ಚರಣಗಳ ಮಧ್ಯದಲ್ಲಿಯೂ ನಿಲ್ಲಬೇಕಾಗುತ್ತದೆ. ಆದುದರಿಂದ ಪದ್ಯಗಳ ಲಾಲಿತ್ಯಕ್ಕನುಸಾರವಾಗಿ ಕಿವಿಗೆ ಅಸಹ್ಯವಾಗದಂತೆ ನಿಲ್ಲಲಿಕ್ಕೆ ವಿಶ್ರಮಸ್ಥಾನಗಳನ್ನು ಕಲ್ಪಿಸಿರುತ್ತಾರೆ. ಇಂತಹ ವಿಶ್ರಮಸ್ಥಾನಕ್ಕೆ ಯತಿ ಎಂಬ ಹೆಸರು. ಯತಿಯು ಪ್ರತಿಯೊಂದು ವಿಧದ ಪದ್ಯಕ್ಕೂ ಚರಣಗಳ ನಡುವೆ ಬೇರೆ ಬೇರೆ ಸ್ಥಾನದಲ್ಲಿ ಬರುತ್ತದೆ. ಅದನ್ನು ಛಂದಸ್ಸಿನಲ್ಲಿ ಮೊದಲೆ ವಿಧಿಸಿರುತ್ತಾರೆ. ಪಾದಗಳ ಕೊನೆಗೆ ಸಾಮಾನ್ಯವಾಗಿಯೂ ವೃತ್ತಾರ್ಧದಲ್ಲಿ ಯಾವಾಗಲೂ ಯತಿ ಇರುತ್ತದೆ. ಆದರೆ ಇಂತಹ ಕಡೆಗಳಲ್ಲಿ ಶಬ್ದವಾಗಲಿ ಪದವಾಗಲಿ ಮುರಿಯಬೇಕು. ಶಬ್ದದ ನಡುವೆಯೆ ಯತಿ ಬಂದರೆ ಅರ್ಥಕ್ಕೆ ಎಡರುಂಟಾಗುತ್ತದೆ. ಆದುದರಿಂದ ಯತಿ ಬಂದ ಕಡೆಗೆ ಶಬ್ದದ ವಿಭಕ್ತಿಯು ವ್ಯಕ್ತವಾಗಿರಬೇಕು. ಸಮಾಸದ ನಡುವೆ ಯತಿ ಬಂದರೆ ಅಲ್ಲಿ ವಿಭಕ್ತಿ ಲೋಪವಾಗಿರಬಹುದು. ಅದಕ್ಕೆ ಅವ್ಯಕ್ತವಿಭಕ್ತಿಯೆಂಬ ಹೆಸರು. ಯತಿಸ್ಥಾನದಲ್ಲಿ ಶಬ್ದವು ಒಡೆದರೆ ಯತಿಭಂಗವೆಂಬ ದೋಷವಾಗುವುದು.

೧೫. ಕನ್ನಡದಲ್ಲಿ ಕವಿಗಳು ಪೂರ್ವದಿಂದಲೂ ಯತಿಯನ್ನು ಪಾಲಿಸಿಲ್ಲ. ಕನ್ನಡಕ್ಕೆ ಪ್ರಾಸವು ಮುಖ್ಯವಾದುದರಿಂದ ಯತಿಯನ್ನು ಮಿಕ್ಕಿರುವರೆಂದೂ

ಯತಿವಿಲಂಘನವು ಕನ್ನಡದ ವೈಶಿಷ್ಟ್ಯವೆಂದೂ ಪುರಾತನ ಲಾಕ್ಷಣಿಕರು ಹೇಳಿದ್ದಾರೆ. ಆದರೆ ದೇಶೀಯ ಛಂದಸ್ಸುಗಳಲ್ಲಿ ಯತಿಯು ಮುಖ್ಯವಾದುದರಿಂದ ಅದನ್ನು ಪಾಲಿಸತಕ್ಕದ್ದು.

## ಪ್ರಾಸ

೧೬. ಪದ್ಯದ ಪ್ರತಿಯೊಂದು ಚರಣದ ಮೊದಲನೆಯ ಮತ್ತು ಎರಡನೆಯ ಸ್ವರಗಳ ನಡುವೆ ಒಂದೇ ವಿಧವಾದ ವ್ಯಂಜನಾಕ್ಷರಗಳು (ಒಂದಾಗಲಿ ಹಲವಾಗಲಿ) ಬಂದರೆ ಅದಕ್ಕೆ ಪ್ರಾಸವೆನ್ನುತ್ತಾರೆ. ಇಂತಹ ಪ್ರಾಸಾಕ್ಷರದ ಹಿಂದಿನ ಸ್ವರವು ದೀರ್ಘವಿದ್ದರೆ ಉಳಿದ ಚರಣಗಳಲ್ಲಿಯೂ ದೀರ್ಘವಾಗಿರಬೇಕು. ಹ್ರಸ್ವವಿದ್ದರೆ ಉಳಿದ ಕಡೆಗೂ ಹಾಗೆಯೇ ಹ್ರಸ್ವವಾಗಿರಬೇಕು. ಪ್ರಾಸಾಕ್ಷರದ ಹಿಂದೆ ಅನುಸ್ವಾರವಿದ್ದರೆ ಉಳಿದ ಕಡೆಗೂ ಅನುಸ್ವಾರವೂ, ವಿಸರ್ಗವಿದ್ದರೆ ಅದೇ ರೀತಿ ವಿಸರ್ಗವೂ ಇರಬೇಕು. ಪ್ರಾಸಾಕ್ಷರವು ಸಂಯುಕ್ತಾಕ್ಷರವಾಗಿದ್ದರೆ ಅವೇ ಅಕ್ಷರಗಳು ಅದೇ ಕ್ರಮದಲ್ಲಿ ಉಳಿದ ಚರಣಗಳಲ್ಲಿಯೂ ಬರಬೇಕು. ಹೀಗೆ ಪ್ರಾಸಗಳು ಆರು ಬಗೆಯಾಗುವುವು. ಅವುಗಳನ್ನು ಮುಂದಿನ ಪಟ್ಟಿಯಲ್ಲಿ ವಿವರಿಸಿದೆ.

### ಷಟ್ಪ್ರಾಸಗಳು

| ಸಂಕೆ | ಹೆಸರು | ಉದಾಹರಣೆ | ವಿವರ |
|---|---|---|---|
| ೧ | ಸಿಂಹ | ಸಕಲ, ಸುಕರ | ಹ್ರಸ್ವಾಕ್ಷರ |
| ೨ | ಗಜ | ಆರಾರೇ, ಶ್ರಿರೋಃಹ | ದೀರ್ಘಾಕ್ಷರ |
| ೩ | ವೃಷಭ | ಕುಂದಣ, ಚಂದನ | ಬಿಂದುಯುಕ್ತಾಕ್ಷರ |
| ೪ | ಅಜ * | ಅಃಶೂರ, ನಿಃಶಂಕೆ | ವಿಸರ್ಗಯುಕ್ತಾಕ್ಷರ |
| ೫ | ಶರಭ | ಬಾಯ್ಬಿಡು, ತಾಯ್ಬಿಡಿ | ಬೇರೆ ವ್ಯಂಜನದ ಒತ್ತಕ್ಷರ |
| ೬ | ಹಯ | ಮಲ್ಲಿಗೆ, ಸಲ್ಲಲಿ | ದ್ವಿತ್ವಾಕ್ಷರ |



* ಈ ಪ್ರಾಸವು ಕನ್ನಡದಲ್ಲಿ ವಿರಳ.

## ಅಕ್ಷರವೃತ್ತಗಳು.

೧೭. ಅಕ್ಷರಗಣಗಳಿಂದ ರಚಿತವಾಗುವ ಪದ್ಯಗಳಿಗೆ ಅಕ್ಷರವೃತ್ತಗಳೆಂಬ ಹೆಸರು. ಇವು ಸಂಸ್ಕೃತ ಛಂದಸ್ಸಿನಿಂದ ಕನ್ನಡಕ್ಕೆ ಬಂದಿರುತ್ತವೆ. ಈ ವೃತ್ತಗಳ ಒಂದೊಂದು ಪಾದದಲ್ಲಿ ಒಂದರಿಂದ ಇಪ್ಪತ್ತಾರರ ವರೆಗೆ ಅಕ್ಷರಗಳು ಇರಬಹುದೆಂಬ ನಿಯಮಮಾಡಿರುವುದರಿಂದ ಇವು ೨೬ ಬಗೆಯವಾಗುತ್ತವೆ* ಈ ಬಗೆಗಳಿಗೆ 'ಛಂದಸ್ಸು' ಎಂಬ ಹೆಸರು. ಈ ಛಂದಸ್ಸುಗಳಿಗಿರುವ ಹೆಸರುಗಳನ್ನು ಅನುಕ್ರಮದಿಂದ ಕೆಳಗೆ ಕಾಣಿಸಿದೆ.

೧. ಉಕ್ತೆ. ೨. ಅತ್ಯುಕ್ತೆ. ೩. ಮಧ್ಯೆ. ೪. ಪ್ರತಿಷ್ಠೆ. ೫. ಸುಪ್ರತಿಷ್ಠೆ. ೬. ಗಾಯತ್ರಿ. ೭. ಉಷ್ಣಿಕ್ಕು. ೮. ಅನುಷ್ಟುಪ್ಪು. ೯. ಬೃಹತಿ. ೧೦. ಪಂಕ್ತಿ. ೧೧. ತ್ರಿಷ್ಟುಪ್ಪು. ೧೨. ಜಗತಿ. ೧೩. ಅತಿಜಗತಿ. ೧೪. ಶಕ್ವರಿ. ೧೫. ಅತಿಶಕ್ವರಿ. ೧೬. ಅಷ್ಟಿ. ೧೭. ಅತ್ಯಷ್ಟಿ. ೧೮. ಧೃತಿ. ೧೯. ಅತಿಧೃತಿ. ೨೦. ಕೃತಿ. ೨೧. ಪ್ರಕೃತಿ. ೨೨. ಆಕೃತಿ. ೨೩. ವಿಕೃತಿ. ೨೪. ಸಂಕೃತಿ. ೨೫. ಅಭಿಕೃತಿ. ೨೬. ಉತ್ಕೃತಿ.

೧೮. ಒಂದು ವೃತ್ತದಲ್ಲಿ ನಾಲ್ಕು ಪಾದಗಳಿರುತ್ತವೆ. ಅವೆಲ್ಲ ಒಂದೇ ವಿಧವಾಗಿದ್ದರೆ ಅವುಗಳಿಗೆ ಸಮವೃತ್ತವೆನ್ನುವರು. (ಸಮವೃತ್ತದಲ್ಲಿ ಪ್ರತಿಚರಣಕ್ಕೂ ಅಷ್ಟೇ ಅಕ್ಷರಗಳಿರಬೇಕು; ಮತ್ತು ಗುರು ಲಘು ವಿನ್ಯಾಸವು ಒಂದೇ ಕ್ರಮದಲ್ಲಿರಬೇಕು.) ಮೊದಲಿನ ಎರಡು ಚರಣಗಳು ಬೇರೆ ಬೇರೆ ಯಾಗಿದ್ದು ಉತ್ತರಾರ್ಧವು ಪೂರ್ವಾರ್ಧವನ್ನು ಹೋಲುತ್ತಿದ್ದರೆ ಅದಕ್ಕೆ ಅರ್ಧಸಮವೃತ್ತವೆನ್ನುವರು. ಪ್ರತಿಪಾದವೂ ಬೇರೆ ಬೇರೆಯಾಗಿದ್ದರೆ ಅದಕ್ಕೆ ವಿಷಮವೃತ್ತವೆನ್ನುತ್ತಾರೆ. ಇಲ್ಲಿ ಸಮವೃತ್ತಗಳನ್ನಷ್ಟೆ ಹೇಳಿದೆ.

೧೯. ಮೇಲೆ ಹೇಳಿದ ಛಂದಸ್ಸುಗಳಲ್ಲಿ ಒಂದೊಂದರಲ್ಲಿ ಎಷ್ಟು ವಿಧದ ವೃತ್ತಗಳಾಗುವುವೆಂಬುದನ್ನು ತಿಳಿದುಕೊಳ್ಳಲಿಕ್ಕೂ ಒಂದು ವೃತ್ತದಲ್ಲಿ ಗುರುಲಘುಗಳು ಯಾವ ಕ್ರಮದಲ್ಲಿರುತ್ತವೆಂಬುವನ್ನು ಗೊತ್ತುಮಾಡಲಿಕ್ಕೂ ಬೇಕಾಗುವ ಕ್ರಮಕ್ಕೆ ಪ್ರಸ್ತಾರವೆನ್ನುವರು.

## ಪ್ರಸ್ತಾರಕ್ರಮ.

ಒಂದು ಛಂದಸ್ಸಿನಲ್ಲಿ ಎಷ್ಟು ಅಕ್ಷರಗಳಿರುತ್ತವೋ ಅಷ್ಟು ಗುರುಗಳನ್ನು ಮೊದಲನೆಯ ಅಡ್ಡಸಾಲಿನಲ್ಲಿ ಬರೆಯಬೇಕು. ಆ ಮೇಲೆ ಮೊದಲನೆಯ

---

* ಇಪ್ಪತ್ತಾರು ಅಕ್ಷರಗಳಿಂತಲೂ ಹೆಚ್ಚು ಅಕ್ಷರಗಳುಳ್ಳ ಪಾದಗಳಿಂದ ಕೂಡಿದ ವೃತ್ತಗಳು 'ಮಾಲವೃತ್ತ, ದಂಡಕ' ಎಂದು ಎರಡು ಬಗೆಯಾಗಿವೆ. ಆದರೆ ಅವುಗಳ ಬಳಕೆಯು ವಿರಳವಾದುದರಿಂದ ಅವುಗಳ ವಿವರವು ಇಲ್ಲಿ ಬಂದಿಲ್ಲ.

ಸ್ಥಾನದ ಗುರುವಿನ ಕೆಳಗೆ ಒಂದು ಲಘುವನ್ನು, ಅದರ ಕೆಳಗೆ ಒಂದು ಗುರುವನ್ನು, ಆದರ ಕೆಳಗೆ ಮತ್ತೆ ಲಘುವನ್ನೂ ಹೀಗೆ ಗುರುಲಘುಗಳು ಒಂದರಕೆಳಗೊಂದು ಬರುವಂತೆ ಮೊದಲಿನ ಉದ್ದ ಸಾಲಿನಲ್ಲಿ ಬರೆಯುತ್ತ ಹೋಗಬೇಕು. ಎರಡನೆಯ ಸ್ಥಾನದಲ್ಲಿ ಎರಡುಗುರು, ಆ ಮೇಲೆ ಎರಡು ಲಘು, ಹೀಗೆ ಕ್ರಮದಿಂದ ಬರುವಂತೆ ಮೇಲಿನಿಂದ ಕೆಳಗೆ ಬರೆಯುತ್ತ ಹೋಗಬೇಕು. ಮೂರನೆಯ ಸ್ಥಾನದಲ್ಲಿ ಮೊದಲು ನಾಲ್ಕು ಗುರು ಆಮೇಲೆ ನಾಲ್ಕು ಲಘು ಹೀಗೆ ಮತ್ತೆ ಮತ್ತೆ ಬರುವಂತೆ ಬರೆಯಬೇಕು. ಹೀಗೆ ಪ್ರತಿಯೊಂದು ಮುಂದಿನ ಉದ್ದ ಸಾಲಿನಲ್ಲಿ ಹಿಂದಿನ ಉದ್ದ ಸಾಲಿನ ಇಮ್ಮಡಿ ಗುರು ಲಘುಗಳು ಕ್ರಮದಿಂದ ಬರುತ್ತ ಹೋಗುವುವು. ಅಡ್ಡ ಸಾಲಿನಲ್ಲಿ ಎಲ್ಲ ಅಕ್ಷರಗಳು ಲಘು ಆಗುವ ವರೆಗೆ ಈ ಕ್ರಮವನ್ನು ಅನುಸರಿಸಬೇಕು. ಆಗ ಅಡ್ಡ ಸಾಲುಗಳು ಒಟ್ಟಿಗೆ ಎಷ್ಟು ಆಗುವುವೊ ಅಷ್ಟು ವೃತ್ತಗಳಾಗುವುವೆಂದು ತಿಳಿಯುವುದು. ಎಲ್ಲಾ ಗುರುವಿರುವ ಮೊದಲನೆಯ ಸಾಲು ಆ ಛಂದಸ್ಸಿನ ಮೊದಲನೆಯ ವೃತ್ತವೆಂದೂ ಎಲ್ಲಾ ಲಘುವಿರುವ ಕಡೆಯ ಸಾಲು ಕಡೆಯ ವೃತ್ತವೆಂದೂ ಟಸಬೇಕು.

ಉದಾ: ಹಿಂದೆ ಹೇಳಿದ ಮ, ಯ, ರ, ಸ, ತ, ಜ, ಭ, ನ ಎಂಬ ೮ ಅಕ್ಷರಗಣಗಳು ಕ್ರಮದಿಂದ 'ಮಧ್ಯಾ' ಎಂಬ ಮೂರಕ್ಷರ ಛಂದಸ್ಸಿನ ಎಲ್ಲಾ ವೃತ್ತಗಳಾಗಿವೆ. ಅವುಗಳ ಪ್ರಸ್ತಾರ ಕ್ರಮವನ್ನು ಅವುಗಳ ಕೋಷ್ಟಕದಲ್ಲಿ ನೋಡಿರಿ.

೨೦. ಹೀಗೆ ೧ನೆಯ ಛಂದಸ್ಸಿನಲ್ಲಿ ಎರಡು ವೃತ್ತಗಳೂ ೨ನೆಯದರಲ್ಲಿ ನಾಲ್ಕು ವೃತ್ತಗಳೂ ೩ನೆಯದರಲ್ಲಿ ಎಂಟು ವೃತ್ತಗಳೂ ಈ ರೀತಿಯಾಗಿ ದ್ವಿಗುಣಿಸುತ್ತ ಹೋದರೆ ಈ ೨೬ ಛಂದಸ್ಸುಗಳಲ್ಲಿ ಒಟ್ಟಿಗೆ ೧೩,೪೨,೧೭,೭೨೬ ವೃತ್ತಗಳಾಗುವುವು, ಆದರೆ ಇದೆಲ್ಲ ಬರಿಯ ಲೆಕ್ಕವೇ ಹೊರತು ಈ ಎಲ್ಲ ವೃತ್ತಗಳನ್ನು ಉಪಯೋಗಿಸುವುದು ಸಾಧ್ಯವಿಲ್ಲ. ಇವುಗಳೊಳಗಿನ ಕೆಲವು ವೃತ್ತಗಳನ್ನು ಕವಿಗಳು ಉಪಯೋಗಿಸಿಕೊಂಡಿರುವುದರಿಂದ ಅವುಗಳಿಗೆ ಮಾತ್ರ ಹೆಸರುಗಳನ್ನು ಕೊಟ್ಟಿದ್ದಾರೆ. ಕನ್ನಡದಲ್ಲಿ ರೂಢವಾಗಿರುವ ವೃತ್ತಗಳು ಇನ್ನೂ ಕಮ್ಮಿಯಾಗಿವೆ. ಅವುಗಳಲ್ಲಿ ಪ್ರಸಿದ್ಧವಾದ ಕೆಲವನ್ನು ಮಾತ್ರ ಮುಂದೆ ಹೇಳಿರುತ್ತೇವೆ.

೨೧. ಒಂದೊಂದು ಛಂದಸ್ಸಿನಲ್ಲಿಯ ಅಕ್ಷರ ಮತ್ತು ಹೆಸರು ಮೊದಲು ಕೊಟ್ಟು ಅದಕ್ಕೆ ಸಂಬಂಧಿಸಿದ ವೃತ್ತಗಳನ್ನು ಅದರ ಕೆಳಗೆ ಕೊಟ್ಟಿದೆ. ವೃತ್ತದ

ಹೆಸರಿನ ಮುಂದೆ ಆವರಲ್ಲಿಯ ಗಣಗಳನ್ನು ಕಂಸಿನಲ್ಲಿ ಬರೆದಿದೆ. ಅದರ ಕೆಳ ಕೊಟ್ಟ ಉದಾಹರಣೆಯು ಅದೇ ವೃತ್ತದ ಒಂದು ಪಾದವಾಗಿರುವುದು. ಅದ ಲ್ಲಿಯೂ ಆ ವೃತ್ತಗಣಗಳನ್ನು ಹೇಳಿದೆ. ಅಲ್ಲಿ ಅಕ್ಷರಗಣಗಳನ್ನು ಅವುಗ ಪರ್ಯಾಯ ನಾಮಗಳಾದ ಭೂಮಿ, ಜಲ, ಅಗ್ನಿ ಮುಂತಾದವುಗಳಿಂ ಹೇಳಲಾಗಿದೆ. ಆ ಪರ್ಯಾಯ ನಾಮಗಳನ್ನು ಹಿಂದೆ ಹೇಳಿದ ಗಣಗ ಪಟ್ಟಿಯಿಂದ ತಿಳಿಯಬಹುದು.

ಈ ವೃತ್ತಗಳಲ್ಲಿ ಕನ್ನಡದಲ್ಲಿ ಪ್ರಸಿದ್ಧವಾದ ಆರು ವೃತ್ತಗಳು ಯಾವ ವೆಂದರೆ:—ಶಾರ್ದೂಲವಿಕ್ರೀಡಿತ, ಮತ್ತೇಭವಿಕ್ರೀಡಿತ, ಉತ್ಪಲಮಾಲೆ ಚಂಪಕಮಾಲೆ, ಸ್ರಗ್ಧರೆ, ಮಹಾಸ್ರಗ್ಧರೆ. ಇವುಗಳಲ್ಲಿಯೂ ಚಂಪಕಮಾಲೆ ಉತ್ಪಲಮಾಲೆಗಳೇ ಬಹಳ ಬರುವುವು.

### ಕೆಲವು ಅಕ್ಷರವೃತ್ತಗಳೂ ಅವುಗಳ ಲಕ್ಷಣಗಳೂ.

( ಸೂಚನೆ: ಇಲ್ಲಿ ಲ=ಲಘು, ಗು=ಗುರು )

೧೧ನೆಯದಾದ ತ್ರಿಷ್ಟುಪ್ ಛಂದಸ್ಸಿನಲ್ಲಿ:

(೧) ಇಂದ್ರವಜ್ರಾವೃತ್ತ: (ತ, ತ, ಜ, ಗ, ಗ)
ವ್ಯೋಮದ್ವಯಂ ಭಾನು ಕಪರ್ದಿಯುಗ್ಮಂ

(೨) ಉಪೇಂದ್ರವಜ್ರಾವೃತ್ತ: (ಜ, ತ, ಜ, ಗ, ಗ)
ದಿನಾಧಿಪಂ ವ್ಯೋಮ ರವೀಶಯುಗ್ಮಂ

(೩) ರಥೋದ್ಧತಾವೃತ್ತ: (ರ, ನ, ರ, ಲ, ಗ)
ಮಾರುತೇಷ್ಟ ದಿವಿಜಾಗ್ನಿಯುಂ ಲಗಂ

(೪) ಸ್ವಾಗತವೃತ್ತ: (ರ, ನ, ಭ, ಗ, ಗ)
ಅಗಳಗ್ನಿ ದಿವಿಜೇಂದು ಪರ

೧೨ನೆಯದಾದ ಜಗತೀ ಛಂದಸ್ಸಿನಲ್ಲಿ:

(೫) ದ್ರುತವಿಲಂಬಿತವೃತ್ತ: (ನ, ಭ, ಭ, ರ)
ನಭಭರಂ ದ್ರುತಪೂರ್ವವಿಲಂಬಿತಂ

(೬) ತೋಟಕವೃತ್ತ: (ಸ, ಸ, ಸ, ಸ)
ಇದೆ ತೋಟಕವಿ... ಸಗಣ

(೭) ಭುಜಂಗಪ್ರಯಾತವೃತ್ತ: (ಯ, ಯ, ಯ, ಯ)
ಕುಶಂ ವಾರ್ಧಿಪರ್ಯಾಯಮಕ್ಕುಂ ವಿರಾಮಂ
೧೩ ಅಕ್ಷರಗಳ ಅತಿಜಗತೀ ಛಂದಸ್ಸಿನಲ್ಲಿ:

(೮) ಮಂಜುಭಾಷಿಣೀವೃತ್ತ: (ಸ, ಜ, ಸ, ಜ, ಗ)
ಪ್ರತಿಪಾದದಲ್ಲಿ ನಿಲೆ ಸಂಜಸಂಜಗಂ
೧೪ ಅಕ್ಷರಗಳ ಶಕ್ವರೀ ಛಂದಸ್ಸಿನಲ್ಲಿ:

(೯) ವಸಂತತಿಲಕವೃತ್ತ: (ತ. ಭ, ಜ, ಜ, ಗ, ಗ)
ಪ್ರೋಕ್ತೇಂದು ಭಾನುಗಣಯುಗ್ಮದಿನತ್ತಲಕ್ಕುಂ
೧೫ ಅಕ್ಷರಗಳ ಅತಿಶಕ್ವರೀ ಛಂದಸ್ಸಿನಲ್ಲಿ:

(೧೦) ಮಾಲಿನೀವೃತ್ತ: (ನ, ನ, ಮ, ಯ, ಯ)
ಅಮರಗಣಯುಗ್ಮಂಗಳ್ ಮುಂತೆ ಭೂತೋಯಯುಗ್ಮಂ

(೧೧) ಚಾಮರವೃತ್ತ: (ರ, ಜ, ರ, ಜ, ರ)
ಚಾಮರಾಖ್ಯವೃತ್ತಮೆಂಬುದೆಯ್ದೆ ರಂಜರಂಜರಂ
೧೬ ಅಕ್ಷರಗಳ ಅಷ್ಟಿ ಛಂದಸ್ಸಿನಲ್ಲಿ:

(೧೨) ಪಂಚಚಾಮರವೃತ್ತ: (ಜ, ರ, ಜ, ರ, ಜ, ಗ)
ಜರಂಜರಂಜಗರ ನಿಲಲ್ಕದಾಯ್ತು ಪಂಚಚಾಮರಂ
೧೭ ಅಕ್ಷರಗಳ ಅತ್ಯಷ್ಟಿ ಛಂದಸ್ಸಿನಲ್ಲಿ:

(೧೩) ಮಂದಾಕ್ರಾಂತಾವೃತ್ತ: (ಮ, ಭ, ನ, ತ, ತ, ಗ, ಗ)
ಕಾಂತೇಶ ಧಾತ್ರೀ ಹಿಮಕೃದಮರಾಕಾಶಯುಗ್ಮೇಶಯುಗ್ಮಂ

(೧೪) ಪೃಥ್ವೀವೃತ್ತ: (ಜ, ಸ, ಜ, ಸ, ಯ, ಲ, ಗ)
ಇನಾನಿಲ ದಿನೇಶ ಮಾರುತ ಪಯೋಲಗಂಗಳ್ ವಲಂ

(೧೫) ಹರಿಣೀ (ಪ್ಲುತ) ವೃತ್ತ: (ನ, ಸ, ಮ, ರ, ಸ, ಲ, ಗ)
ಕುಲಿಶಧರ ವಾತೋರ್ವೀ ವೈಶ್ವಾನರಾನಿಲರೀತರೊಳ್

(೧೬) ಶಿಖರಿಣೀವೃತ್ತ: (ಯ. ಮ, ನ, ಸ, ಭ, ಲ, ಗ)
ಜನಾನಂದಂ ಛಂದಂ ಶಿಖರಿಣಿ ಮದೇಭೇಂದ್ರಗಮನೇ
೧೮ ಅಕ್ಷರಗಳ ಧೃತಿ ಛಂದಸ್ಸಿನಲ್ಲಿ:

(೧೭) ಮಲ್ಲಿಕಾಮಾಲಾವೃತ್ತ: (ರ, ಸ, ಜ, ಜ, ಭ, ರ)

ಜ್ವಾಲೆ ವಾಯು ದಿನೇಶಯುಗ್ಮ [illegible]

೧೯ ಅಕ್ಷರಗಳ ಅತಿಧೃತಿ ಛಂದಸ್ಸಿನಲ್ಲಿ:

(೧೮) ತರಳವೃತ್ತ: (ನ, ಭ, ರ, ಸ, ಜ, ಜ, ಗ)
ಸುರಪ ಶೀತಕರಾಗ್ನಿ ಮಾರುತ ಭಾನುಯುಗ್ಮಗಣಂಗಳಿಂ

(೧೯) ಶಾರ್ದೂಲವಿಕ್ರೀಡಿತವೃತ್ತ: (ಮ, ಸ, ಜ, ಸ, ತ, ತ ಗ)
ಉರ್ವೀಶ ಮಾರುತ ಭಾಸ್ಕರಾನಿಲ ವಿಯದ್ಧ್ವಂಪ್ಷಂ ಪದಾಂತಂಗಳೊಳ್

೨೦ ಅಕ್ಷರಗಳ ಕೃತಿ ಛಂದಸ್ಸಿನಲ್ಲಿ

(೨೦) ಮತ್ತೇಭವಿಕ್ರೀಡಿತವೃತ್ತ: (ಸ, ಭ, ರ, ನ, ಮ, ಯ, ಲ, ಗ)
ಶ್ವಸನೇಂದು ಜ್ವಲನಂ ದಿವಂ ಜಲಂ ದೈತ್ಯಾರಿಕಾಮಾಂತಕಂ

(೨೧) ಉತ್ಪಲಮಾಲಾವೃತ್ತ:(ಭ, ರ, ನ, ಭ, ಭ, ರ, ಲ, ಗ)
ಶೀತಕರಾನಿಲೇಂದ್ರ ಪುರಚಂದ್ರ ಶಶಾಂಕ ಹುತಾಶನಂ ಲಗಂ

೨೧ ಅಕ್ಷರಗಳ ಪ್ರಕೃತಿ ಛಂದಸ್ಸಿನಲ್ಲಿ:

(೨೨) ಚಂಪಕಮಾಲಾವೃತ್ತ:(ನ, ಜ, ಭ, ಜ, ಜ, ಜ, ರ)
ತ್ರಿದಶರವೀಂದು ಭಾಸ್ಕರಗಣತ್ರಿತಯಾಗ್ರದೊಳಗ್ನಿ ಚೆಲ್ವನೆ

(೨೩) ಸ್ರಗ್ಧರಾವೃತ್ತ: (ಮ, ರ, ಭ, ನ, ಯ, ಯ, ಯ)
ಭೂಮಿ ಜ್ವಾಲೇಂದುದೇವಾಧಿಪಪುರಗಣದಿಂ ಮುಂತೆ ತೋಯತ್ರಯಂಗಳ್

೨೨ ಅಕ್ಷರಗಳ ಆಕೃತಿ ಛಂದಸ್ಸಿನಲ್ಲಿ:

(೨೪) ಮಹಾಸ್ರಗ್ಧರಾವೃತ್ತ: (ಸ, ತ, ತ, ನ, ಸ, ರ, ರ, ಗ)
ಮರ ದಾಕಾಶದ್ವಯೇಂದ್ರಾನಿಲ ಹುತವಹಯುಗ್ಮಾಂಗಜನ್ಮಾಂತಕರ್ಗಳ್

## ಮಾತ್ರಾವೃತ್ತಗಳು.

೨೨. ಮಾತ್ರಾವೃತ್ತಗಳು ಮಾತ್ರಾಗಣಗಳಿಂದ ರಚಿತವಾಗುತ್ತವೆ. ಇವುಗಳಿಗೆ ಜಾತಿಗಳೆಂದೂ ಹೆಸರು. ಈ ವೃತ್ತಗಳಲ್ಲಿ ಹಲವು ದೇಶೀಯ ಛಂದಸ್ಸಿಗೆ ಸೇರಿದುವಾದುದರಿಂದ ಕನ್ನಡದಲ್ಲಿ ಇವುಗಳ ಬಳಿಕೆ ಬಹಳವಾಗಿದೆ. ಇವುಗಳಲ್ಲಿಯೂ ಸಮ, ಅರ್ಧಸಮ, ವಿಷಮ ಎಂಬ ಭೇದಗಳು ಇರುವುವಲ್ಲದೆ ಅವುಗಳ ಪ್ರಕಾರಗಳೂ ಬಹಳವಾಗಿವೆ. ಇಲ್ಲಿ ಮಹತ್ವದ ಕೆಲವು ವಿಧಗಳನ್ನು ಮಾತ್ರ ವಿವರಿಸಿದ್ದೇವೆ.

### (೧) ಸಮವೃತ್ತಗಳು:

(೧) ದ್ವಿಪದಿ—ಇದಕ್ಕೆ ಎರಡು ಪಾದಗಳು, ಒಂದೊಂದು ಪಾದದಲ್ಲಿ ಮೊದಲು ಐದು ಐದು ಮಾತ್ರೆಗಳ ... ಗಣಗಳೂ ಕಡೆಗೆ ನಾಲ್ಕು ಮಾತ್ರೆಯ

೧ ಗಣವೂ ಇರುತ್ತವೆ. ಒಟ್ಟಿಗೆ ೧೯ ಮಾತ್ರೆಗಳು. ಇದರಲ್ಲಿ ಪಾದದ ಕಡೆಯ ಅಕ್ಷರವು ಗುರುವಾಗಿರುತ್ತದೆ. ಮೊದಲಿಗೂ ಕೊನೆಗೂ ಪ್ರಾಸವಿರುತ್ತದೆ.

ಉದಾ: ಪ್ರಚೇತಸಾಖ್ಯಮುನಿಪತಿಯ ಬಲವಂದು
ವಾಚಸ್ಪತಾಚಾರ್ಯನಡಿಗೆರಗಿ ನಿಂದು

(೨) ರಗಳೆ — ಇವುಗಳಲ್ಲಿ ಬೇಕಾದಷ್ಟು ಪಾದಗಳಿರಬಹುದು. (ಆದರೆ ಸಮಸಂಖ್ಯೆ ಇರಬೇಕು.) ಆದಿಪ್ರಾಸದ ನಿರ್ಬಂಧವಿಲ್ಲ; ಕೊನೆಗೆ ಪ್ರಾಸವಿರಬೇಕು. ಈ ಪ್ರಾಸದಲ್ಲಿ ಕೊನೆಯ ವ್ಯಂಜನವು ಒಂದೇ ಇರಬೇಕಲ್ಲದೆ ಅದಕ್ಕೆ ಮುಂದೆ ಸ್ವರ ಸೇರಿದ್ದರೆ ಅದೇ ಸ್ವರವೂ ಬೇಕು. ಈ ಪ್ರಾಸವು ಎರಡೆರಡು ಪಾದಗಳಿಗೆ ಬರಬೇಕು. ಈ ರಗಳೆಗಳಲ್ಲಿ ಹಲವು ಪ್ರಕಾರಗಳಿವೆ, ಆದರೆ ಹೆಚ್ಚು ಪ್ರಚಾರದಲ್ಲಿರುವುವು 'ಮಂದಾನಿಲ, ಲಲಿತ, ಉತ್ಸಾಹ' ಎಂಬ ಮೂರು ವಿಧಗಳು.

(ಅ) ಮಂದಾನಿಲ ರಗಳೆ— ಇದರಲ್ಲಿ ಒಂದೊಂದು ಪಾದದಲ್ಲಿ ನಾಲ್ಕು ನಾಲ್ಕು ಮಾತ್ರೆಗಳ ನಾಲ್ಕು ಗಣಗಳಿರುತ್ತವೆ. ಎರಡನೆಯ ಗಣದ ಕಡೆಗೆ ಯತಿ ಇರುತ್ತದೆ.

ಉದಾ: ಕರೆದುವು ಬಿರುದಿನ ಕಹಳೆಗಳಾಗಳ್
ಪರಿದುದು ಪಟಹದ ರವಮೇಣ್ದೆಸೆಯೊಳ್

(ಆ) ಲಲಿತ ರಗಳೆ — ಇದರಲ್ಲಿ ಪ್ರತಿ ಪಾದಕ್ಕೆ ಐಯ್ದು ಮಾತ್ರೆಯ ನಾಲ್ಕು ಗಣಗಳಿರುತ್ತವೆ. ಎರಡನೆಯ ಗಣದ ಕೊನೆಗೆ ಯತಿ ಇರುತ್ತದೆ.

ಉದಾ: ಅಲ್ಲಿ ಪೂಮರದಲ್ಲಿ ಮಲ್ಲಿಕಾಲತೆಯಲ್ಲಿ
ಎಳ ಅಸುಗೆ ಮರದಲ್ಲಿ ಜಳರುಹಾಕರದಲ್ಲಿ
ಸಂಪಗೆಯ ಕರುಗಳೊಳ್ ಸೊಂಪಿಡಿದ ಸುರಯಿಯೊಳ್
ಪಾದರಿಯ ಮರದಲ್ಲಿ ಮಾಧವಿಯ ಲತೆಯಲ್ಲಿ

(ಇಲ್ಲಿ ಆದಿ–ಮಧ್ಯ, ಮಧ್ಯ–ಅಂತ್ಯ ಪ್ರಾಸಗಳು ಇರುವುವು.)

(ಇ) ಉತ್ಸಾಹ ರಗಳೆ— ಇದರಲ್ಲಿ ಪ್ರತಿ ಚರಣಕ್ಕೆ ಮೂರು ಮೂರು ಮಾತ್ರೆಯ ಎಂಟು ಗಣಗಳಿರುತ್ತವೆ.

ಉದಾ: ಬಿಳಿಯ ನನೆಯ ಕಣೆಗೆ ನಾಡೆ
ಜಗವ[illegible] ಸೊಗಯಿಸೆ ಕಡೆ

(ಈ) ತ್ರಿಪುಡೆ—ಇದಕ್ಕೆ ಎರಡು ಪಾದಗಳೂ ಒಂದೊಂದು ಪಾದಕ್ಕೆ ಏಳು ಗಣಗಳೂ ಮೇಲೊಂದು ಗುರುವೂ ಇರುತ್ತವೆ. ವಿಷಮಸ್ಥಾನದ ಗಣಗಳಿಗೆ ೩ ಮಾತ್ರೆಗಳು, ಸಮಸ್ಥಾನದ ಗಣಗಳಿಗೆ ನಾಲ್ಕು ಮಾತ್ರೆಗಳು ಇರುವುವು. ಒಟ್ಟಿಗೆ ೨೭ ಮಾತ್ರೆಗಳು. ಆರಂಭಕ್ಕೂ ಅಂತ್ಯಕ್ಕೂ ಪ್ರಾಸಗಳಿರುತ್ತವೆ.

ಉದಾ: ಪರಸಿ ಪಾಡಿ ಮಹೇಶನಿಂದಮ ಬೇಡಿ ಮುನ್ನಂ ಶಂಕರಾ
ತುರಗ ಖುರಕೆಂಧೂಳಿ ಪೆತ್ತನೆ ಕುವರ ನಿನ್ನಂ ಶಂಕರಾ

(೨) ಅರ್ಧಸಮವೃತ್ತಗಳು:

೨೩. (೧) ಕಂದ: ನಾಲ್ಕು ಮಾತ್ರೆಯ ಎಂಟು ಗಣಗಳು ಕೂಡಿ ಒಂದು ಕಂದಾರ್ಧವಾಗುತ್ತದೆ ಮೊದಲನೆಯ ಪಾದದಲ್ಲಿ ಮೂರು ಗಣಗಳೂ ಎರಡನೆಯದರಲ್ಲಿ ಉಳಿದ ಐದು ಗಣಗಳೂ ಇರುತ್ತವೆ. ವಿಷಮ ಗಣಗಳಲ್ಲಿ (೧,೩,೫, ೭ನೆಯ ಗಣಗಳಲ್ಲಿ) ಮೊದಲನೆಯ ಅಕ್ಷರವು ಲಘುವಿದ್ದರೆ ಎರಡನೆಯದೂ ಲಘುವಾಗಿರಬೇಕೇ ಹೊರತು ಗುರು ಆಗಬಾರದು. ಆರನೆಯ ಗಣದಲ್ಲಿ ಜಗಣ (⏑ ⏑) ವಾಗಲಿ ನಗಣ (⏑⏑⏑⏑) ವಾಗಲಿ ಬರಲೇಬೇಕು ಎಂಟನೆಯ ಗಣದ ಕಡೆಯ (ಎಂದರೆ ಕಂದಾರ್ಧದ ಕಡೆಯ) ಅಕ್ಷರವು ಗುರುವಾಗಿರಬೇಕು. ಹೀಗೆಯೇ ಉತ್ತರಾರ್ಧದಲ್ಲಿಯೂ ಕಂದಕ್ಕೆ ಒಟ್ಟು ೬೪ ಮಾತ್ರೆಗಳು.

ಉದಾ: ಆಸಮಾಂಘ್ರಿಗೆ ಮೂರು ಗಣಂ । ಪುಸಾಂತ ಜನಮಧ್ಯದಿಂ ಸಮಕಯುಗ್ಮ ಗಣಂ ॥
ಬೆಸನೆಡೆಗಜಗಣನಿಯಮದಿ । ನೆಸೆವುದು ಕಂದಂ ಚತುಷ್ಕಲದ್ವ್ಯಷ್ಟಗಣಂ ॥

(೨) ಷಟ್ಪದಿಗಳು: ಇದರಲ್ಲಿ ಆರು ಪಾದಗಳಿರುವುವು. ಒಂದೊಂದು ಅರ್ಧದಲ್ಲಿ ಮೂರು ಪಾದಗಳಿದ್ದು, ೧, ೨, ೪, ೫ನೆಯ ಪಾದಗಳು ಸಮಾನಗಣವುಳ್ಳವಾಗಿರುವುವು; ೩, ೬ನೆಯ ಪಾದಗಳು ಒಂದೇ ವಿಧವಾಗಿದ್ದು ಅವುಗಳಲ್ಲಿ ಮೊದಲನೆಯ ಪಾದದ ಒಂದೂವರೆಪಟ್ಟು ಗಣಗಳಿರುವುವಲ್ಲದೆ ಕೊನೆಗೆ ಒಂದು ಗುರುವೂ ಇರುವುದು. ಇವುಗಳಲ್ಲಿ 'ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ, ವಾರ್ಧಕ' ಎಂದು ಆರು ವಿಧಗಳು. ಗಣದ ಮೊದಲನೆಯ ಅಕ್ಷರವು ಲಘುವಿದ್ದರೆ ಮುಂದಿನದೂ ಲಘುವಾಗಿರಬೇಕೆಂಬ ನಿಯಮವು ಇವುಗಳಿಗೆ ಸಾಮಾನ್ಯವಾಗಿದೆ.

ತರಳ ಷಟ್ಪದಿ: ಇದರಲ್ಲಿ ಕಿರಿಯ ಚರಣಕ್ಕೆ ನಾಲ್ಕು ನಾಲ್ಕು ಮಾತ್ರೆಯ ಎರಡು ಗಣಗಳು. ದೊಡ್ಡ ಚರಣಗಳಿಗೆ ನಾಲ್ಕು ಮಾತ್ರೆಯ ಮೂರು ಗಣಗಳೂ ಕೊನೆಯಲ್ಲಿ ಒಂದು ಗ಼ುರುವೂ ಇರುತ್ತವೆ.

ಉದಾ: ಚರಣಗಳೆರಡಕೆ
ಕಿರಿಲಘುಗಳು ಬರೆ
ಸಿರುತಪೆ ಮೂರನೆಯಡಿಗಳಿಗೆ
ಶರಧಿಯುಗಂ ಪೆ
ರ್ಚಿರೆ ಶರಷಟ್ಪದಿ
ಸರಸಿಜನಯನೆ ಸುರವ್ಯಸಿಥೀ

ಕುಸುಮ-ಷಟ್ಪದಿ: ಕಿರಿಯ ಚರಣಕ್ಕೆ ಐದು ಮಾತ್ರೆಗಳ ಗಣಗಳು ಎರಡು. ದೊಡ್ಡ ಚರಣಕ್ಕೆ ಆ ಗಣಗಳೇ ಮೂರು, ಮೇಲೆ ಒಂದು ಗುರು

ಭೋಗ ಷಟ್ಪದಿ: ಕಿರಿಯ ಚರಣಕ್ಕೆ ವ಼ೂರು ಮಾತ್ರೆಯ ಗಣಗಳು ನಾಲ್ಕು ದೊಡ್ಡ ಚರಣಕ್ಕೆ ಆ ಗಣಗಳೇ ಆರು, ಮೇಲೆ ಒಂದು ಗುರು.

ಭಾಮಿನಿ ಷಟ್ಪದಿ: ಕಿರಿಯ ಚರಣಕ್ಕೆ ಮೊದಲು ಮೂರು ಮಾತ್ರೆಯ ಗಣವೊಂದು, ಆ ಮೇಲೆ ನಾಲ್ಕು ಮಾತ್ರೆಯ ಗಣವೊಂದು, ಮುಂದೆ ಮತ್ತೆ ಮೂರು ಮಾತ್ರೆಯ ಗಣ, ಕೊನೆಗೆ ನಾಲ್ಕು ಮಾತ್ರೆಯ ಗಣ, ದೊಡ್ಡ ಚರಣಕ್ಕೆ ಇದೇ ಕ್ರಮದಿಂದ ಆರು ಗಣ, ಮೇಲೆ ಒಂದು ಗುರು.

ಪರಿವರ್ಧಿನೀ ಷಟ್ಪದಿ: ಕಿರಿಯ ಚರಣಕ್ಕೆ ನಾಲ್ಕು ಮಾತ್ರೆಯ ಗಣಗಳು ನಾಲ್ಕು. ದೊಡ್ಡ ಚರಣಕ್ಕೆ ಅವೇ ಆರು, ಮೇಲೆ ಒಂದು ಗುರು.

ವಾರ್ಧಕ ಷಟ್ಪದಿ: ಕಿರಿಯ ಚರಣಕ್ಕೆ ಅಯ್ದು ಮಾತ್ರೆಯ ಗಣಗಳು ನಾಲ್ಕು; ದೊಡ್ಡ ಚರಣಕ್ಕೆ ಅವೇ ಆರು, ಮೇಲೆ ಗುರುವೊಂದು.

(೩) ಸಾಂಗತ್ಯ: ಇದರಲ್ಲಿ ನಾಲ್ಕು ಚರಣಗಳು, ಒಂದನೆಯ ಮೂರನೆಯ ಚರಣಗಳು ದೊಡ್ಡವು, ಒಂದೊಂದಕ್ಕೆ ೨೦ ಮಾತ್ರೆಗಳು; ೧ನೆಯ

ಮಾತ್ರೆಗೆ ಯತಿ. ಎರಡನೆಯ ನಾಲ್ಕನೆಯ ಚರಣಗಳು ಚಿಕ್ಕವು, ಒಂದೊಂದಕ್ಕೆ ೧೩ ಮಾತ್ರೆಗಳು; ೮ನೆಯ ಮಾತ್ರೆಗೆ ಯತಿ.

ಉದಾ: ಪೆಣ್ಣಲ್ಲವೆ ತಮ್ಮನೆಲ್ಲ ಪಡೆದ ತಾಯಿ
ಪೆಣ್ಣಲ್ಲವೆ ಪೊರೆದವಳು
ಪೆಣ್ಣು ಪೆಣ್ಣೆಂದೇತಕೆ ಬೀಳುಗಳೆವರು
ಕಣ್ಣು ಕಾಣದ ಗಾವಿಲರು

## (೩) ವಿಷಮವೃತ್ತಗಳು

೨೪. ತ್ರಿಪದಿ: ಇದಕ್ಕೆ ಮೂರು ಚರಣಗಳು. ಮೊದಲನೆಯ ಎರಡನೆಯ ಚರಣಗಳಿಗೆ ನಾಲ್ಕು ನಾಲ್ಕು ಗಣಗಳು, ಮೂರನೆಯದರಲ್ಲಿ ಮೂರು ಗಣಗಳು, ಹೀಗೆ ಒಟ್ಟು ೧೧ ಗಣಗಳು. ಎರಡನೆಯ ಮೂರನೆಯ ಚರಣಗಳ ಎರಡನೆಯ ಗಣಗಳಿಗೆ ಮೂರು ಮೂರು ಮಾತ್ರೆಗಳೂ ಉಳಿದ ಗಣಗಳಿಗೆ ಅಯ್ದೈದು ಮಾತ್ರೆಗಳೂ ಇರುತ್ತವೆ. ಮೊದಲನೆಯ ಚರಣದ ಎರಡನೆಯ ಗಣದ ಕೊನೆಗೆ ಯತಿ ಇರುವುದು. ಮೊದಲನೆಯ ಚರಣದ ೧ನೆಯ ೩ನೆಯ ಗಣಗಳ ಆರಂಭಕ್ಕೆ ಪ್ರಾಸವಿರುವುದು.

ಉದಾ: ಖಂಡಿಸದೆ ಕರಣನನು, ದಂಡಿಸದೆ ದೇಹವನು
ಉಂಡುಂಡು ಸ್ವರ್ಗಕ್ಕೆದಲಿಕ್ಕದನೇನು
ರಂಡೆಯಾಳುವಳೆ ಸರ್ವಜ್ಞ

(ಸೂಚನೆ—ತ್ರಿಪದಿಯ ಲಕ್ಷಣವನ್ನು ಸರಿಯಾಗಿ ಹೇಳಬೇಕಾದರೆ ಬ್ರಹ್ಮ, ವಿಷ್ಣು ರುದ್ರ ಎಂಬ ಬೇರೊಂದು ವಿಧದ ಗಣಗಳನ್ನು ಕುರಿತು ಹೇಳಬೇಕಾಗುವುದು. ಆದರೆ, ಮೊದಲು ಈ ಬಗೆಯ 'ದೇವಗಣ'ಗಳಿಂದ ರಚಿತವಾಗುತ್ತಿದ್ದುದು ಇತ್ತೀಚೆಗೆ ಮಾತ್ರೆಗಳ ಲೆಕ್ಕದಿಂದಲೂ ರಚಿತವಾಗುತ್ತಿದ್ದಿತೆಂದು ಕಾಣುತ್ತದೆ. ಸ್ಥೂಲಮಾನದಿಂದ ಮಾತ್ರೆಗಳ ಲೆಕ್ಕವು ಸರಿಹೋಗುತ್ತದೆ.)

— ಸಂಪೂರ್ಣ. —

ಓಂ!

# ಪಂಪರಾಮಾಯಣ.

[ ೪ ಸೀತಾಪಹರಣಂ; ಪದ್ಯ, ೪೯-೧೧೬ ]

# ಲಘುಟಿಪ್ಪಣಿ.





ಬರೆದವರು:— ನಾ. ಸೋ. ಬಡಬಡ್ಡಿ,
ಬಿ. ಎ. ಬಿ. ಟಿ. ಎಲ್ಲೆಲ್. ಬಿ
ಅಧ್ಯಾಪಕರು, ಸರಕಾರೀ ಕನ್ನಡ ಟ್ರೇನಿಂಗ ಕಾಲೇಜ
ವಿಜಾಪುರ.

೧೯೪೯

ಬೆಲೆ, ಒಂದು ರೂಪಾಯಿ

# ಮುನ್ನುಡಿ.

ನಮ್ಮ ಕಾಲೇಜಿನಲ್ಲಿ ಕನ್ನಡ ಶಿಕ್ಷಕರಾದ ಶ್ರೀ. ವಾ. ಸು. ಅಡಬಡ್ಡಿ ಬಿ. ಎ. ಬಿ. ಟಿ. ಎಲ್ಲೆಲ್. ಬಿ. ಅವರು ಶಿಕ್ಷಕ-ವಿದ್ಯಾರ್ಥಿಗಳ ಕೋರಿಕೆಯಂತೆ, ಅಭಿನವಪಂಪ (ನಾಗಚಂದ್ರ) ನ ಹಳಗನ್ನಡದ ಪಠ್ಯಭಾಗಕ್ಕೆ ಈ ಬಗೆಯ "ಲಘುಟಿಪ್ಪಣಿ"ಯೊಂದನ್ನು ಬರೆದು ಪ್ರಸಿದ್ಧಿಸಿದುದು, ಸಂತೋಷದ ಮಾತು! ಇಂದಿನ ಅಭ್ಯಾಸಪತ್ರಿಕೆಯಲ್ಲಿ ಹಳಗನ್ನಡದ ಅಭ್ಯಾಸಕ್ಕೂ ಮಹತ್ವದ ಸ್ಥಾನವಿದ್ದು, ಅದನ್ನು ಶಿಕ್ಷಕ-ವಿದ್ಯಾರ್ಥಿಗಳು ಸಾಹಿತ್ಯ ದೃಷ್ಟಿಯಿಂದಲೂ, ಮುಖ್ಯವಾಗಿ ಪರೀಕ್ಷೆಯ ದೃಷ್ಟಿಯಿಂದಲೂ ಮನದಟ್ಟಾಗುವಂತೆ ಅಭ್ಯಸಿಸಬೇಕಾದರೆ, ಇಂಥ "ಲಘುಟಿಪ್ಪಣಿ"ಯು ಅವಶ್ಯ ಅತ್ಯಾವಶ್ಯವೆಂದು ಹೇಳುವುದು ಸಾಧ್ಯವಿಲ್ಲ. ಅದಕ್ಕಾಗಿ ನಾನು ಅವರನ್ನು ಅಭಿನಂದಿಸುತ್ತೇನೆ.

ಸರಕಾರೀ ಕನ್ನಡ ಟ್ರೇನಿಂಗಕಾಲೇಜ. | ಕೆ. ಜಿ. ಕುರ್ತಕೋಟಿ,
ವಿಜಾಪುರ.
ತಾ॥ ೧—೩ ೧೯೪೯ | ಪ್ರಿನ್ಸಿಪಾಲ.

# ಅರಿಕೆ.

ಈ ವರುಷದ ನನ್ನ ಶಿಕ್ಷಕ-ವಿದ್ಯಾರ್ಥಿಗಳ ಅಪೇಕ್ಷೆಯಂತೆ, ನಾನು ಬಹಳ ಅವಸರದಲ್ಲಿ, ಅಭಿನವಪಂಪನ, ಅಲ್ಪಸೇವೆಯನ್ನು ಕೈಕೊಂಡಿದ್ದೇನೆ! ಪರೀಕ್ಷೆಯ ದೃಷ್ಟಿಯಿಂದ ಓದುತ್ತಿರುವ, ಶಿಕ್ಷಕ-ವಿದ್ಯಾರ್ಥಿಗಳ ಮಟ್ಟಿಗಾದರೂ, ನನ್ನ ಈ "ಲಘುಟಿಪ್ಪಣಿ"ಯು ಉಪಯುಕ್ತವಾಗಬಹುದೆಂದೆಣಿಸಿದ್ದೇನೆ. ಮೂಲಪ್ರತಿಯನ್ನೋದಿ ಅಲ್ಲಲ್ಲಿ ಹಿತವಾದ ಸೂಚನೆಗಳನ್ನು ಮಾಡಿದ ಗೆ. ರೋಹಿಡೇಕರ ಶ್ಯಾಮರಾಯರಿಗೂ, ಪಂಡಿತ ಪೂಜಾರ ಅವರಿಗೂ, ಮುನ್ನುಡಿಬರೆದು ಆಶೀರ್ವದಿಸಿದ ಹಿರಿಯರಾದ ಪ್ರಿ. ಕೆ. ಜಿ. ಕುರ್ತಕೋಟಿ ಅವರಿಗೂ ಚಿರಋಣಿಯಾಗಿರುವೆನು. ಮುಖ್ಯವಾಗಿ ಈ ಉದ್ಯಮಕ್ಕೆ ಕಾರಣರಾದ ನನ್ನ ಶಿಕ್ಷಕ-ವಿದ್ಯಾರ್ಥಿಗಳನ್ನು ಇಲ್ಲಿ ಅಭಿನಂದಿಸದಿರಲಾರೆನು.

ವಿಜಾಪುರ.
ತಾ॥ ೩೧-೧-೧೯೪೯ | ವಾ. ಸು. ಅಡಬಡ್ಡಿ.

Bygopur ... II B. 3-3-49

26

ಓಂ!

# ಪಂಪರಾಮಾಯಣ.

[ ೪ ಸೀತಾಹರಣಂ ಪದ್ಯ ೩೯—೧೧೯. ]

ಕಥಾಸಂದರ್ಭ:— ರಾಮ ಲಕ್ಷ್ಮಣರು ದಂಡಕಾರಣ್ಯದೊಳಗೆ ನಡೆದು, ಕ್ರೌಂಚನದಿಯನ್ನು ದಾಟಿ, ಸೀತೆ ಬಳಲಿದಳೆಂದು ವಿಶ್ರಮಿಸುವರು. ಆ ನದಿಯ ಸಮೀಪದ ದಂಡಕಗಿರಿಯ ಗುಹೆಯಲ್ಲಿ ಯೋಜನದ ⅓ ಭಾಗ, ತಗ್ಗಾದ ಪ್ರದೇಶದಲ್ಲಿ ಪಾತಾಳಲಂಕೆಯೆಂಬುದೊಂದು ಪಟ್ಟಣ. ಖರನು ಅದಕ್ಕೆ ಅಧಿಪತಿ. ರಾವಣನ ತಂಗಿ ಚಂದ್ರನಖಿ, ಆತನರಸಿ. ಆಕೆಗೆ ಶಂಭುಕ, ಸುಂದರರು ಇಬ್ಬರು ಮಕ್ಕಳು. ಅವಳ ಹಿರಿಯಮಗ ಶಂಭುಕನು ಸೂರ್ಯಹಾಸವೆಂಬ ಖಡ್ಗದ ನಿಮಿತ್ತ, ಹನ್ನೆರಡು ವರುಷಗಳಿಂದಲೂ ತಪಶ್ಚರ್ಯ ನಡಸುವನು. ಸುತ್ತಲೂ ಬಿದಿರುಮೆಳೆ ಎತ್ತರವಾಗಿ ಹಬ್ಬಿ ನಿಲ್ಲುವುದು. ಆತನ ತಪಶ್ಚರ್ಯಕ್ಕೆ ಮೆಚ್ಚಿದ ಯಕ್ಷರೂ, ದೇವತೆಗಳೂ ಆ ಖಡ್ಗವನ್ನು ಬಿದಿರಮೆಳೆಯಲ್ಲಿಟ್ಟು, ಅಗುರುಚಂದನಗಳಿಂದಲೂ ಮಂದಾರ ಪಾರಿಜಾತ ಮೊದಲಾದ ಸುಮನೋಮಂಜರಿಗಳಿಂದಲೂ ಪೂಜಿಸುವರು. ಲಕ್ಷ್ಮಣನು ವನವಿಲಾಸ ನಿರೀಕ್ಷಣ ಕುತೂಹಲಚಿತ್ತನಾಗಿ, ಆ ದಿವ್ಯಾಮೋದವನ್ನು ಅನುಸರಿಸಿಹೋಗಿ, ಆ ಖಡ್ಗಕ್ಕೆ ಕೈನೀಡುವನು. ಅದರ ಹರಿತವನ್ನು ನೋಡಬಯಸಿ, ಆ ಬಿದಿರಮೆಳೆಗೆ ಹೊಡೆಯುವನು. ಒಳಗಿದ್ದ ಶಂಭುಕನ ರುಂಡವು ಕತ್ತರಿಸಿ ಭೂಮಿಗೆ ಬೀಳುವುದು. ನಿರಪರಾಧನನ್ನು ಕೊಂದದ್ದಕ್ಕಾಗಿ ಲಕ್ಷ್ಮಣನು ಕನಿಕರದಿಂದ ವ್ಯಾಕುಲನಾಗುವನು. ಇತ್ತ ಶಂಭುಕನ ತಾಯಿ ಚಂದ್ರನಖಿ ಮಗನ ದರ್ಶನಕ್ಕೆಂದು ಧಾವಿಸಿ, ಅಲ್ಲಿನ ದುಸ್ಥಿತಿಯನ್ನು ಕಂಡು ಶೋಕಿಸಿ "ಕೊಂದವನನ್ನು ಕೊಲ್ಲಲಾರದೆ ಬಿಡೆನೆಂದು ಪ್ರತಿಜ್ಞೆ ಮಾಡಿ ಹೆಜ್ಜೆಯ

ನ್ನನುಸರಿಸಿ ಲಕ್ಷ್ಮಣನಿದ್ದಲ್ಲಿಗೆ ಬಂದು, ಅವನ ಸೌಂದರ್ಯಕ್ಕೆ ಮರುಳಾ ಆತನೊಡನೆ ಒಡಗೂಡುವ ಆಸೆ ತಳೆಯುವಳು. ಆದರೆ ಸೀತೆಯ ಅಪಹಾಸ್ಯದಿಂದ ಕೆರಳುವಳು ಬಳಿಕ ಸೇಡುತೀರಿಸಿಕೊಳ್ಳುವ ಹಟದಿಂದ ತನ್ನ ಪತಿಯಾದ ಖರನಲ್ಲಿಗೆ ಬಂದು ಯಾವತ್ತೂ ವೃತ್ತಾಂತವನ್ನು ವಿಶದಪಡಿಸುವಳು. ಖರನು ಕೋಪಾವಿಷ್ಟನಾಗಿ ತನ್ನ ದೂತನನ್ನು ರಾವಣನಲ್ಲಿಗೆ ಕಳುಹಿಸಿ, ಒಡನೆಯೆ ೧೪೦೦೦ ಸೇನಾಪತಿಗಳಿಂದ ಕೂಡಿದ ಅಸಂಖ್ಯಾತ ಸೇನೆಯನ್ನು ಬಲಪಡಿಸಿಕೊಂಡು, ರಾಮಲಕ್ಷ್ಮಣರ ಮೇಲೆ ಸಾಗಿಬರುವನು. "ತನಗೆ ಯುದ್ಧವು ಅಸಾಧ್ಯವೆಂದು ಕಂಡುಬಂದಲ್ಲಿ ಸಿಂಹನಾದ ಮಾಡುವೆನೆಂದೂ, ಆಗ್ಗೆ ತನ್ನ ಸಹಾಯ್ಯಕ್ಕೆ ಬರಬಹುದೆಂದೂ" ಅಣ್ಣನಿಗೆ ಹೇಳಿ, ಲಕ್ಷ್ಮಣನು ಖರ-ದೂಷಣರನ್ನು ಇದಿರಿಸುವನು. ಲಕ್ಷ್ಮಣನಿಗೂ, ಖರದೂಷಣರಿಗೂ ಘನಘೋರ ಸಂಗ್ರಾಮವು ನಡೆಯುವುದು.....

ಅನ್ನೆಗಮತ್ತ ರಾವಣಂ ಖರದೂಷಣರಟ್ಟಿದ ಸುದ್ದಿಯಂ ಕೇಳ್ದು
ಸಂವರ್ತ ಸಮಯದ ಸಮುದ್ರದಂತೆ ಕದಡಿ:—

॥ಚಂಪಕ॥ ನಿಯಮದಿನಿರ್ದನಂ ನಿರಪರಾಧನನನ್ನೆಯದಿಂದಮೆನ್ನ ತಂ
ಗೆಯ ಮಗನಂ ವಿದಾರಿಸಿದನಂ ತರಿದಾತನ ಮೆಯ್ಯರಕ್ತವಾ
ರಿಯ ನೆರೆದಾರಿಪೆಂ ಖರನ ಶೋಕಕೃಶಾನುವನೆಂದು ಕಾಯ್ದು ದು
ರ್ಜಯನಸುರಾಧಿಪಂ ಜಡಿದನಾಸುರಮಂ ನಿಜ ಚಂದ್ರಹಾಸಮಂ ॥೩೯॥

**ಸರಳಾನುವಾದಃ** — ಅಷ್ಟರಲ್ಲಿ ರಾವಣನು ಅತ್ತ ಖರದೂಷಣರು ಕಳುಹಿದ ಸುದ್ದಿಯನ್ನು ಕೇಳಿ, ಪ್ರಳಯಕಾಲದ ಸಮುದ್ರದಂತೆ ಸಿಟ್ಟಿಗೆದ್ದು — "ನಿಯಮದಿಂದ ಇದ್ದಂಥವನೂ, ನಿರಪರಾಧಿಯೂ ಆದ ನನ್ನ ತಂಗೆಯ ಮಗನನ್ನು, ಅನ್ಯಾಯದಿಂದ ಕೊಂದಂಥವನನ್ನು ಕಡಿದು, ಆತನ ಮೈಯ್ಯೊಳಗಿನ ರಕ್ತವೆಂಬ ನೀರನ್ನು ಹನಿಸಿ, ಖರನ ಪುತ್ರಶೋಕವೆಂಬ ಬೆಂಕೆಯನ್ನು ಆರಿಸುವೆನು"— ಎಂದು ಸಿಟ್ಟಿಗೆದ್ದು, ಅಜೇಯನೂ, ರಾಕ್ಷಸರ ಒಡೆಯನೂ ಆದ ರಾವಣನು, ತನ್ನ ಚಂದ್ರಹಾಸವೆಂಬ ಪ್ರಚಂಡವಾದ ಖಡ್ಗವನ್ನು ಝುಳಪಿಸಿದನು.

ಶಬ್ದಾರ್ಥ:— ವಿದಾರಿಸು, ತುಂಡುತುಂಡುಮಾಡು; ವಾರಿ, ನೀರು; ಕೃಶಾನು, ಬೆಂಕೆ; ನಿಜ, ತನ್ನ; ಜಡಿಪಂ, ಝಳಪಿಸಿದನು.

ವ್ಯಾಕರಣ:— ರಕ್ತವೆಂಬವಾರಿ, ರಕ್ತವಾರಿ, ಶೋಕವೆಂಬ ಕೃಶಾನು, ಶೋಕಕೃಶಾನು (ಸಂಭಾವನಾ ಪೂ. ಪ ಕರ್ಮಧಾರಯ)

ಅಲಂಕಾರ:— ರೂಪಕ.

ಚಂಪಕ॥ ಒದವಿದ ಕೋಪವಹ್ನಿಯುರಿಯುಂ ಪೊಗೆಯುಂ ನೆಗೆವಂತೆ ಪದ್ಮರಾ
ಗದ ಹರಿನೀಲಮಮ್ಮಕುಟ ವಿಭೂಷಣರಶ್ಮಿ ಪಗಂಡುಗೊಳ್ಳಿವಿನಂ
ಕದನ ಮದೋದ್ಧತಂ ಖಚರನಾಯಕರಂ ಬರವೇಳ್ದು ಸಿಂಹ ಪೀ
ಠದಿ ನೀಡೆಳ್ದನಸ್ತಮಿತ ಪುಣ್ಯದಶಾನನನಾ ದಶಾನನಂ ॥೪೦॥

ಸರಳಾನುವಾದ:— (ರಾವಣನಲ್ಲಿ) ಉಂಟಾದ ಸಿಟ್ಟೆಂಬ ಬೆಂಕೆಯ ಉರಿಯೂ, ಹೊಗೆಯೂ ಮೇಲಕ್ಕೇಳುವಂತೆ ಮಾಣಿಕ (ಕೆಂಪುರತ್ನ) ಮತ್ತು ನೀಲರತ್ನಗಳಿಂದ ಖಚಿತವಾದ ಕಿರೀಟದ ಕಿರಣಗಳು ದಟ್ಟವಾಗಿ ಹೆಣೆದುಕೊಳ್ಳುತ್ತಿರಲು, ಯುದ್ಧಮದದಿಂದ ಉನ್ಮತ್ತನು ಮತ್ತು ಪುಣ್ಯದ ಪ್ರಭಾವವು ಮುಳುಗಿ ಹೋದಂತಹ ಮುಖವುಳ್ಳವನು ಆದ ಆ ರಾವಣನು, ಖೇಚರನಾಯಕರಿಗೆ ಬರಲಿಕ್ಕೆ ಹೇಳಿ, ಕೂಡಲೆ ಸಿಂಹಾಸನದಿಂದ ಎದ್ದನು.

ಶಬ್ದಾರ್ಥ:— ಒದವು, ಉಂಟಾಗು; ನೆಗೆ, ಮೇಲಕ್ಕೇಳು; ಪಗಂಡುಗೊಳ್, ದಟ್ಟವಾಗಿ ಹೆಣೆದುಕೊಳ್ಳು.

ವ್ಯಾಕರಣ:—ಕೋಪವೆಂಬವಹ್ನಿ, ಕೋಪವಹ್ನಿ (ಸಂ. ಪೂ. ಪ. ಕ) ಖಚರರನಾಯಕ, ಖಚರನಾಯಕ. (ಷ. ತ.)

ಅಲಂಕಾರ:— (೧) ಕೋಪವಹ್ನಿ.... (ರೂಪಕ). (೨) ಪದ್ಮರಾಗದ........ಪಗಂಡುಗೊಳ್ಳಿವಿನಂ.... (ಉತ್ಪ್ರೇಕ್ಷೆ) (೩) ಅಸ್ತಮಿತ.......ದಶಾನನಂ....(ಶ್ಲೇಷೆ).

||ಚಂಪಕ|| ಸೆಡೆಯೆ ಹಿಮಪ್ರಭಂ ನಿಜಯಶಃ ಪ್ರಭೆಯಿಂದಿನಸಂಶುಮಾಲೆ ಕೀ
ಳ್ಪಡೆ ಬಲಗಯ್ಯ ಬಾಳಪೊಳೆಪಿಂ ಕಡುಗಳ್ತಲೆ ದೇಹದೀಪ್ತಿಯಿಂ
ದೊಡರಿಸೆ ರಾಹು ತನ್ನ ಹರಿನೀಲ ವಿಮಾನಮನೇರುವಂತಿರಾ
ಗಡೆ ಕಡುಕಯ್ದು ಪುಷ್ಪಕ ವಿಮಾನಮನೇರಿದನಿಂದ್ರ ವಿದ್ವಿಷಂ ||೪೧||

**ಸರಳಾನುವಾದಃ**— ತನ್ನ (ರಾವಣನ) ಕೀರ್ತಿಯ ಪ್ರಕಾಶದಿಂದ ಚಂದ್ರನು ಹೆದರಲು (ಕಾಂತಿಹೀನನಾಗಲು) ಬಲಗೈಯೊಳಗಿನ ಖಡ್ಗದ ಹೊಳಪಿನಿಂದ ಸೂರ್ಯಕಿರಣಗಳ ತೇಜವು ಕಡಮೆಯಾಗಲು, ಶರೀರ ಕಾಂತಿಯಿಂದ ಕಗ್ಗತ್ತಲೆ ಉಂಟಾಗಲು, ರಾಹುವು, ತನ್ನ ಹರಿನೀಲ ಖಚಿತವಾದ ವಿಮಾನವನ್ನು, ಏರುವಹಾಗೆ, ಕೂಡಲೆ ರಾವಣನು (ಇಂದ್ರನ ವೈರಿಯು) ಪುಷ್ಪಕ ವಿಮಾನವನ್ನು ಏರಿದನು.

**ಶಬ್ದಾರ್ಥ**:— ಸೆಡೆ, ಅಂಜು ; ಬಾಳ್, ಖಡ್ಗ : ಕಡುಕಯ್, ವೇಗವನ್ನು ತೋರಿಸು.

**ವ್ಯಾಕರಣ**:— ಕಡುಗಳ್ತಲೆ (ವಿ. ಪೂ. ಪ. ಕ.); ದೇಹದದೀಪ್ತಿ (ಷ. ತ.) ; ಹಿಮದಂತೆ ಪ್ರಭೆಯುಳ್ಳವನು ಯಾವನೋ ಅವನು-ಹಿಮಪ್ರಭಂ (ಬಹುವ್ರೀಹಿ).

**ಅಲಂಕಾರ**:— ! ಸೆಡೆಯೆ........ಒಡರಿಸೆ-ಪ್ರತೀಪ (ವಿಪರ್ಯಾಸೋಪಮೆ); !! ರಾಹು......ಇಂದ್ರವಿದ್ವಿಷಂ ಉಪಮೆ

ಮತ್ತೇಭ|| ಪ್ರತಿಕೂಲಾನಿಲನಿಂ ಪತಾಕೆ ಮಗುಳೆಂಬಂತಿರ್ಗೆ ಕೈಸನ್ನೆಯಿಂ
ಶ್ರುತಿಯಂ ಸಾರ್ತರೆ ಪೋಪುದಲ್ತು ನಯಮೆಂಬಂತಾಗಿ ಘಂಟಾರಣ
ತ್ಕೃತಿ ಸಾರ್ತಂದದು ಪುಣ್ಯದೇವತೆಯ ಕಣ್ಣೀರೆಂಬಿನಂ ಮೇಘ ಸಂ
ಹತಿಯಿಂದಲ್ಲುಗೆ ಮುತ್ತು ಪುಷ್ಪಕ ವಿಮಾನಂ ದಂಡಕಾರಣ್ಯಮಂ ||೪೨||

**ಸರಳಾನುವಾದಃ**— ಇದಿರುಗಾಳಿಯಿಂದ ಪತಾಕೆಯು ಕೈಸನ್ನೆಯಿಂದ ಹೊರಳು ಎಂಬುದಾಗಿ ಸೂಚಿಸುತ್ತಿರಲು, ಘಂಟಾನಾದವು ಮುಂದೆ ಹೋಗುವುದು ಯೋಗ್ಯವಲ್ಲವೆಂದು ಹೇಳುತ್ತಿರಲು, ಮೇಘಗಳ ಹೊಡೆತ

ೆಂದ ಮುತ್ತುಗಳು ಪುಣ್ಯದೇವತೆಯು ಕಣ್ಣಿರೋ ಏನೋ ಅನ್ನುವಂತೆ ಅಲ್ಲಿ ಉದುರುತ್ತಿರಲು, ರಾವಣನ ಪುಷ್ಪಕ ವಿಮಾನವು ದಂಡಕಾರಣ್ಯವನ್ನು ಸಮೀಪಿಸಿತು.

ಶಬ್ದಾರ್ಥ:— ಮಗುಳ್, ಹಿಂದಿರುಗು; ಶ್ರುತಿ, ಕಿವಿ; ಸಂಹತಿ, ಗಟ್ಟಿಯಾಗಿ ಕೂಡಿಕೊಳ್ಳು (ತಾಗು); ಸಂಜ್ಞಾ (ದ್ಭ) ಸನ್ನೆ.

ವ್ಯಾಕರಣ:— ಪ್ರತಿಕೂಲವಾದಅನಿಲ, ಪ್ರತಿಕೂಲಾನಿಲ (ವಿ. ಪೂ. ಪ. ಕ.) ಕೈಯಸನ್ನೆ, ಕೈಸನ್ನೆ (ಷ. ತ.).

ಅಲಂಕಾರ:— ಉತ್ಪ್ರೇಕ್ಷೆ.

ಆ ಸಮಯದಲ್ಲಿ, ಒಂದು ತಂಪಾದ ಉಸುಬಿನ ಪ್ರದೇಶದಲ್ಲಿ ಒಣ ಸಿಡಿಲನ್ನು ಅನುಸರಿಸಿ ಹೊಳೆಯುತ್ತಿರುವ ಕೋಲ್‌ಮಿಂಚಿನಂತೆ ರಾಮಚಂದ್ರನ ಬಳಿಯಲ್ಲಿ ಕುಳಿತ ಸೀತಾದೇವಿಯನ್ನು ಕಂಡು—

ವ್ಯಾಕರಣ;— ತಾಣ (ತ್ಸ) ಸ್ಥಾನ; ತಣ್ಣಗಿನ ಪುಳಿಲ್, ತಣ್ಬುಳಿಲ್; ತಣ್+ಪುಳಿಲ್, ತಣ್ಬುಳಿಲ್ (ವಿ. ಪೂ. ಪ. ಕ.); ಕೊಂಕುಮಿಂಚು, ಕೋಲ್ಮಿಂಚು (ವಿ. ಪೂ. ಪ. ಕ.)

|ಕಂದ| ಬಲೆ ದೃಷ್ಟಿಗೆ ವಜ್ರದ ಸಂ
ಕಲೆ ಹೃದಯಕ್ಕೆನಿಪ ರೂಪವತಿ ಜಾನಕಿ ಕ
ಣ್ಬೊಲದೊಳಿರೆ ಪದ್ಮಪತ್ರದ
ಜಲಬಿಂದುವಿನಂತೆ ಚಲಿತಮಾದುದು ಚಿತ್ತಂ ||೪೩||

ಸರಳಾನುವಾದ:— ದೃಷ್ಟಿಗೆ ಬಲೆಯಂತೆಯೂ, ಹೃದಯಕ್ಕೆ ಕಠಿಣವಾದ ಬೇಡಿಯಂತೆಯೂ ಇರುವ ರೂಪವತಿ ಸೀತಾದೇವಿಯು ಕಣ್ಮುಂದೆ ಇರಲು, (ಆತನ (ರಾವಣ) ಮನಸ್ಸು ಕಮಲಪತ್ರಗಳ ಮೇಲಣ ನೀರಿನ ಹನಿಗಳಂತೆ ಚಂಚಲವಾಯಿತು.

ಶಬ್ದಾರ್ಥ:— ಶೃಂಖಲಾ (ದ್ಭ) ಸಂಕಲೆ, ಬೇಡಿ; ಕಣ್ಬೊಲ (ತ್ಸ) ದೃಷ್ಟಿಪಥ-ಕಣ್+ಪೊಲ, ಕಣ್ಬೊಲ (ಉತ್ತರಪದದ ಆದಿಯ ಕ, ತ, ಪ, ಗಳಿಗೆ ಗ, ದ, ಬಗಳು ಆದೇಶವಾಡುವವು-ವ್ಯಂಜನಸಂಧಿ-(ಕೈಪಿಡಿ ೧೩).

ಅಲಂಕಾರ:— ೧) ಬಲೆ........ಹೃದಯಕ್ಕೆ (ರೂಪಕ); (೨) ಪದ್ಮ........ಚಿತ್ತಂ (ಉಪಮಾ)

|ಕಂದ| ತಳತಳಿಸಿ ಪೊಳೆಯೆ ಸೀತೆಯ
ಚಳ ನಯನಂ ಖಚರ ಚಕ್ರವರ್ತಿಯ ಚಿತ್ತಂ
ಕೊಳದೊಳಗೇವಾಳೆ ತೆರಂ
ಪೊಳೆವಂತೆ ಕಲಂಕಿ ಕದಡಿದತ್ತಾ ಕ್ಷಣದೊಳ್ ||೪೪||

ಸರಳಾನುವಾದ: ಸರೋವರದಲ್ಲಿ ಎಳೆಯ ಮೀನುಗಳು ಹೊಳೆಯುತ್ತಿರುವಂತೆ, ಸೀತೆಯ ಚಂಚಲವಾದ ಕಂಣುಗಳು ಥಳಥಳಿಸಿ ಹೊಳೆಯುತ್ತಿರಲು, ವಿದ್ಯಾಧರ ಚಕ್ರವರ್ತಿಯಾದ ರಾವಣನ ಮನಸ್ಸು ಆ ಸಮಯದಲ್ಲಿ ಕಲುಕಿ ಹೊಯ್ದಾಡಿತು.

ಶಬ್ದಾರ್ಥ:— ಚಳ, ಚಂಚಲ; ಎಳವಾಳೆ, ಎಳೆಯ ಮೀನುಗಳು (ಬಾಳೆ, ಮೀನು); ಕ್ಷಣ (ದ್ಭ) ಚಣ; ಕದಡುವಿಗೆ ದತ್ತು ಎಂಬ ಭೂತ ಕಾಲದ ಪ್ರತ್ಯಯ ಸೇರಿದೆ-ಕದಡಿದತ್ತು.

ಅಲಂಕಾರ:—(೧) ಎಳವಾಳೆ ತೆರಂ (ಉಪಮಾ) (೨) ಳ, ಕಾರ ತಿರತಿರುಗಿ ಬಂದಿರುವುದರಿಂದ ಅನುಪ್ರಾಸಾಲಂಕಾರವೂ ಇದೆ.

|ಉತ್ಪಲ| ಹಾರಮರೀಚಿಮಂಜರಿ ಸುಧಾರಸಧಾರೆ ಸುಧಾಂಶು_ಲೇಖೆ ಕ
ರ್ಪೂರ ಶಲಾಕೆ ನೇತ್ರಸುಖದಾಯಕವಿಾ ದೊರೆತಲ್ಲವಿಾಕೆ ಶೃಂ
ಗಾರ ಸಮುದ್ರಮಂ ಕಡೆಯೆ ಹೃದ್ಭವನುದ್ಭವೆಯಾದಳೆಂನು ಕ
ಣ್ಣಾರೆ ದಶಾಸ್ಯನೀಕ್ಷಿಸಿದನೀಕ್ಷಿಸಿ ಕಣ್ಣರಿದಾರೆ ಮನ್ಮಥಂ ||೪೫||

ಸರಳಾನುವಾದ:— ಮುತ್ತಿನ ಸರದ ಕಿರಣಗಳ ಗೊಂಚಲೂ, ಅಮೃತದ ಮಳೆಯೂ, ಚಂದ್ರಬಿಂಬವೂ, ಕರ್ಪೂರದ ಕಂಬಿಯೂ ಕಣ್ಣಿಗೆ ಆನಂದವನ್ನು ಕೊಡುವುದರಲ್ಲಿ ಈಕೆಗೆ ಸಮಾನುವಾದವುಗಳಲ್ಲ. ಶೃಂಗಾ

ವ ಸಮುದ್ರವನ್ನು ಕಾಮನು ಕಡೆಯಲು ಈಕೆ ಹುಟ್ಟಿದಳು-ಎಂದು ರಾವಣನು ಸೀತಾದೇವಿಯನ್ನು ಕಣ್ತುಂಬ ನೋಡಿದ್ದನ್ನು, ಈತನ ದೃಷ್ಟಿಯು ಇಂಗಿತವನ್ನು ತಿಳಿದುಕೊಂಡು ಕಾಮನು ಕೂಗಿದನು.

**ಶಬ್ದಾರ್ಥ:**— ಮರೀಚಿ, ಕಿರಣ; ಸುಧಾ (ಪ್ರ) ಸೊದೆ, ಅಮೃತ; ಕರ್ಪೂರ (ಪ್ರ), ಕಪ್ಪುರ; ದೊರೆ, ಸಮಾನ! ಆರ್, ಗರ್ಜಿಸು; ಕಣ್+ಅರಿ ಕಣ್ಣರಿ, ಇಂಗಿತವನ್ನು ತಿಳಿದುಕೊಳ್ಳು

**ವ್ಯಾಕರಣ;**— ದಶ+ಆಸ್ಯ, ದಶಾಸ್ಯ, ಹತ್ತುಮುಖಗಳುಳ್ಳವನು ಯಾವನೋ ಅವನು. (ಬಹುವ್ರೀಹಿ).

**ಅಲಂಕಾರ:**— ಹಾರಮರೀಚಿ....ದೊರೆತಲ್ಲಂ (ಪ್ರತೀಪ-ಉಪಮಾನ ಕ್ಕಿಂತ ಉಪಮೇಯ ಶ್ರೇಷ್ಠ).

ಮ ಸ್ರಗ್ಧರಾ।

ಲರುಂ ವಿದ್ಯಾಧರ ಸ್ತ್ರೀಯರುಂ ಸುಮರಿಯರುಂ ಮಾನವ ಸ್ತ್ರೀಯರುಂ ತ
ಮ್ಮೊಲವಿಂ ಮೇಲ್ವಾಯ್ದೊಡಂ ಮುನ್ ಬಗೆಯದ ಬಗೆಯೇನಾದು
ದೆಂದುದ್ಧತಂ ಮೂ
ದಲಿಸುತ್ತುಂ ರೂಪಿನೊಳ್ ಮಚ್ಚರಿಸುವನೆನಗೆಂದಂಬನಂ ಬಟ್ಟಿವನ್ನಂ
ಬಲಕಾಲಕ್ಕೇಸುವೆತ್ತಂ ದಶಮುಖನೆನುತುಂ ಮನ್ಮಥಂ ಮಾಣದೆಚ್ಚಂ ॥೪೬॥

**ಸರಳಾನುವಾದ:**— ಕಲವರು ವಿದ್ಯಾಧರ ಸ್ತ್ರೀಯರೂ, ದೇವ ಲೋಕದ ಸ್ತ್ರೀಯರೂ, ಭೂಲೋಕದ ಸ್ತ್ರೀಯರೂ ತಮ್ಮ ಪ್ರೀತಿಯಿಂದ ಮೇಲೆ ಬಿದ್ದರೂ ಕಣ್ಣೆತ್ತಿ ನೋಡದ ರೀತಿ, ಈಗ ಏನಾಯಿತು? ಎಂದು ಆ ಅಸಭ್ಯನು ಕಾಮನು) ಹಂಗಿಸುತ್ತ, ಸೌಂದರ್ಯದಲ್ಲಿ ನನ್ನೊಡನೆ ಏರಾಟ ಮಾಡುವನು ಎಂದು-ಬಾಣವನ್ನು ಬಾಣವು ಕಳಿಸುವಂತೆ (ಬೆನ್ನಟ್ಟುವ ಹಾಗೆ), ಬಹಳ ದಿವಸಕ್ಕೆ ತನ್ನ ಬಾಣಪ್ರಯೋಗಕ್ಕೆ ರಾವಣನು ದೊರೆ ತನು-ಎನ್ನುತ್ತ ಕಾಮನು ಬಿಡದೆ (ಒಂದೇ ಸಮನೆ) ಬಾಣಗಳನ್ನು ಬಿಟ್ಟನು.

**ಶಬ್ದಾರ್ಥ:**— ಮೂದಲಿಸು, ಹೀಯಾಳಿಸು; ಏಸು, ಹೊಡೆತ; ಎಚ್ಚಂ, ಹೊಡದನು; ವಿದ್ಯಾಧರ (ಪ್ರ), ಬಿಜ್ಜೋದರ.

ವ್ಯಾಕರಣ:— ಅಂಬಂ + ಅಂಬು + ಅಟ್ಟು + ಅನ್ನಂ = ಬಾಣವನ್ನು ಬಾಣವು ಕಳಿಸು (ಅಟ್ಟು) ವಂತೆ.

|ಚಂಪಕ|
ನಡೆನಡು ಕೋಲ್ವರಂ ದಶಮುಖಂ ಮನಮಂ ಸುಮನಶ್ಶಿಲೀಮುಖಂ
ನಡೆಗಿಡೆ ಕೀರ್ತಿ ಬಾರ್ತೆಗಿಡೆ ಲಕ್ಷ್ಮಿ ಮೊದಲ್ಗಿಡೆ ಮಾನಸಿಕ್ಕೆ ನೇ
ರ್ಪಡುಗಿಡೆ ಸತ್ಯಶೌಚ ಗುಣಸಂಪದಮೇಳಿದನಾದನೆನ್ನರುಂ
ಕಿಡಿ ಮುಸಿಯಾದವೊಲ್ ವಿಷಯ ಲೋಭದಿನೇಳಿದರಾಗದಿರ್ಪರೇ ||೪೭||

ಸರಳಾನುವಾದ:— ಹೂವಿನ ಬಾಣಗಳು ಮನಸ್ಸನ್ನು ನಡು ಬಾಣದ ವರೆಗೆ ಚುಚ್ಚಲಾಗಿ, ಆತನ ಕೀರ್ತಿಯು ನಾಶವಾಗಲು, ಭಾಗ್ಯವು ಇಲ್ಲದಂತಾಗಲು ಮನಸ್ಸಿನ ಯೋಗ್ಯತೆಯು ಮೊದಲೇ ಮಾಯವಾಗಿ, ಸತ್ಯ-ನಿರ್ಮಲತ್ವ ಮೊದಲಾದ ಒಳ್ಳೆಯ ಗುಣಗಳ ಸಮೂಹದ ಸಂಘಟನೆ ಸಿಡಿದುಹೋಗಲು, ಕೆಂಡವು ಇದ್ದಲಿಯಾದಂತೆ, ರಾವಣನು ಕೀಳಾದನು. ಎಂಥವರಾದರೂ ಇಂದ್ರಿಯ ಸುಖದ ಆಸೆಯಿಂದ ಕೀಳಾಗದೆ ಇರುವರೇ!

ಶಬ್ದಾರ್ಥ— ಸುಮನಸ್, ಹೂವು; ಶಿಲೀಮುಖ, ಬಾಣ; ಏಳಿದ ನಾಗು, ನಿಂದೆಗೆ ಗುರಿಯಾಗು (ಕೀಳಾಗು); ಕಿಡಿ, ಬೆಂಕಿ; ಎನ್ನರುಂ, ಎಂತಹರು; ಮುಸಿ, ಇದ್ದಲಿ; ನೇರ್ಪಡು, ಸಂಘಟಿತವಾಗು; ಕಿಡು, ಕೆಟ್ಟುಹೋಗು.

ವ್ಯಾಕರಣ:— ಕೋಲನಡು, ನಡುಕೋಲ್ (ಅಂಶಿ).

ಅಲಂಕಾರ:— ಅರ್ಥಾಂತರನ್ಯಾಸ (ವಿಶಿಷ್ಟಾರ್ಥ ಸಾಮಾನ್ಯಾರ್ಥ ಇವು ಒಂದನ್ನೊಂದು ಪೋಷಿಸುವವು).

|ಮತ್ತೇಭ|
ವಿಹಿತಾಚಾರ ಮನಸ್ವಿಯಾಗತ ಗುಣ ಸ್ವಭ್ಯಾಶಿಗುಣ ದುಷ್ಟ ನಿ
ಗ್ರಹ ಶಿಷ್ಟ ಪ್ರತಿಪಾಲನ ಕ್ಷಮತೆಯಂ ಕಯ್ಗಾಯದನ್ಯಾಂಗ ನಾ
ಸ್ಪೃಹೆಯಂ ತಾಳ್ದಿದನಲ್ತೆ ಕಾಲವಶದಿಂ ಲಂಕೇಶ್ವರಂ ವಿಸ್ಮಯಾ
ವಹ ಮಲ್ತಬ್ಧಿಯುಮೊರ್ಮೆ ಕಾಲವಶದಿಂ ಮರ್ಯಾದೆಯಂ ದಾಂಟವೇ ||೪೮||

ಸರಳಾನುವಾದಃ— ಯೋಗ್ಯ ಆಚಾರವನ್ನೂ, ವಂಶಪರಂಪರೆ
ಯಿಂದ ಬಂದ ಸದ್ಗುಣದ ಕೀರ್ತಿಯನ್ನೂ, ದುಷ್ಟರನ್ನು ದಂಡಿಸುವ,
ಶಿಷ್ಟಜನರನ್ನು ರಕ್ಷಿಸುವ ಕಾರ್ಯದಕ್ಷತೆಯನ್ನೂ ಚೆನ್ನಾಗಿ ಕಾಯ್ದು
ಕೊಳ್ಳದೆ, ರಾವಣನು ಕಾಲವಶದಿಂದ, ಪರಸ್ತ್ರೀಯಳಿಗಾಗಿ ದುರಾಸೆಯನ್ನು
ಮಾಡಿದನಲ್ಲವೇ? ಇದು ಆಶ್ಚರ್ಯಕರವಲ್ಲ. ಸಮುದ್ರವು ಸಹ ಒಮ್ಮೆ
ಕಾಲವಶದಿಂದ ತನ್ನ ಸೀಮೆಯನ್ನು ದಾಟುವುದಿಲ್ಲವೇ?

ಶಬ್ದಾರ್ಥಃ—ಅನ್ವಯಾಗತ, ವಂಶಪರಂಪರೆಯಿಂದ ಬಂದ; ನಿಗ್ರಹ, ದಂಡನೆ ಸ್ಪೃಹೆ, ಆಸೆ; ಆವಹ, ಉಂಟುಮಾಡುವಂತಹ; ಮರ್ಯಾದೆ, ಎಲ್ಲೆ.

ವ್ಯಾಕರಣ:—ದುಷ್ಟರನಿಗ್ರಹ, ದುಷ್ಟನಿಗ್ರಹ. ಶಿಷ್ಟರ ಪ್ರತಿಪಾಲನೆ, ಶಿಷ್ಟಪ್ರತಿಪಾಲನೆ (ಷ. ತ.); ದುಷ್ಟನಿಗ್ರಹದಲ್ಲಿ ಶಿಷ್ಟಪ್ರತಿಪಾಲನೆಯಲ್ಲಿ ನಿಪುಣತೆ (ಸ ತ.)

ಅಲಂಕಾರಃ — ಅರ್ಥಾಂತರನ್ಯಾಸ.

|ಕಂದ| ಅವಿವೇಕಿ ದಶಮುಖಂ ದೃ
ಷ್ಟಿವಿಷಾಹಿಯ ಪೆಡೆಯ ಮಣಿಶಲಾಕೆಗೆ ಕೆಯ್‌ ನೀ
ಡುವ ಗಾಂಪನಂತೆ ರಘುವೀ
ರ ವಧೂ ಜನಕಜೆಗೆ ಮನದೊಳಳಿಪಂ ತಂದಂ ||೪೯||

ಸರಳಾನುವಾದಃ— ದೃಷ್ಟಿಮಾತ್ರದಿಂದ ವಿಷವನ್ನು ಕಾರುವ ವಿಷ
ಸರ್ಪದ ಹೆಡೆಯಲ್ಲಿನ ರತ್ನಮಣಿಗೆ, ಕೈಚಾಚುವ ಮೂರ್ಖನಂತೆ, ಅವಿವೇ
ಕಿಯಾದ ರಾವಣನು, ಶ್ರೀರಾಮಚಂದ್ರನ ಮಡದಿಯಾದ ಸೀತೆಯ ಸಲು
ವಾಗಿ, ಮನಸ್ಸಿನಲ್ಲಿ ವ್ಯಾಮೋಹವನ್ನು ಉಂಟುಮಾಡಿಕೊಂಡನು.

ಶಬ್ದಾರ್ಥ:— ವಿಷ+ಅಹಿ, ವಿಷಾಹಿ, ವಿಷಸರ್ಪ; ಗಾಂಪ, ಮೂಢ; ಅಳಿಪು, ವ್ಯಾಮೋಹ.

ವ್ಯಾಕರಣ;— ಕೈಯಂ ನೀಡು = ಕೈನೀಡು (ಕ್ರಿಯಾಸಮಾಸ)

|ಚಂಪಕ| ಪರವಧುಗಾಸೆಗೆಯ್ವಧಿಕ ಪಾತಕವೊಂದು ರಘುಪ್ರವೀರನೊಳ್
ಧುರದೊಳಿದಿರ್ಚದೋಸರಿಸಿ ವಂಚಿಸಿ ಸೀತೆಯನುಯ್ವ ಭೀತಿಯೊಂ
ದೆರಡರೊಳಂ ಜಸಂ ಮಸುಳೆ ತನ್ನವಲೋಕಿನಿಯಂ ದಶಾನನಂ
ಸ್ಮರಿಸಿದನಾತ್ಮ ಸತ್ವಗುಣ ಹಾನಿಯೆ ಸೂಚಿಸದೇ ವಿನಾಶಮಂ ||೫೦||

ಸರಳಾನುವಾದ:— ಪರಸ್ತ್ರೀಯಳಿಗೆ ಆಸೆಮಾಡುವ ಹೆಚ್ಚಿನ ಪಾಪವು ಒಂದು, ರಾಮನ ಸಂಗಡ ಯುದ್ಧದಲ್ಲಿ ಇದಿರಾಗದೆ ತಪ್ಪಿಸಿ, ಮೋಸದಿಂದ ಸೀತಾದೇವಿಯನ್ನು ಒಯ್ಯುವ ಹೆದರಿಕೆಯೊಂದು, ಇವೆರಡರಲ್ಲಿ (ಆತನ) ಕೀರ್ತಿಯು ಕುಂದಲು, ತನ್ನ ಅವಲೋಕಿನಿ (ವಿದ್ಯಾದೇವತೆ) ಯನ್ನು ರಾವಣನು ನೆನಸಿದನು. ಆತ್ಮದ ಸತ್ವಗುಣವು ಇಲ್ಲದಂತಾಗುವುದೇ ಮನುಷ್ಯನ ಅಧೋಗತಿಯನ್ನು ಸೂಚಿಸುವುದಿಲ್ಲವೇ!

ಶಬ್ದಾರ್ಥ:— ಓಸರಿಸು, ತಪ್ಪಿಸು; ಯಶ, (ತ್ಭ) ಜಸ; ಮಸುಳ್, ಕಾಂತಿಗೆಡು.

ವ್ಯಾಕರಣ:— ರಘುಪ್ರವೀರನೊಳ್.... ಇದಿರ್ಚದೆ.... ದ್ವಿತೀಯಾ ವಿಭಕ್ತಿಗಾಗಿ ಸಪ್ತಮಿಯ ಉಪಯೋಗ (ವಿಭಕ್ತಿಪಲ್ಲಟ).

ಅಲಂಕಾರ:— ಅರ್ಥಾಂತರನ್ಯಾಸ.

||ವಚನ|| ಅಂತು ನೆನೆಯಲೊಡಮವಲೋಕಿನೀ ವಿದ್ಯೆ ಬಂದು ಬೆಸನಾವುದೆನೆ ದಶಮುಖನಿವರಾರೆಂಬುದುಮಯೋಧ್ಯಾ ಸಿಂಹಾಸನಕ್ಕಧಿಪತಿಯುಮಿಕ್ಷ್ವಾಕುವಂಶ ಸಂಭವನುಮಪ್ಪನರಣ್ಯ ತನೂಭವಂ ದಶರಥ ನರನಾಥಂ ತದಪತ್ಯರಿವರ್ ಈ ಕಾಲದ ಬಲದೇವ ವಾಸುದೇವರ್ ದೇವತಾಧಿಷ್ಠಿತಂಗಳಪ್ಪ ವಜ್ರಾವರ್ತ ಸಾಗರಾವರ್ತಚಾಪರತ್ನಂಗಳನಪ್ರಯತ್ನದಿಂ ಪಡೆದ ರಾಮಲಕ್ಷ್ಮಣರೆಂಬರ್ ಮಹಾಬಲಪರಾಕ್ರಮರೀಕೆ ರಾಮನ ಮಹಾದೇವಿ ಮಿಥಿಲಾ ಪು

ಖೇಶ್ವರನಪ್ಪ ಹರಿವಂಶದ ಜನಕನ ತನೂಭವೆ ರಥನೂಪುರ ಚಕ್ರವಾಳ ಪುರಮನಾಳ್ವ ಚಂಡಬಲನಪ್ಪ ಪ್ರಭಾಮಂಡಲನ ತಂಗೆ ಸೀತಾದೇವಿಯೆಂಬು ದನಿವಾರಿಯನೀತನಿಂದಗಲ್ಚುವುಪಾಯಮಾವುದೆನೆ ದೇಪತಿ ಚಕಿತ ಚಿತ್ತೆ ಯಾಗಿ

( ಆಪ್ರಕಾರವಾಗಿ ನೆನೆಯಲು, ಕೂಡಲೇ ಅವಲೋಕಿನಿದೇವಿಯು ಬಂದು ಆಜ್ಞೆಏನೆಂದ. ಕೇಳಲು, ರಾವಣನು ಈತನು ಯಾರು ಎನ್ನಲು, ದಶರಥರಾಯನ ಮಕ್ಕಳಿವರು; ಈ ಕಾಲದ ಬಲದೇವ ವಾಸುದೇವರು; ದೇವತೆಗಳಿಂದ ಸ್ಥಾಪಿಸಲ್ಪಟ್ಟ ವಜ್ರಾವರ್ತ, ಸಾಗರಾವರ್ತಗಳೆಂಬ ಶ್ರೇಷ್ಠ ವಾದ ಬಿಲ್ಲುಗಳನ್ನು, ನಿರಾಯಾಸವಾಗಿ ದೊರಕಿಸಿದ ರಾಮಲಕ್ಷ್ಮಣರೆಂಬರು; ಬಹಳ ಪರಾಕ್ರಮಶಾಲಿಗಳು; ಈಕೆ ರಾಮನ ಹೆಂಡತಿ, ಮಿಥಿಲಾಪಟ್ಟಣದ ಅರಸನಾಗಿರುವ ಚಂದ್ರ (ಹರಿ) ವಂಶದ ಜನಕರಾಯನ ಮಗಳು. ರಥ ನೂಪುರ ಚಕ್ರವಾಳ ಪುರವನ್ನು ಆಳುವಂಥ ಪ್ರಚಂಡ ಬಲವಂತನಾದ ಪ್ರಭಾಮಂಡಲನ ತಂಗೆ ಸೀತಾದೇವಿ ಎಂದು ಹೇಳಲು, ಈಕೆಯನ್ನು ಈತನಿಂದ ಅಗಲಿಸುವ ಉಪಾಯವು ಯಾವುದು; ಎಂದು ರಾವಣನು ಕೇಳಲು, ದೇವಿಯು ಆಶ್ಚರ್ಯದಿಂದ ಕೂಡಿದ ಮನಸ್ಸುಳ್ಳವಳಾದಳು....)

||ಕಂದ|| ಆರಯ್ಯೆ ವಿರೋಧಂ ಸಾ
ಧಾರಣ ಪುರುಷರೊಳಮುಚಿತಮಲ್ತಧಿಕ ಬಲರ್
ಕಾರಣ ಪುರುಷರಿವರ್ ನಿ
ಷ್ಕಾರಣಮಿವರೊಳ್ ವಿರೋಧಮಂ ಮಾಡುವುದೇ ||೫೧||

**ಸರಳಾನುವಾದ:—** ವಿಚಾರಿಸಿದರೆ, ವಿರೋಧವು ಸಾಮಾನ್ಯ ಜನ ರಲ್ಲಿಯೂ ಯೋಗ್ಯವಲ್ಲ. ಇವರಂತೂ ಅತ್ಯಂತ ಶೂರರೂ, ಕಾರಣ ಪುರುಷರು. ಆದುದರಿಂದ ಇವರಲ್ಲಿ ಏನೂ ಕಾರಣವಿಲ್ಲದೆ ವಿರೋಧವನ್ನು ಮಾಡುವುದು ಯೋಗ್ಯವೇ ?

**ಶಬ್ದಾರ್ಥ:—** ಆರಯ್, ವಿಚಾರಿಸು.

ವ್ಯಾಕರಣಃ- ಅರಯ್+ಎ=ಅರಯೆ, ಅರಯ್ಯೆ (ಅರಯ್ ಎಂಬುದು ದೀರ್ಘಾದಿಯಾಗಿದ್ದರೂ ವಿಕಲ್ಪವಾಗಿ ದ್ವಿತ್ವವುಂಟು—ಕೈಪಿಡಿ ಪುಟ ೧೪)

||ಕಂದ|| ಕಾವ ಬೆಸಂ ನಿನ್ನದು ಸಕ
ಲಾವನಿಯನ ಧರ್ಮ್ಮನಿರತರಂ ನಿಯಮಿಸಿ ನೀ
ನೀ ವಿಷಯಕ್ಕೆರಗುವುದುಂ
ಕಾವರೆಕಣೆಗೊಂಡರೆಂಬ ನುಡಿಗೆಡೆ ಯಕ್ಕುಂ ||೫೨||

ಸರಳಾನುವಾದಃ— ಅನ್ಯಾಯದಲ್ಲಿ ತೊಡಗಿರುವವರನ್ನು ದಂಡಿಸಿ, ಯಾವತ್ತು ಭೂಮಿಯನ್ನು ಕಾಯುವ ಕೆಲಸ ನಿನ್ನದು. ನೀನು ಈ ಕೆಲಸಕ್ಕೆ ಕೈಹಾಕುವುದು "ರಕ್ಷಿಸುವವರೇ (ಕೊಲ್ಲಲಿಕ್ಕೆ) ಬಾಣವನ್ನು ಎತ್ತಿದರು" ಎಂಬ ಮಾತಿಗೆ ಆಸ್ಪದಕೊಟ್ಟಂತಾಗುವುದು.

ಶಬ್ದಾರ್ಥಃ— ನಿಯಮಿಸು, ದಂಡಿಸು; ಕಣೆ, ಬಾಣ.

ಅಲಂಕಾರಃ— ಅರ್ಥಾಂತರನ್ಯಾಸ.

||ಕಂದ|| ಅನ್ನೆಯದಿಂ ನಡೆವವರಂ
ನೀನ್ ನಿಯಮಿಸುವೈ ದಶಾಸ್ಯ ಪೆರನಾವಂ ನಿ
ನ್ನನ್ ನಿಯಮಿಸುವಂ ಮುನ್ನೀರ್
ಬೆನ್ನೀರೆನೆ ಬೆರಸಲಣ್ಣ ತಣ್ಣೀರೊಳವೇ ||೫೩||

ಸರಳಾನುವಾದಃ— ರಾವಣನೇ ? ಅನ್ಯಾಯದಿಂದ ನಡೆಯುವವರನ್ನು ನೀನು ಶಿಕ್ಷಿಸುವಿ. ಆದರೆ ಬೇರೆ ಯಾವನು ನಿನ್ನನ್ನು ಶಿಕ್ಷಿಸುವನು? ಸಮುದ್ರವೇ ಬೆಚ್ಚಗಾದರೆ ಬೆರಸಲಿಕ್ಕೆ ಬೇರೆ ತಂಣೀರು ಸಿಗುವುದೇ, ಅಣ್ಣಯ್ಯ ???

ಶಬ್ದಾರ್ಥಃ— ಮುನ್ನೀರ್, ಸಮುದ್ರ; ಬೆನ್ನೀರ್, ಬಿಸಿನೀರು; ಒಳವೇ, ಉಂಟೇ!

ವ್ಯಾಕರಣಃ— ಅನ್ಯಾಯ (ಧ್ಭ) ಅನ್ನೆಯ; ಮೂರು+ನೀರ್, ಮುನ್ನೀರ್ (ದ್ವಿಗು); ಬೆಚ್ಚನ್+ನೀರ್, ಬೆನ್ನೀರ್ (ವಿ. ಪೂ. ಪ. ಕ.)

ಟಿಪ್ಪಣಿ:— ಮುನ್ನೀರ್ಃ— ಮಳೆಯ ನೀರು, ಹರಿಯುವ (ನದಿಯ) ನೀರು, ಸೆಲೆಯಿಂದ ಏಳುವ ನೀರು ಹೀಗೆ ಮೂರು ತೆರನಾದ ನೀರು ಸಮುದ್ರದಲ್ಲಿ ಕೂಡಿರುವವರಿಂದ ಸಮುದ್ರಕ್ಕೆ ಮುನ್ನೀರ್ ಎಂಬ ಹೆಸರು ಉಂಟಾಗಿದೆ. ಈ ಮೂರು ತೆರನಾದ ನೀರಿನಲ್ಲಿ ಅನುಕ್ರಮವಾಗಿ, ಸೃಷ್ಟಿ, ಸ್ಥಿತಿ, ಲಯ ಶಕ್ತಿಗಳು ಅಡಕವಾಗಿವೆ.)

ಅಲಂಕಾರ:— ಅರ್ಥಾಂತರನ್ಯಾಸ.

ಮತ್ತೇಭ| ಪದಿನಾಲ್ ಸಾಸಿರ ಮುಖ್ಯನಾಯಕರ ಸಂಖ್ಯಾತಂ ಬಲಂ ಖೇದದಿಂ
ದಿದಿರಾದರ್ ಖರದೂಷಣರ್ ಬಗೆದನಿಲ್ಲತ್ತಲ್ ಭರಂಗೆಯ್ದು ಕಾ
ದಿದಪಂ ಲಕ್ಷ್ಮಣನಿತ್ತಲೀಕೆಯೊಡ ನೀತಂ ವೀತ ಶಂಕಂ ವಿನೋ
ದಮೊಳಿರ್ದಂ ರಘುವೀರ ನಿನ್ನರಿವರೊಳ್ ವಿದ್ವೇಷಣಂ ದೂಷಣಂ ||೫೪||

ಸರಳಾನುವಾದ:—ಹದಿನಾಲ್ಕು ಸಾವಿರ ಮುಖ್ಯ ಸೇನಾಪತಿಗಳೂ, ಅಸಂಖ್ಯಾತ ಸೈನ್ಯವೂ, ಖರದೂಷಣರೂ ಸಂತಾಪದಿಂದ ಯುದ್ಧದಲ್ಲಿ ಎದಿರಾದರು. ಅದನ್ನು ಲಕ್ಷಿಸದೆ, ಲಕ್ಷ್ಮಣನು ಅತ್ತಕಡೆಗೆ ಉತ್ಸಾಹದಿಂದ ಯುದ್ಧ ಮಾಡುತ್ತಿರುವನು. ಇತ್ತ ಹೆದರಿಕೆಯಿಲ್ಲದೆ, ಈ ರಾಮಚಂದ್ರನು ಸೀತೆಯ ಸಂಗಡ ವಿನೋದದಲ್ಲಿ ಇರುವನು. ಇಂಥ ಇವರಲ್ಲಿ ವೈರತ್ವವು ನಿಂದಾಸ್ಪದವಾದದ್ದು.

ಶಬ್ದಾರ್ಥಃ— ಖೇದ, ಸಂತಾಪ; ಶಂಕಾ, ಭಯ; ವೀತ, ಕಳೆದುಹೋದ (ಇಲ್ಲದಂತೆ); ಇನ್ನರ್, ಇಂಥವರಲ್ಲಿ.

||ವಚನ|| ಎಂದು ತೆರೆಯೆ ನುಡಿದುದರ್ಕೆ ಕಡುಮುಳಿದು—

ಶಬ್ದಾರ್ಥ:— ತೆರೆ, ಸ್ಪಷ್ಟ (ಬಿಚ್ಚು).

||ವ|| ಎಂದು ಬಿಚ್ಚುಮಾತನಾಡಿದುದಕ್ಕೆ ಬಹಳ ಸಿಟ್ಟಿಗೆದ್ದು—

||ಕಂದ|| ಮದನ ಯಶಃ ಪಟಹ ಧ್ವನಿ
ಪುದಿಯೆ ವಿಯಜ್ಜರನ ಕರ್ಣಮಂ ಹೃದಯಕ್ಕೆ
ಯ್ದಿ ಮದಿಲ್ಲದಿವ್ಯವಚನಂ
ಬಿದಿಯಂ ಮೀರುಗುಮೆ ಪೆರರ ಪೇಳ್ದುಪದೇಶಂ ||೫೫||

ಸರಳಾನುವಾದಃ - ಕಾಮನ ಜಯಭೇರಿಯ ಧ್ವನಿಯು ರಾವಣನ ಕಿವಿಯನ್ನು ಆವರಿಸಲು, ವಿದ್ಯಾದೇವತೆಯ ಒಳ್ಳೆಯ ಮಾತುಗಳು ಆತನ ಹೃದಯಕ್ಕೆ ಮುಟ್ಟಲಿಲ್ಲ ಎರಡನೆಯವರು ಹೇಳಿದ ಉಪದೇಶವು ವಿಧಿಯನ್ನೆಂದಾದರೂ ಮೀರುವುದೇ ?

ಶಬ್ದಾರ್ಥಃ— ವಿಯತ್, ಆಕಾಶ; ಚರ, ಅಡ್ಡಾಡು; ವಿಧಿ (ಪ್ರ) ಬಿದಿ, ದೈವ.

ವ್ಯಾಕರಣ:— ಮೀರು ( ಧಾ +ಗುಂ ( ಪ್ರ, ಪು. ಏಕವಚನದ ಪ್ರತ್ಯಯ)+ಏ (ಪ್ರಶ್ನಾರ್ಥಕ)—(ಶ. ದ. ಸೂತ್ರ ೨೨೬ .

ಅಲಂಕಾರಃ— ಅರ್ಥಾಂತರನ್ಯಾಸ.

||ಕಂದ|| ಆನೊಂದಂ ಬೆಸಗೊಂಡೊಡೆ
ನೀನೊಂದನಿದೇಕೆ ಪೆಳ್ದೆ ಪೇಳ್ದುದನೇಗೊಳ್
ಏನೆಂದು ಕೀರಿ ನುಡಿವಯ್
ಮಾನವರಾಂತಪರೆ ಮುಳಿಸೆ ಲಂಕಾಪತಿಯಂ ||೫೬||

ಸರಳಾನುವಾದಃ— ನಾನೊಂದನ್ನು ಕೇಳಿದರೆ ನೀನು ಮತ್ತೊಂದನ್ನು ಏಕೆ ಹೇಳಿದೆ? ನಾನು ಹೇಳಿದ್ದನ್ನೇ ಒಪ್ಪು. ನಾನು ಯಾರೆಂದು ತಿಳಿದು ಚೀರಿ (ತಿರಸ್ಕರಿಸಿ) ಮಾತಾಡುವಿ; ಹುಚ್ಚೀ ರಾವಣನನ್ನು ಮನುಷ್ಯರು ಎಂದಾದರೂ ಇದಿರಿಸಬಲ್ಲರೇ ?

ಶಬ್ದಾರ್ಥಃ— ಬೆಸಕೊಳ್, ಕೇಳು; ಏಗೊಳ್, ಒಪ್ಪು; ಕೀರಿ, ಚೀರು; ಆನ್, ಇದಿರಿಸು.

||ವಚನ|| ಎಂಬುದುಂ ವಿದ್ಯಾದೇವತೆಕನಲ್ದು (ಎಂಬುದನ್ನು ಕೇಳಿ ವಿದ್ಯಾದೇವತೆಯು ಸಿಟ್ಟಿಗೆದ್ದು).

||ಕಂದ|| ಜನಕಜೆಯನುಯ್ಯೆ ದಶರಥ
ತನೂಜರಿಂ ಮರಣಮಾಗಲೆಂದಿರ್ದಪುದೀ
ತನ ಕಯ್ಯ ಳವಲ್ತು ಪುರಾ
ತನ ಕರ್ಮಾಯತ್ತಮಲ್ತೆ ದೇಹಿಗಳೆಸಕಂ ||೫೭||

ಸರಳಾನುವಾದ:— ಸೀತಾದೇವಿಯನ್ನು ಒಯ್ಯಲು, ದಶರಥನ ಮಕ್ಕಳಿಂದ ಮರಣವಾಗಬೇಕೆಂದು ಇರುವುದು. ಇದು ಈತನ ಸ್ವಾಧೀನ ವಲ್ಲಿಲ್ಲ. ಜೀವಿಗಳ ಹಣೆಯ-ಬರೆಹವು ಹಿಂದಿನ ಜನ್ಮದ ಕರ್ಮದ ಸ್ವಾಧೀನ ವಲ್ಲವೇ !

ಶಬ್ದಾರ್ಥ:— ಆಯತ್ತ, ಅಧೀನ; ದೇಹಿಗಳ, ಜೀವಿಗಳ; ಎಸ ಕಂ, ಹಣೆಯಬರೆಹ.

ಅಲಂಕಾರ:— ಅರ್ಥಾಂತರನ್ಯಾಸ.

||ಕಂದ|| ಗೆಲಲೆನಗೆ ರಿಪುಬಲಂ ಬ
ಲ್ವಲಮಾದೊಡೆ ಸಿಂಹನಾದಮಂ ಮಾಳ್ಪೆಂ ಬೆಂ
ಬಲಮಾಗಿ ಬರ್ಪುದೆಂದೀ
ಬಲದೇವಂಗರಿಪಿ ವಾಸುದೇವಂ ಪೋದಂ ||೫೮||

ಸರಳಾನುವಾದ:— "ವೈರಿಗಳ ಸೈನ್ಯವನ್ನು ಜಯಿಸಲಿಕ್ಕೆ ನನಗೆ ಅಸಾಧ್ಯವಾದರೆ, ನಾನು ಸಿಂಹನಾದ ಮಾಡುವೆನು. ನೀನು ಸಹಾಯಕ ನಾಗಿ ಬರಬೇಕೆಂದು"— ಈ ರಾಮಚಂದ್ರನಿಗೆ ( ಬಲದೇವನಿಗೆ ) ಹೇಳಿ ಲಕ್ಷ್ಮಣ (ವಾಸುದೇವ)ನು ಯುದ್ಧಕ್ಕೆ ಹೋದನು.

ಶಬ್ದಾರ್ಥ: ಬಲ್ವಲ, ಹೆಚ್ಚಿಗೆ ಬಲವುಳ್ಳದ್ದು.

ವ್ಯಾಕರಣ:— ಬಲ್+ಬಲ, ಬಲ್ವಲ.

||ವಚನ|| ಎಂದು ರಾವಣಂಗೆ ಪೇಳ್ದುದುಮುಮಂ ರಣಕ್ಷೋಣಿಗೆ ಪೋಗಿ ಲಕ್ಷ್ಮಣಂ ಕೇಳದಂತು ವೈಕುರ್ವಣಶಕ್ತಿಯಿಂ ಸಿಂಹನಾದಂಗೆಯ್ಯೆನೆ ವಿದ್ಯಾ ದೇವತೆ ಪೋಗಿ ಅಂತೆಗೆಯ್ದುದುಮಾ ಧ್ವನಿಯಂ ಕೇಳ್ದು- [ಎಂದು ರಾವಣ ನಿಗೆ ವಿದ್ಯಾದೇವತೆಯು) ಹೇಳುತ್ತಿರಲು- "ಯುದ್ಧಭೂಮಿಗೆ ಹೋಗಿ ಲಕ್ಷ್ಮಣ

ಣನು ಕೇಳದಂತೆ ಮಾಯಾಶಕ್ತಿಯಿಂದ ಸಿಂಹನಾದವನ್ನು ಮಾಡು" ಎಂದು ರಾವಣನೆನ್ನಲು, ವಿದ್ಯಾದೇವತೆ ಹೋಗಿ, ಹಾಗೆಯೇ ಮಾಡಲು, ಆ ಧನಿಯನ್ನು (ರಾಮಚಂದ್ರನು) ಕೇಳಿ—

||ಮತ್ತೇಭ||
ಧುರದೊಳ್ ದುರ್ಜಯನಾರ್ಗಮೆನ್ನನುಜನೆಂಬೀ ನಿಶ್ಚಯಂಗೆಟ್ಟು ಸಿಂ
ಹರವಂದೋರಿದ ನಾಹವಂ ವಿಷಮಮೆಂಬೀ ವಿಸ್ಮಯಂ ಚಿತ್ತದೊಳ್
ದೊರೆಕೊಂಡತ್ತು ರಘೂದ್ವಹಂಗವುಳಿದಂದೆಂತಕ್ಕುಮೋ ಜಾನಕೀ
ಹರಣಂ ಕರ್ಮವಿಪಾಕಮಾರ ಬಗೆಗಂ ವೈಕಲ್ಯಮಂ ತಾರದೇ ||೪೯||

**ಸರಳಾನುವಾದ:**— "ಯುದ್ಧದಲ್ಲಿ ನನ್ನ ತಮ್ಮನು ಯಾರಿಗೂ ಜಯಿಸಲು ಅಸಾಧ್ಯನು" ಎಂಬ ಈ ನಿಶ್ಚಯವು ಇಲ್ಲದಂತಾಗಿ, ಸಿಂಹನಾದವನ್ನು ಮಾಡಿದನು. ಆದುದರಿಂದ ಯುದ್ಧವು ಆತನಿಗೆ ಪ್ರತಿಕೂಲವಾಗಿರುವುದು" ಎಂಬ ಭ್ರಾಂತಿಯು, ರಾಮಚಂದ್ರನಿಗೂ ಉದಯಿಸಿತು. ಹಾಗಿಲ್ಲದಿದ್ದರೆ ಅಂದು ಸೀತಾದೇವಿಯ ಹರಣವು ಹೇಗೆ ಆಗುತ್ತಿತ್ತು? ಕರ್ಮಫಲವು ಯಾರ ಮನಸ್ಸಿನಲ್ಲಿ ದೌರ್ಬಲ್ಯವನ್ನು ಉಂಟುಮಾಡಲಿಕ್ಕಿಲ್ಲ!

**ಶಬ್ದಾರ್ಥ:**— ಅನುಜ, ತಮ್ಮ; ರವಂ, ನಾದ; ಆಹವ, ಯುದ್ಧ; ವಿಷಮ, ಪ್ರತಿಕೂಲ; ಉಳಿದಂದು, ಹಾಗಿಲ್ಲದಿದ್ದರೆ; ವಿಪಾಕ, ಫಲ; ವೈಕಲ್ಯ, ದೌರ್ಬಲ್ಯ.

**ಅಲಂಕಾರ:**— ಅರ್ಥಾಂತರನ್ಯಾಸ.

||ಕಂದ|| ಶಾಪಂ ಪೇಳ್ದು ಜಟಾಯುವ
ನೋಪಳನಿರಪೇಳ್ದು ವೈರಿಬಲಮಂ ತವಿಸಲ್
ಪೋಪಂತಿರೆ ಧ್ವಂಡಧರಂ ।
ಚಾಪಧರಂ ಬಲನವಂಧ್ಯ ಕೋಪಂ ಪೋದಂ ||೬೦||

**ಸರಳಾನುವಾದ:**— ಜಟಾಯುವಿಗೆ ಕಾವಲಾಗಿ ಇರುವುದ ಹೇಳಿ, ಪ್ರಿಯತಮೆಗೆ ಅಲ್ಲಿಯೇ ಇರುವಂತೆ ತಿಳಿಸಿ, ಯಮನೇ ಹೋಗುದಂತೆ,

ರಿಗಳ ಸೈನ್ಯವನ್ನು ನಾಶಮಾಡಲು, ವಜ್ರಾವರ್ತ ಬಿಲ್ಲನ್ನು ಧರಿಸಿದ ನೂ, ಹುಸಿಹೋಗದ ಸಿಟ್ಟುಳ್ಳವನೂ ಆದ ಶ್ರೀರಾಮಚಂದ್ರನು ಯುದ್ಧಕ್ಕೆ ಹೊರಟನು.

ಶಬ್ದಾರ್ಥ:— ಕಾಪು, ರಕ್ಷಣೆ; ಓಪಳ್, ಪ್ರಿಯಳು; ಓ, ಪ್ರೀತಿಸು; ವು, ನಲ್ಲ; ಓಪಳ್, ನಲ್ಲೆ; ತವಿಸು, ನಾಶಮಾಡು. ದಂಡಧರಂ, ಮ; ಚಾಪಧರಂ, ಶ್ರೀರಾಮಚಂದ್ರನು; ವಂಧ್ಯ, (ಧ್ಯ) ಬಂಜೆ ವಂಧ್ಯ)+ಕೋಪಂ, ಹುಸಿಹೋಗದ ಸಿಟ್ಟುಳ್ಳವನು).

ವ್ಯಾಕರಣ:— ದಂಡವನ್ನು ಧರಿಸಿದವನು ಯಾವನೋ ಆವನು ಡಧರ ಅಂದರೆ ಯಮ (ಬಹುವ್ರೀಹಿ).

॥ವಚನ॥ ಅನ್ನೆಗಮಿತ್ತಲ್ (ಅಷ್ಟರಲ್ಲಿ ಇತ್ತಕಡೆಗೆ) —

॥ಕಂದ॥ ಅಳಿಪಿ ಪರವಧುಗಧೋಗತಿ
ಗಿಳಿವುದನಭಿನಯಿಸುವಂತೆ ಸೀತೆಯ ಸಾರ
ಣ್ಗೆಳಿದಂ ನಭದಿಂ ಖಚರಂ
ಪಳಿಗಂ ಪಾಪಕ್ಕಮಂಜದವರೇಗೆಯ್ಯರ್ ॥೬೧॥

ಸರಳಾನುವಾದ:— ಪರಸ್ತ್ರೀಯಳಿಗೆ ಆಸೆಪಟ್ಟು ನರಕಕ್ಕೆ ಇಳಿಯುವುದನ್ನು ಪ್ರತ್ಯಕ್ಷ ನಟಿಸಿ ತೋರಿಸುವನೋ ಎನ್ನುವಂತೆ, ಆಕಾಶ ದ ರಾವಣನು, ಸೀತೆಯ ಸಮೀಪಕ್ಕೆ ಇಳಿದನು. ನಿಂದೆಗೂ, ಪಾಪಕ್ಕೂ ಅಂಜದವರು ಏನನ್ನು ಮಾಡದೆ ಬಿಡರು!

ಶಬ್ದಾರ್ಥ:— ಅಳಿಪು, ಮೋಹಿಸು; ಸಾರಣ್, ಸಮೀಪ.

ವ್ಯಾಕರಣ:— ಏಂಗೆಯ್ಯರ್, ಏಗೆಯ್ಯರ್ (ಕ್ರಿಯಾಸಮಾಸ)

ಅಲಂಕಾರ:- ಉತ್ಪ್ರೇಕ್ಷೆ, ಕೊನೆಯ ಪಙ್ತಿಯಲ್ಲಿ ಅರ್ಥಾಂತರನ್ಯಾಸ.

॥ಕಂದ॥ ದೋಷಿ ಪಿಡಿವಂತೆ ದಿವ್ಯದ
ಕಾಸಿದ ಕುಳುವಂ ಕಡಂಗಿ ಕಾಳೋರಗನಂ
ಕೂಸು ಪಿಡಿವಂತೆ ಪಿಡಿದಂ
ಸಾಸಿಗನ ವಿವೇಕಿ ಸೀತೆಯಂ ದಶಕಂಠಂ ॥೬೨॥

**ಸರಳಾನುವಾದಃ**— ಅಪರಾಧಮಾಡಿದನನು ಸತ್ಯಪರೀಕ್ಷೆಗಾಗಿ ಇಟ್ಟ ಕಾಸಿದ ಕುಡವನ್ನು ಹಿಡಿಯುವಂತೆ, ಕುತೂಹಲದಿಂದ ಕೂಸು ಕೃಷ್ಣಸರ್ಪವನ್ನು ಹಿಡಿಯುವ ಹಾಗೆ, ಸಹಾಸಿಗನೂ, ವಿಚಾರಗೇಡಿಯೂ ಆದ ರಾವಣನು ಸೀತೆಯನ್ನು ಹಿಡಿದನು.

**ಶಬ್ದಾರ್ಥಃ**— ಕಡಂಗು; ಉತ್ಸಾಹವನ್ನು ಹೊಂದು, ಅವಸರಪಡು;

**ವ್ಯಾಕರಣಃ**— ಕಾಳ+ಉರಗ (ವಿ. ಪೂ. ಪ. ಕ.).

**ಅಲಂಕಾರಃ**— ಉಪಮೆ.

|ವಚನ| ಅಂತುಪಿಡಿದು ನಿಜವಿಮಾನದೊಳಿಟ್ಟು (ಹಾಗೆ ಹಿಡಿದು ತನ್ನ ವಿಮಾನದಲ್ಲಿ (ಸೀತೆಯನ್ನು) ಇರಿಸಿ,

|ಕಂದ|| ದಶಮುಖನುನ್ಮುಖನಳಿಸಿಂ
ಶಶಿಮುಖಿಯಂ ಜನಕಸುತೆಯನ್ನಾವರಿಸೆ ಚತು
ರ್ದಶಭುವನಮನಪವಾದಂ
ಶಶಿಕಲೆಯಂ ಸೈಂಹಿಕೇಯನುಯ್ವಂತುಯ್ದಂ

**ಸರಳಾನುವಾದಃ**— ಹದಿನಾಲ್ಕು ಲೋಕಗಳಲ್ಲಿ ಅಪವಾದ (ಕತ್ತಲೆ ಅಪಕೀರ್ತಿ) ಯು ಆವರಿಸುತ್ತಿರಲು ರಾಹುವು ಚಂದ್ರನನ್ನು ಒಯ್ಯುವಂತೆ, ಸೊಕ್ಕಿದ ರಾವಣನು ಆಸೆಯಿಂದ ಚಂದ್ರಮುಖಿಯಾದ ಸೀತೆಯನ್ನು ಒಯ್ದನು.

**ಶಬ್ದಾರ್ಥಃ**— ಉನ್ಮುಖ, ಸೊಕ್ಕಿದ; ಅಪವಾದಂ, ಅಪಕೀರ್ತಿ, ಕತ್ತಲೆ; ಶಶಿಕಲೆ, ಚಂದ್ರಬಿಂಬ; ಸೈಂಹಿಕೇಯ, ರಾಹು (ಸಿಂಹಿಕೆಯ ಮಗ).

**ಅಲಂಕಾರಃ**— ಅಪವಾದಂ { ಅಪಕೀರ್ತಿ, ಕತ್ತಲೆ } ಶ್ಲೇಷೆ.

||ವಚನ|| ಆಗಳದಂ ಕಂಡು ಜಟಾಯು ಕೋಪಾನಲ ವಿಸ್ಫುಲಿಂಗ ದಂತಾರಕ್ತಂಗಳಾದ ಕಣ್ಗಳಿಂ ನುಂಗುವಂತೆ ನೋಡಿ. (ಆಗ್ಗೆ ಅದನ್ನು ನೋಡಿ; ಜಟಾಯು, ಕೋಪವೆಂಬ ಬೆಂಕಿಯ ಕಿಡಿಗಳಂತೆ, ಕೆಂಪಾದ ಕಣ್ಣುಗಳಿಂದ ನುಂಗುವಂತೆ ನೋಡಿ.)

ವ್ಯಾಕರಣ:—ಕೋಪ+ಅನಲ, ಕೋಪಾನಲ (ಸ. ಪೂ. ಪ. ಕ.)
ಕೋಪವೆಂಬ ಬೆಂಕಿಯ ವಿಸ್ಫುಲಿಂಗ (ಕಿಡಿ) [ಷ. ತ.] ರೂಪಕಾಲಂಕಾರ.

||ಕಂದ|| ಪತಿ ಕಾಸುವೇಳ್ದು ಪೋದಂ
ಸತಿಯಂ ಕಳ್ದುಯ್ದಪಂ ಖಳಂ ಮಾರ್ಕೊಂಡು
ದ್ಧತನಂ ಮದೀಯ ತುಂಡಾ
ಹತಿಯಿಂ ಶತಖಂಡಮಾಗೆ ಮಾಳ್ಪೆನೆನುತ್ತುಂ ||೬೪||

**ಸರಳಾನುವಾದ:** – "ನನ್ನ ಒಡೆಯನಾದ ಶ್ರೀರಾಮಚಂದ್ರನು ...ಯಲಿಕ್ಕೆ ಹೇಳಿ ಹೊರಟುಹೋದನು. ಈ ಪತಿವ್ರತೆಯನ್ನು ಈ ನೀಚನು ...ದ್ದೊಯ್ಯುತ್ತಿರುವನು. (ಈತನಿಗೆ) ಇದಿರಾಗಿ ಈ ಉದ್ಧಟನನ್ನು ನನ್ನ ...ಚುವಿನ ಹೊಡೆತದಿಂದ ನೂರಾರು ತುಂಡುಗಳಾಗುವಂತೆ ಮಾಡು...ನು"— ಹೀಗೆನ್ನುತ್ತ

**ಶಬ್ದಾರ್ಥ:** ಪತಿ, ಒಡೆಯ; ಮಾರ್ಕೊಳ್, ಇದಿರಾಗು; ಮದೀಯ, ...ನ್ನ; ತುಂಡ, ಚಂಚು; ಆಹತಿ, ಹೊಡೆತ.

...ಚಂಪಕ|| ಖರನಖರಂಗಳಿಂ ನಿಶಿತ ಚಂಚುಗಳಿಂದಿರಿಯಲ್ ಕರುತ್ತು ಸಾ
ರ್ಚಿನೆ ನಸುನಕ್ಕು ಪೊಯ್ಯೆ ಕರದಿಂ ಗಮನೋತ್ಸುಕನಿಂದ್ರವೈರಿ ತ
ನ್ನೆರಡು ಮೆರಂಕೆಗಳ್ ಮುರಿದಿಳಾತಳದೊಳ್ ಕೆಡೆದತ್ತು ವಜ್ರದಿಂ
ಸುರಪತಿ ಪೊಯ್ಯೆ ಬೆಟ್ಟು ಕೆಡೆವಂತೆ ಜಟಾಯು ನಭೋವಿಭಾಗದಿಂ||೬೫||

**ಸರಳಾನುವಾದ:** — ಹದನವಾದ ಉಗುರುಗಳಿಂದಲೂ, ತೀಕ್ಷ್ಣ ...ವಾದ ಚಂಚುವಿನಿಂದಲೂ ಚುಚ್ಚಬೇಕೆಂದು ವಿಕಾರವಶನಾಗಿ ಸಮೀಪಕ್ಕೆ ...ಬರಲು, ಪಾರಾಗಿಹೋಗುವ ಕುತೂಹಲದಿಂದ ಕೂಡಿದ ರಾವಣನು, ...ಮುಗುಳುನಗೆ ನಕ್ಕು ತನ್ನ ಕೈಯ್ಯಿಂದ ಹೊಡೆಯಲು, ಇಂದ್ರನು ತನ್ನ ...ವಜ್ರಾಯುಧದಿಂದ ಹೊಡೆಯಲು ಪರ್ವತವು ಬಿದ್ದಂತೆ, ಅದರ ಎರಡೂ ...ರೆಕ್ಕೆಗಳು ಮುರಿದು ಜಟಾಯುವು ಆಕಾಶಮಾರ್ಗದಿಂದ ಭೂಮಿಗೆ ಬಿತ್ತು.

ಶಬ್ದಾರ್ಥ:— ಖರ, ಹದನ; ನಿಶಿತ, ತೀಕ್ಷ್ಣ; ಕರುತ್ತು, ವಿಕಾರ ವಶಸಾಗು, (ತಳಮಳಗೊಳ್ಳು); ಎರಂಕೆ, ರೆಕ್ಕೆ.

ವ್ಯಾಕರಣ:— ಇಂದ್ರನ ವೈರಿಯಾವನೋ ಅವನು (ಬ. ಸ.); ನಭದ ವಿಭಾಗ, ನಭೋವಿಭಾಗ (ಷ. ತ.) — ಉಪಮಾಲಂಕಾರ.

||ಚಂಪಕ||

ಮನಮೆಳದಾಗೆ ಮನ್ಯುವಿಗೆ ತಳ್ತಿಮೆಯಿಂ ಕರೆಗಣ್ಮೆ ಸೂಸೆ ಕ
ಣ್ಬನಿ ಗಳಕಂದಳಂ ಬಿಗಿಯೆ ಗದ್ಗದ ನಿಸ್ವನಮುಣ್ಮೆ ಹಾ ರವಂ
ಜನಿಯಿಸೆ ಸೀತೆ ಭೀತೆ ದೆಸೆಗೆಟ್ಟಿರ್ದೆಗೆಟ್ಟಳೆ ಪೊಣ್ಮೆನತ್ತು ಮೂ
ರ್ದನಿ ದೆಸೆಯೊಳ್ ದಿಗಂಗನೆಯರುಂ ಬಿಡದಂದೊಡನಳ್ವ ಮಾಳ್ಕೆಯಿಂ ||೬೬||

ಸರಳಾನುವಾದ:—ಮನಸ್ಸು ಖಿನ್ನವಾಗಲು (ಕುಗ್ಗಲು) ದುಃಖವು ಹೆಚ್ಚಾಗಲು, ಮುಚ್ಚಿದ ಕಣ್ಣೆವೆಗಳಿಂದ ಕಣ್ಣೀರು ಹೆಚ್ಚಾಗಿ ಸುರಿಯಲು, ಬಾಳೆಯ ಗೊನೆಯಂತಿರುವ ಕಂಠವು ಬಿಗಿಯಲು, ನಡಗುವ ದನಿಯು ಉಂಟಾಗಲು, ಹಾ ! ಎಂಬ ಶಬ್ದವು ಉದಯಿಸಲು, (ಹೆದರಿದ ಸೀತಾ ದೇವಿಯು ದಿಕ್ಕೆಟ್ಟು (ಏನೂ ತಿಳಿಯದೆ) ಧೈರ್ಯಗುಂದಿ ಅಳಹತ್ತಲು, ದಿಕ್ಕುಗಳೆಂಬ ಸ್ತ್ರೀಯರು, ಅಂದು ಆಕೆಯೊಡನೆ ಅಳುತ್ತಿರುವರೋ ಏನೋ ಅನ್ನುವಂತೆ, ದಿಕ್ಕುಗಳೆಲ್ಲಿಯೂ, ಪ್ರತಿಧ್ವನಿಯು ಉಂಟಾಯಿತು. (ಹೊರಟಿತು.)

ಶಬ್ದಾರ್ಥ:—ಮನ್ಯು, ದುಃಖ, ತಳ್ತ, ಮುಚ್ಚಿದ; ಅಣ್ಮು, ಹೆಚ್ಚಾಗು;

ವ್ಯಾಕರಣ:— ಮೂರು (ಮೂರ್)+ದನಿ, ಮೂರ್ದನಿ(ವಿ.ಪೂ.ಸ.ಕ.)

ಅಲಂಕಾರ:— ಮೊದಲಿನ ಮೂರು ಸಾಲು (ಸ್ವಭಾವೋಕ್ತಿ); ಕೊನೆಯ ಸಾಲು (ಉತ್ಪ್ರೇಕ್ಷೆ)

||ಉತ್ಪಲ||

ಭೋಂಕನೆ ಕಂಡು ಸೀತೆ ದಶಕಂಧರನಂ ನೆಲೆವೆರ್ಚೆ ಶೋಕವಾ
ತಂಕವೊಡರ್ಚೆ ಪುಷ್ಪಕವಿಮಾನದ ರತ್ನವಿಚಿತ್ರ ಪುತ್ರಿಕಾ
ಸಂಕುಲಮುಳ್ಳೊಡಳ್ತುವು ಬೆಮರ್ತೊಡೆಕೊಡೆಬೆಮರ್ತುವಾಗಳಾ
ಲಂಕೆಯ ಸೂಡಮುನ್ನತಿಯ ಕೇಡನವಂಗೆ ನಿವೇದಿಪಂತೆವೊಲ್ ||೬೭||

**ಸರಳಾನುವಾದಃ—** ಸೀತಾದೇವಿಯು ರಾವಣನನ್ನು ಒಮ್ಮೆಲೇ ನೋಡಿ (ಚೆನ್ನಾಗಿ ಹೆದರಲು) ದುಃಖವು ಅಧಿಕವಾಗಲು, ಭೀತಿಯು ಉಂಟಾಗಲು, ಲಂಕಾಪಟ್ಟಣದ ದಹನವನ್ನೂ, (ಶ್ರೀಮತ್ತೆಯ ನಾಶವನ್ನೂ, ರಾವಣನಿಗೆ ತಿಳಿಸುವವೋ ಏನೋ ಅನ್ನುವಂತೆ (ಸೀತೆಯು) ಅಳಹತ್ತಲು, ಪುಷ್ಪಕವಿಮಾನದಲ್ಲಿದ್ದ ರತ್ನಖಚಿತ ಬೊಂಬೆಗಳು ಆಕೆ ಅಳಲು ಅಳಲಿಕ್ಕೆ ಹತ್ತಿದವು; ಆಕೆಯು ಬೆವರಲು ಅವೂ ಸಹ ಬೆವತವು.

**ಶಬ್ದಾರ್ಥಃ—** ಭೋಂಕನೆ, ಒಡನೆಯೇ; ನೆಲೆವೆರ್ಚು, ಅಧಿಕವಾಗು; ಆತಂಕ, ಭೀತಿ; ಪತ್ರಿಕಾ, ಬೊಂಬೆ; ಸೂಡು (ಧಾ ಸುಡು) ದಹನ,

**ವ್ಯಾಕರಣ;—** ಪತ್ರಿಕಾ ಸಂಕುಲಂ (ಷ.ತ.); ಸುಡು (ಧಾ) ಸೂಡು (ಭಾವವಾಚಕ-ನಾಮಪದ)

**ಅಲಂಕಾರಃ—** ಉತ್ಪ್ರೇಕ್ಷೆ.

|ಚಂಪಕ|

ಬಲೆಗೊಳಗಾದ ಸೋಗೆ ನವಿಲಂತೆ ಭಯಾಕುಲೆ ತನ್ನ ಚಿತ್ತದೊಳ್
ನೆಲಸಿದ ರಾಮನಂ ಒಯಸಿ ನೋಡಲಪೇಕ್ಷಿಸಿ ಬಾಹ್ಯದರ್ಶನ
ಕ್ಕೆಲಸಿದಳೆಂಬಿನಂ ಮುಗಿಯೆ ಕಣ್ಮಲರ್ಗಳ್ ನಸುಮುಚ್ಚೆವೋಗಿ ತ
ಕ್ಷಣಲರಲೆಸಿಂದೆ ಮೂರ್ಛೆದಿಳಿದಳ್ ಮಗುಳ್ದಂ ಪೊರಪೊಣ್ಮೆ ಹಾರವಂ||೬೮||

**ಸರಳಾನುವಾದಃ—** ಬಲೆಯಲ್ಲಿ ಸಿಕ್ಕ ಗಂಡು ನವಿಲನಂತೆ, ಭಯದಿಂದ ಕೂಡಿದ ಸೀತೆಯು, ತನ್ನ ಹೃದಯದಲ್ಲಿ ಸ್ಥಿರವಾಗಿ ಇದ್ದ ಶ್ರೀರಾಮ

ಚಂದ್ರನನ್ನು ಇಚ್ಛಿಸಿ, ನೋಡಬೇಕೆಂದು ಆಶಿಸಿ, ಹೊರಗಿನ ನೋಟಕ್ಕೆ ಬೇಸತ್ತಳೋ ಎನ್ನುವಂತೆ, ಹೂಗಳಂತೆ ಇದ್ದ ಕಣ್ಣುಗಳು ಮುಚ್ಚಲು, ಸ್ವಲ್ಪ ಮೂರ್ಛೆ ಹೊಂದಿ, ತಂಪಾದ ಗಾಳಿಯು ಸೋಂಕಲು ಎಚ್ಚತ್ತಳು. ಹಾ! ಎಂಬ ಧ್ವನಿಯು ಮೊದಲಿನಂತೆ ಮತ್ತೆ ಹೊರಟಿತು.

ಶಬ್ದಾರ್ಥಃ— ಅಲಸು, ಬೇಸರತಾಳು; ಮೂರ್ಛಾ (ದ್ಧ) ಮುಚ್ಚಿ, ಅಲೆಪು, ಅಲೆದಾಟ;

ವ್ಯಾಕರಣಃ—ಕಣ್ಣೆಂಬ ಮಲರ್, ಕಣ್ಮಲರ್ (ಸಂ. ಪೂ. ಪ. ಕ.)

ಅಲಂಕಾರಃ— ಉತ್ಪ್ರೇಕ್ಷೆ.

[ಟೀಪು:— ನಿಸರ್ಗದಲ್ಲಿ ಗಂಡು ಯಾವಾಗಲೂ ಹೆಣ್ಣನ್ನು ಮೋಹಿಸುವದಕ್ಕಾಗಿ ಸುಂದರ ರೂಪವನ್ನು ತಾಳಿರುವುದು ಉದಾ:- ಹುಂಜ, ಸೋಗೆ, ಸಾರಂಗ, ಸಿಂಹ, ಇತ್ಯಾದಿ. ಅದರಂತೆ ಗಂಡು ಹೆಣ್ಣಿಗಿಂತಲೂ ಪುಕ್ಕ ಪ್ರಾಣಿಯು ಉದಾ:- ಸಿಂಹಿಣಿಯು ಸಿಂಹಕ್ಕಿಂತಲೂ ಹೆಚ್ಚು ಬಲಿಷ್ಠಳು. ಈ ಮಾತಿನ ಸತ್ಯಾಸತ್ಯತೆ ಕವಿಗೆ ಗೊತ್ತಿದೆ. ಅಂತೆಯೆ ಅವನು ಸೋಗೆ ನವಿಲೆಂದು ಹೇಳಿದ್ದಾನೆ. ಆದರೆ ನಿಸರ್ಗಕ್ಕೆ ವಿರುದ್ಧವಾಗಿ ಮಾನವ ಪ್ರಪಂಚವಿದೆ. ಇಲ್ಲಿ ಹೆಣ್ಣು ಗಂಡನ್ನು ಮೋಹಿಸುವದಕ್ಕೆ ಯತ್ನಿಸುವುದು. ಗಂಡು ಗಟ್ಟಿಗತನದ್ದು ಹೆಣ್ಣು "ಅಬಲೆ" ಎಂದು ಕರೆಯಿಸಿಕೊಳ್ಳುವುದು. ಹೀಗೆ ಮಾನವ ಪ್ರಪಂಚದಲ್ಲಿನ ಸಾಮ್ಯವು ಪ್ರಾಣಿವರ್ಗಕ್ಕೆ ಅನ್ವಯಿಸಲಾರದು. ಮನೆಯ ಬಾಗಿಲಲ್ಲಿ ಕಾಳು ಹರವಿ ನೋಡಿದಾಗ, ಮೊದಲು ಹೆಣ್ಣು ಗುಬ್ಬಿ ಕಾಳು ತಿಂದು ಹೋದುದನ್ನು ಕಂಡು, ಗಂಡು ಗುಬ್ಬಿ, ಹಿಂದಿನಿಂದ ಬರುವುದಕ್ಕೆ ಧೈರ್ಯ ಮಾಡುವುದು. ಸೋಗೆ ಎಂದರೆ ಗರಿ. ಗರಿಗಳುಳ್ಳ ನವಿಲೆಂದರೆ ಗಂಡು ನವಿಲು ಎಂದೆಯೆ ಕವಿಯ ಅಭಿಪ್ರಾಯ. ]

||ಕಂದ|| ಕ್ರೂರಾತ್ಮಂ ವಂಚಕನವಿ
ಚಾರಿ ದುರಾಚಾರಿ ಬಗೆಯದುಯ್ದಪನೆನ್ನಂ
ಹಾ ರಾಮಾ ಹಾ ರಾಮಾ
ಬಾರಿಪರಾರೆಂದು ಸೀತೆ ಶೋಕಂ ಗೆಯ್ದಳ್ ||೬||

**ಸರಳಾನುವಾದಃ** — "ಕ್ರೂರ ಹೃದಯಿಯೂ, ಮೋಸಗಾರನೂ, ವಿಚಾರಗೇಡಿಯೂ, ಕೆಟ್ಟ ನಡತೆಯುಳ್ಳವನೂ, ವಿಚಾರಮಾಡದೆ ನನ್ನನ್ನು ಒಯ್ಯುತ್ತಿರುವನು. ಹಾ! ರಾಮಾ! (ಈತನನ್ನು) ತಡೆಯುವವರು ಯಾರು? ಎಂದು ಸೀತೆ ಶೋಕಿಸಿದಳು.

**ಶಬ್ದಾರ್ಥಃ**— ಬಾರಿಸು, ತಡೆ;

||ವಚನ|| ಅಂತು ಶೋಕಂಗೆಯ್ವ ಸೀತೆಯಂ ದಶಾಸ್ಯನನಂತವೀರ್ಯ ಕೇವಲಿಗಳ ಚರಣೋಪಾಂತದೊಳ್ ಕಯ್ಕೊಂಡ ಪರಾಂಗನಾ ವಿರತಿವ್ರತದ ಭಂಗಮಂ ಬಗೆಯದುಯ್ದು ನನ್ನೆಗಮಿತ್ತಲ್, (ಆ ಪ್ರಕಾರ ಶೋಕ ಮಾಡುತ್ತಿರುವ ಸೀತೆಯನ್ನು ರಾವಣನು ಅನಂತವೀರ್ಯಕೇವಲಿಗಳ ಪಾದ ಸಾಮೀಪ್ಯದಲ್ಲಿ ಕೈಕೊಂಡ "ಪರಾಂಗನಾವಿರತಿ" ವ್ರತದ ನಾಶವನ್ನು ವಿಚಾರಿಸದೆ ಒಯ್ದನು. ಅಷ್ಟರಲ್ಲಿ ಇತ್ತ—

**ಟಿಪ್ಪಣೀ**— ಕೇವಲಿಗಳು: ಜೈನರಲ್ಲಿ ೫ ಪ್ರಕಾರದ ಜ್ಞಾನಗಳಿವೆ. ಸ್ಮೃತಿ, ಶೃತ, ಅವಧಿ, ಮನಃಪರ್ಯಾಯ ಮತ್ತು ಕೇವಲ (ತ್ರಿಕಾಲಜ್ಞಾನ). ಈ ಜ್ಞಾನವನ್ನು ದೊರಕಿಸಿದವರಿಗೆ ಕೇವಲಿಗಳೆನ್ನುತ್ತಾರೆ. ಅನಂತವೀರ್ಯರು ಒಬ್ಬರು. ರಾವಣನಿಗೆ ಈ ಜ್ಞಾನ ಉಪದೇಶಿಸಿದವರು.)

||ಕಂದ|| ದೇವೇಂದ್ರನ ವಜ್ರಮನೆ
ನ್ನೀ ವಜ್ರಾವರ್ತಚಾಪಮಂ ಮೀರುವನಿ
ನ್ನಾವನೆನುತ್ತುಂ ಸಂಗ್ರಾ
ಮಾವನಿಗನುಜನ ಕೆಲಕ್ಕೆ ರಾಮಂ ಬಂದಂ ||೭೦||

**ಸರಳಾನುವಾದಃ**— ಇಂದ್ರನ ವಜ್ರಾಯುಧವನ್ನೂ, ನನ್ನ ಈ ವಜ್ರಾವರ್ತಬಿಲ್ಲನ್ನೂ ಯಾವನು ಮೀರುವನು? ಎನ್ನುತ್ತ ರಣಭೂಮಿಯಲ್ಲಿದ್ದ ಲಕ್ಷ್ಮಣನ ಸಮೀಪಕ್ಕೆ ರಾಮಚಂದ್ರನು ಬಂದನು.

**ಪದಚ್ಛೇದಃ**—ವಜ್ರಮಂ+ಎನ್ನ+ಈ+ವಜ್ರಾವರ್ತ; ಸಂಗ್ರಾಮ+ಅವನಿಗೆ+ಅನುಜನ.

ಅಲಂಕಾರ:— ದೀಪಕ [ಪ್ರಸ್ತುತ (ವಜ್ರಾವರ್ತಚಾಪ) ಕ್ಕೆ ಅನ್ವಯಿಸಿ ಹೇಳಿದ ಮಾತು ಅಪ್ರಸ್ತುತ (ಇಂದ್ರನ ವಜ್ರಾಯುಧ) ಕ್ಕೆ ಅನ್ವಯಿಸುತ್ತದೆ. ]

||ವಚನ|| ಅಂತು ಬರ್ಪುದುಂ ಲಕ್ಷ್ಮಣನಪಾಯ ಬಹುಳಮಪ್ಪ ಗಹನದೊಳ್ ದೇವ ಸೀತಾದೇವಿಯನಗಲ್ದೇಕೆ ಬಿಜಯಂ ಗೆಯ್ದಿರೆಂಬುದುಂ ನಿನ್ನ ಸಿಂಹನಾದಮಂ ಕೇಳ್ದು ಬಂದೆನೆನೆ ಭವದೀಯ ಪ್ರಸಾದದಿಂದೆನಗೆ ಒಲ್ಲಲಪ್ಪ ಬವರಮಿಲ್ಲದಾವನಾನು ಮೋರ್ವಂ ಮಾಯಾವಿಯ ಮಾಟಮಕ್ಕುಮದು ಕಾರಣಂ ಬೇಗಂ ಬಿಜಯಂಗೆಯ್ವುದಾನೀ ಬವರಮಂ ತೀರ್ಚಿ ನಿಮ್ಮ ಬೆನ್ನನೆ ಬಂದಪ್ಪೆನೆಂದು ಬಿನ್ನವಿಸೆ—(ಹಾಗೆ ರಾಮಚಂದ್ರನು ಬರುತ್ತಿರಲು ಲಕ್ಷ್ಮಣನು—"ದೇವ, ಬಹಳ ಅಪಾಯಕರವಾದ ಅಡವಿಯಲ್ಲಿ ಸೀತಾದೇವಿಯನ್ನು ಬಿಟ್ಟು ಇಲ್ಲಿಗೆ ಏಕೆ ದಯಮಾಡಿಸಿದಿರಿ" ಎನ್ನಲು— "ನಿನ್ನ ಸಿಂಹನಾದವನ್ನು ಕೇಳಿ ಬಂದೆನು" ಎಂದು (ರಾಮಚಂದ್ರನು) ಹೇಳಲು, ಲಕ್ಷ್ಮಣನು - "ತಮ್ಮ ಆಶೀರ್ವಾದದಿಂದ ನನಗೆ ಭಾರವಾದ ಕಾಳಗವು ಇಲ್ಲ. ಯಾವನೊ ಒಬ್ಬ ಮಾಯೆಗಾರನ ಮೋಸದ ಕೃತಿಯಿದು. ಅದುಕಾರಣ ಬೇಗನೆ ಮರಳುವುದು. ನಾನು ಈ ಕಾಳಗವನ್ನು ತೀರಿಸಿ, ತಮ್ಮ ಬೆನ್ನ ಹಿಂದೆಯೆ ಬರುವೆನು" ಎಂದು ಅರಿಕೆ ಮಾಡಿಕೊಳ್ಳಲು—)

ಶಬ್ದಾರ್ಥ : - ಗಹನ, ಅಡವಿ; ಭವತ್, ತಮ್ಮ; ಪ್ರಸಾದ, ಕೃಪೆ; ಬವರ, ಕಾಳಗ.

||ಉತ್ಪಲ||

ತೋರಿದನಿಲ್ಲ ಸಿಂಹರವಮಂ ಗಡ ಲಕ್ಷ್ಮಣನೆನ್ನ ಚಿತ್ತದೊಳ್
ತೋರಿದುದಿಲ್ಲ ಬಿಟ್ಟು ಬರಲಾಗದು ಸೀತೆಯನೆಂಬ ನಿರ್ಣಯಂ
ಬೇರೆ ಕಡಂಗಿ ಕೆತ್ತಿದಪ್ಪದೆನ್ನೆಡಗಣ್ ತಡವಿಲ್ಲದಚ್ಚಿಗಂ
ತೋರದೆ ಮಾಣದಿಂತಿದೆನುತುಂ ಮಗುಳ್ದಂ ಮನುವಂಶ ಮಂಡನಂ||೭೧||

ಸರಳಾನುವಾದಃ— "ಲಕ್ಷ್ಮಣನು ಸಿಂಹನಾದವನ್ನು ಮಾಡಲಿಲ್ಲ ಲ್ಲ! ಸೀತೆಯನ್ನು ಬಿಟ್ಟು ಬರಬಾರದು ಎಂಬ ನಿಶ್ಚಯವು ನನ್ನ ಮನಸ್ಸಿನಲ್ಲಿ ಂಟಾಗಲಿಲ್ಲನಲ್ಲ" ಇದೂ ಅಲ್ಲದೆ ನನ್ನ ಎಡಗಣ್ಣು ಉತ್ಸಾಹದಿಂದ ರುತ್ತಿರುವುದು. ಹೀಗೆ ಇದು ಶೀಘ್ರದಲ್ಲಿಯೇ ಕೇಡನ್ನುಂಟುಮಾಡದೆ ಡದು" ಎನ್ನುತ್ತ ಮನುವಂಶಕ್ಕೆ ಭೂಷಣ ಪ್ರಾಯನಾದ ರಾಮಚಂದ್ರನು ಗಿ ಹೊರಟನು.

ಶಬ್ದಾರ್ಥಃ— ನಿರ್ಣಯಂ, ನಿಶ್ಚಯ; ಕಡಂಗು, ಕುತೂಹಲ; ಕೆತ್ತು, ಲಿಸು; ಅಚ್ಚಿಗಂ, ಕೇಡು.

ವ್ಯಾಕರಣಃ— ಮನುವಂಶ ಮಂಡನಂ, ಮನುವಂಶಕ್ಕೆ ಅಲಂಕಾರ ಪ್ರಾಯನು ಯಾವನೋ ಅವನು (ಐ. ಸ.)

॥ವಚನ॥ ಅಂತು ಬಂದು ಲತಾಭವನದೊಳ್ ಮನೋವಲ್ಲಭೆಯಂ ಣದೆ ಶಿಖಿ ಮುಖಕ್ಕೆ ವಂದ ಪಾದರಸದಂತೆ ನಿಜ ನಿಸರ್ಗ ಧೈರ್ಯ ಣ ಮದೃಶ್ಯಮಾಗೆ (ಹಾಗೆ ಬಂದು ಬಳ್ಳಿಗಳ ಗುಡಿಸಲುದೊಳಗೆ ಪ್ರಿಯತ ಯನ್ನು ಕಾಣದೆ, ಅಗ್ನಿ ಮುಖದಲ್ಲಿ ಬಿದ್ದು ಕರಗುವ ಪಾರಜದಂತೆ, ಭಾವಿಕವಾದ ತನ್ನ ಧೈರ್ಯವು ಮಾಯವಾಗಲು - )

॥ಕಂದ॥ ಹಾ ಹಾ ಜನಕಸುತೇ ವೈ
ದೇಹೀ ವೈದೇಹಿಯೆಂದು ಪುದಿದಿರೆ ಮನಮಂ
ಮೋಹತಮಂ ದೀಪಂ ವಾ
ತಾಪಹತಿಯಿಂ ನಂದುವಂತೆ ಮೂರ್ಛೆಗೆ ಸಂದಂ ॥೭೨॥

ಸರಳಾನುವಾದ:— ಮೋಹವೆಂಬ ಕತ್ತಲೆಯು, ಮನಸ್ಸನ್ನು ುತ್ತಿರಲು, ಹಾ! ಹಾ! ಸೀತೆಯೇ ಸೀತೆಯೇ? ಎಂದು ಗಾಳಿಯ ಡೆತದಿಂದ ದೀಪವು ನೊಂದುವಂತೆ ರಾಮಚಂದ್ರನು ಮೂರ್ಛೆ ೋದನು.

ವ್ಯಾಕರಣ:- ಸಂದಂ, ಸಲ್(ಧಾ) ಸ. ತ. ಪ್ರ. ಏ; ಮೋಹವೆಂಬ ತಮ (ಸಂ. ಪೂ. ಪ. ಕ; ವಾತದ ಆಹತಿ (ಷ. ತ.)

ಅಲಂಕಾರ:– ಉಪಮೆ.

||ಚಂಪಕ||

ನಸು ಬಿಸುಸೇರೆ ಮೆಯ್ ಪುಗುಳೆ ಕೆತ್ತುವ ತಾಣಮೆ ಕೆತ್ತೆ ಮಂದಮಾ
ಮುಸಿರ್ಗಳೆ ನಾಸಿಕಾ ಮುಕುಲದಿಂದಿನಿಸುಂ ಪೊರಪೊಣ್ಮೆ ತಳ್ತು ಸಂ
ದಿಸಿದೆವೆ ಬಿರ್ಚೆ ಕಣ್ಮಲರ್ಗಳುಳ್ಪಲರುತ್ತಿರೆ ಜಾನಕೀ ಯೆನು
ತ್ತುಸಿರ್ದುಸಿರ್ದೆಳ್ದನಾ ರಘುಕುಲಾಂಬರ ಚಂಡಮರೀಚಿ ಮೂರ್ಛೆಯಿಂ||೭೩||

ಸರಳಾನುವಾದ:– ಶರೀರವು ಸ್ವಲ್ಪ ಬೆಚ್ಚಗಾಗಲು, (ಶರೀರದಲ್ಲಿ) ಹಾರತಕ್ಕ ಸ್ಥಾನಗಳು ಮತ್ತೆ ಹಾರಹತ್ತಲು, ದೇಹದಲ್ಲಿ ಚಲಿಸುವ ಅವಯವಗಳು ಚಲಿಸಲು) ಮಂದವಾದ ಉಸಿರುಗಳು ಮೊಗ್ಗೆಯಂತಿದ್ದ ಮೂಗಿನಿಂದ ಸ್ವಲ್ಪ ಸ್ವಲ್ಪ ಹೊರಡಲು, ಗಟ್ಟಿಯಾಗಿ ಕೂಡಿಕೊಂಡಿದ್ದ ಎವೆಗಳು ಬಿಚ್ಚಲು, ಹೂಗಳಂತಿದ್ದ ಕಣ್ಣುಗಳು ಅರ್ಧತೆರೆಯುತ್ತಿರಲು, ಸೀತೆಯೇ ಸೀತೆಯೇ ಅನ್ನುತ್ತ ನಿಟ್ಟುಸಿರುಬಿಡುತ್ತ ರಘುವಂಶವೆಂಬ ಆಕಾಶಕ್ಕೆ ಸೂರ್ಯನಂತಿದ್ದ ರಾಮಚಂದ್ರನು ಮೂರ್ಛೆಯಿಂದ ತಿಳಿದೆದ್ದನು.

ಶಬ್ದಾರ್ಥ:— ಮುಕುಲ, ಮೊಗ್ಗೆ; ತಳ್ತು, ಗಟ್ಟಿಯಾಗಿ; ಸಂದಿಸು, ಕೂಡಿಕೊಳ್ಳು;

ವ್ಯಾಕರಣ:— ರಘುಕುಲವೆಂಬ ಅಂಬರ (ಸಂ. ಪೂ. ಪ. ಕ.) ಚಂಡವಾದ ಮರೀಚಿಗಳು ಉಳ್ಳವ ಯಾವನೋ ಅವನು (ಸೂರ್ಯ) ಬ. ಸ. ರಘುಕುಲಾಂಬರಕ್ಕೆ ಚಂಡಮರೀಚಿ ಯಾವನೋ ಅವನು (ರಾಮಚಂದ್ರ) ಬ. ಸ.

||ವಚನ|| ಅಂತೆಳ್ಚತ್ತು ಸುತ್ತಲುಂ ತೊಳಲ್ದು ರಸುತ್ತು ಮಡವಿಯೊಳ್ ಗನೆ ಬರುತ್ತಮಿರ್ಪಾಗಳೊಂದೆಡೆಯೊಳಸು ವಿಯೋಗ ಸಂಕಟದಿಂ ಸರಂ

ನೆಯ್ದು ಜಟಾಯುವಂ ಕಂಡು ಸೀತಾಹರಣಮಿವರ್ಕೆ ಮರಣನಿಮಿತ್ತಮಾದು ದೆಂದುಬ್ಬೆಗಂಬಟ್ಟು ಸಂಸಾರ ವಿಷಮ ವಿಷಾಪಹಾರಮಂ ಪಂಚನಮಸ್ಕಾರ ಮನವರ್ಕೆ ಪೇಳ್ದಮರಗತಿಯನೆಯ್ದಿಸಿ ವೈದೇಹಿಯನಾವನಾಂತರದೊಳೆಲ್ಲಿ ಮುಮರಸಿ ಕಾಣದೆ— (ಹಾಗೆ ಎಚ್ಚತ್ತು ಸುತ್ತಲೂ ಸಂಚರಿಸಿ, ಹುಡುಕುತ್ತ ಅಡವಿಯೊಳಗೇ ಬರುತ್ತ ಇರುವಾಗ, ಒಂದು ಕಡೆಯಲ್ಲಿ ಸಾಯುವ ಸಂ ಕಟದಿಂದ ಬಿಸುಸುಯ್ಯುತ್ತಿರುವ ಜಟಾಯುವನ್ನು ಕಂಡು ಸೀತಾಹರಣವು ಇದರ ಮರಣಕ್ಕೆ ಕಾರಣವಾಯಿತೆಂದು ಮನಸ್ಸಿನಲ್ಲಿ ಸಂತಾಪವನ್ನು ಹೊಂದಿ ಸಂಸಾರದ ಅಸಮ ವಿಷವನ್ನು ಹೋಗಲಾಡಿಸುವ ಪಂಚನಮಸ್ಕಾರ ವನ್ನು ಅದಕ್ಕೆ ಹೇಳಿ, ಮುಕ್ತಿಯನ್ನು ಹೊಂದಿಸಿ, ಸೀತೆಯನ್ನು ಆ ವನದ ಮಧ್ಯದಲ್ಲ ಹುಡುಕಿ ಎಲ್ಲಿಯೂ ಕಾಣದೆ—)

**ಶಬ್ದಾರ್ಥ:**— ತೊಳಲ್ದು, ಸಂಚರಿಸಿ; ಉದ್ವೇಗ (ತ್ಭ) ಉಬ್ಬೆಗ, ಸಂತಾಪ.

[ಟಿಪ್ಪಣಿ:— **ಪಂಚನಮಸ್ಕಾರ:**— ಇದು ಪಂಚ ಪರಮೇಷ್ಠಿಗಳಿಗೆ ಸಂಬಂಧಿಸಿದ ಮಂತ್ರ. ಈ ಪಂಚಪರಮೇಷ್ಠಿಗಳೆಂದರೆ, ಅರ್ಹಂತರು, ಸಿದ್ಧರು, ಆಚಾರ್ಯರು, ಉಪಾಧ್ಯಾಯರು, ಸಾಧುಗಳು. ಯಾರಾದರೂ ಮರಣಹೊಂದುವ ಮುನ್ನ ಈ ಮಂತ್ರ ಅವರಿಂದ ಹೇಳಿಸಿದರೆ ಅವರಿಗೆ ಅಮರಗತಿ ದೊರೆಯುವದೆಂದು ನಂಬುಗೆ— ]

ಮತ್ತೇಭ||

ಕಳಹಂಸಾಲಸಯಾನೆಯಂ ಮೃಗಮದಾಮೋದಾಸ್ಯ ನಿಶ್ವಾಸೆಯಂ
ತಳಿರೇ ತಾವರೆಯೋ ಮದಾಳಿಕುಲಮೋ ಕರ್ಣೆಯ್ದಿಲೋ ಮತ್ತ ಕೋ
ಕಿಳಮೋ ಕಂಡಿರೆ ಪಲ್ಲವಾಧರೆಯ ನಂಭೋಜಾಸ್ಯೆಯಂ ಭೃಂಗ ಕುಂ
ತಳೆಯಂ ಕೈರವನೇತ್ರೆಯಂ ಪಿಕರವ ಪ್ರಖ್ಯಾತೆಯಂ ಸೀತೆಯಂ||೭೪||

**ಸರಳಾನುವಾದ:**— ರಾಜ ಹಂಸದಂತೆ ಮಂದವಾದ ನಡಿಗೆಯು ಳ್ಳವಳನ್ನೂ, ಕಸ್ತೂರಿಯ ಸುವಾಸನೆಯಂತೆ ಮುಖದಲ್ಲಿ ಉಸಿರುಳ್ಳವಳನ್ನೂ,

ಎಲೈ ಚಿಗುರೆಲೆಗಳೇ, ಕಮಲಗಳೇ, ಮದವೇರಿದ ಭ್ರಮರಗಳ ಸಮೂಹವೇ, ಕಪ್ಪು ಕಮಲವೇ, ಮದವೇರಿದ ಕೋಗಿಲೆಯೇ— ಚಿಗುರೆಲೆಯಂತೆ ತುಟಿಯುಳ್ಳ, ಕಮಲದಂತೆ ಮುಖವುಳ್ಳ, ಭ್ರಮರದಂತೆ ಮುಂಗುರುಳುಳ್ಳ, ಕರಿಕಮಲದಂತೆ ಕಣ್ಣುಗಳುಳ್ಳ, ಕೋಗಿಲೆಯ ದನಿಯುಳ್ಳಳೆಂದು ಪ್ರಖ್ಯಾತಿಯನ್ನು ಹೊಂದಿರುವ ಸೀತೆಯನ್ನು ನೋಡಿರುವಿರಾ ?

**ಶಬ್ದಾರ್ಥ:—** ಆಮೋದ, ವಾಸನೆ; ಪಿಕ, ಕೋಗಿಲೆ;

**ವ್ಯಾಕರಣ:—** ಮದೋನ್ಮತ್ತವಾದ ಅಳಿ, ಮದಾಳಿ (ವಿ.ಪೂ.ಪ.ಕ.) ಮದಾಳಿಗಳ ಕುಲ (ಷ. ತ.)

**ಅಲಂಕಾರ:—** ಕಳಹಂಸಾಲಸಯಾನೆ, ಪಲ್ಲವಾಧರೆ, ಕೈರವನೇತ್ರೆ (ಉಪಮಾಲಂಕಾರದ ಉದಾಹರಣೆಗಳು); ಇಡಿಯ ಶ್ಲೋಕದ್ದು. ಯಥಾ ಸಂಖ್ಯೆ—(ಸಂಖ್ಯಾಕ್ರಮವನ್ನು ಅನುಸರಿಸುವ ಅನ್ವಯಕ್ರಮ).

॥ಚಂಪಕ॥

ಕಳರುತಿ ಮತ್ತಕೋಕಿಲಮ ನೀಕ್ಷಣಮುತ್ಪಲಮಂ ವಿನೀಲ ಕು
ಶಳಮಳಿಮಾಲೆಯುಂ ಕಚಭರಂ ನವಿಲಂ ನಡೆಹಂಸಿಯಂ ತಳಂ
ತಳಿರ್ಗಳನಾನನಂ ಕಮಲಮಂ ನಳಿತೋಳ್ ಲತೆಯಂ ಲತಾಂತಕೋ
ಮಳೆ ಮರೆಗೊಂಡು ಮೆಯ್ಗರೆದು ಕಾಡುವ ಕಾರಣಮೇನೊ ಜಾನಕೀ ॥೭॥

**ಸರಳಾನುವಾದ:—** ಹೂವಿನಂತೆ ಕೋಮಲೆಯಾದ ಎಲೈ ! ಸೀತೆಯೇ ? ನಿನ್ನ ಮಧುರವಾದ ಸ್ವರವು ಮದವೇರಿದ ಕೋಗಿಲೆಯನ್ನೂ, ಕಣ್ಣುಗಳು ಕಪ್ಪು ಕಮಲವನ್ನೂ, ನೀಲವರ್ಣದ ಮುಂಗುರುಳುಗಳು ಭ್ರಮರಗಳ ಸಮೂಹವನ್ನೂ, ಕೇಶರಾಶಿಯು ನವಿಲನ್ನೂ, ನಡಿಗೆಯು ಹಂಸವನ್ನೂ, ಅಂಗೈಗಳು ಚಿಗುರೆಲೆಗಳನ್ನೂ, ಮುಖವು ಕಮಲವನ್ನೂ, ಕೋಮಲವಾದ ಕೈಗಳು ಬಳ್ಳಿಯನ್ನೂ ಆಶ್ರಯಿಸಿ, ನೀನು ಹೀಗೆ ಅಡಗಿಕೊಂಡು ನನ್ನನ್ನು ಕಾಡುವ ಕಾರಣವೇನು ?

ಶಬ್ದಾರ್ಥ:— ಕಳರುತಿ, ಮಧುರವಾದ ಸ್ವರ; ಈಕ್ಷಣ, ಕಣ್ಣು; ಕಚಭರ, ಕೇಶರಾಶಿ; ತಳ, ಅಂಗೈ; ಮೆಯ್ಗರೆ, ಅಡಗಿಕೊಳ್ಳು;

ಅಲಂಕಾರ:— ಭಾವಾಲಂಕಾರ (ಉನ್ಮಾದಭಾವ)— ಎಂದು

॥ಮತ್ತೇಭ॥

ಎನಿತಾನುಂ ತೆರದಿಂ ಪಲುಂಬಿ ಪಲವಾಡುತ್ತುಂ ಮನಸ್ತಾಪದಿಂ
ತನು ಸಂತಾಪಮನಪ್ಪುಕಯ್ಯೆ ಬಳಲುತ್ತುಂ ಕಂತು ಸಂತಾಪದಿಂ
ಮೊನಲುತ್ತುಂ ಕನಲುತ್ತಮಂದವಿರಳಪ್ರಸ್ಯಂದಿ ಬಾಷ್ಪೋದಕಾ
ನನನಾ ಕಾನನದೊಳ್ ತೊಳಲ್ದು ರಘುರಾಮಂ ಸೇದೆವಟ್ಟಿರ್ಪಿನಂ॥೭೬॥

ಸರಳಾನುವಾದ:— ಅನೇಕ ರೀತಿಯಿಂದ ಹಲುಬಿ, ಬಡಬಡಿಸುತ್ತ, ಮನಸ್ಸಿನ ತಾಪದಿಂದ ದೇಹವು ದುಃಖವನ್ನು ಅಂಗೀಕರಿಸಲ, ಆಯಾಸ ಪಡುತ್ತ, ವಿರಹವ್ಯಥೆಯಿಂದ ಉದ್ರೇಕಗೊಂಡು ಸಿಟ್ಟಿಗೇಳುತ್ತ, ಆವೊತ್ತು ಒಂದೇ ಸವನೆ ಸುರಿಯುವ ಕಣ್ಣೀರಿನಿಂದ ಕೂಡಿದ ಮುಖವುಳ್ಳ ರಾಮ ಚಂದ್ರನು ಆ ಅರಣ್ಯದಲ್ಲಿ ಅಲೆದಲೆದು ಶ್ರಮಪಟ್ಟಿರಲು—

ಶಬ್ದಾರ್ಥ:— ಪಲುಂಬು (ಹಲುಬು), ಗೋಳಿಡು. ಪಲವಾಡು, ಬಡ ಬಡಿಸು. ಕಂತುಸಂತಾಪ, ಮದನ (ವಿರಹ) ವ್ಯಥೆ; ಒನಲು, ಉದ್ರೇಕ ಗೊಳ್ಳು; ಅವಿರಳ, ಬಿಡದೆ; ಪ್ರಸ್ಯಂದಿ ಹರಿಯುವ; ಸೇದೆ, ಆಯಾಸ;

॥ವಚನ॥ ಅನ್ನೆಗಮಿತ್ತಲ್ ರಾಮಾನುಜಂ ಖರದೂಷಣರಂ ಸೂರ್ಯ ಹಾಸಾಸಿಯಿಂ ತಲೆವಾರಿ ಬೀಳೆ ಪೊಯ್ದು ಗೆಲ್ಲಂಗೊಂಡು ವಿರಾಧಿತನೆಂಬ ಖೇಚರನಂ ಪಾತಾಳಲಂಕೆ ಗಧಿಪತಿಮಾಡಿ ಬರುತ್ತುಂ. (ಅಷ್ಟರಲ್ಲಿ ಇತ್ತ ಲಕ್ಷ್ಮಣನು ಖರದೂಷಣರನ್ನು, ಸೂರ್ಯಹಾಸ ಖಡ್ಗದಿಂದ ತಲೆ ಹಾರಿ ಬೀಳು ವಂತೆ ಹೊಡೆದು, ವಿಜಯವನ್ನು ಸಂಪಾದಿಸಿ, ವಿರಾಧಿತನೆಂಬ ಖೇಚರ ನನ್ನು ಪಾತಾಳಲಂಕೆಗೆ ಒಡೆಯನನ್ನಾಗಿ ಮಾಡಿ ಬರುವಾಗ—)

||ಚಂಪಕ |

ಮನಜಲಧಾರೆಯಿಲ್ಲದ ದಿಶಾಗಜದಂತೆ ಸುಧಾಂಶುಲೇಖೆಯಿ
ಲ್ಲದ ನಭದಂತೆ ಕಲ್ಪಲತೆಯಿಲ್ಲದ ನಂದನದಂತೆ ವೇಲೆಯಿ
ಲ್ಲದ ಕಡಲಂತೆ ಕೇಸರಿಣೆಯಿಲ್ಲದ ಕೇಸರಿಯಂತೆ ಸೀತೆಯಿ
ಲ್ಲದ ರಘುವಂಶರಾಮನಿರೆ ನೋಡಿದನಾಕುಲನಾಗಿ ಲಕ್ಷ್ಮಣಂ ||೭೭||

ಸರಳಾನುವಾದಃ— ಮದೋದಕವಿಲ್ಲದ ದಿಗ್ಗಜದಂತೆ, ಚಂದ್ರ ಬಿಂಬವಿಲ್ಲದ ಆಕಾಶದಂತೆ, ಕಲ್ಪಲತೆಯಿಲ್ಲದ ನಂದನವನದಂತೆ, ದಂಡೆ ಯಿಲ್ಲದ ಸಮುದ್ರದಂತೆ, ಸಿಂಹಿಣಿ ಇಲ್ಲದ ಸಿಂಹದಂತೆ, ಸೀತೆಯಿಲ್ಲದ ರಘುಕುಲದ ರಾಮಚಂದ್ರನು ಇದ್ದುದನ್ನು ಲಕ್ಷ್ಮಣನು ದುಃಖಿತನಾಗಿ ನೋಡಿದನು.

ಶಬ್ದಾರ್ಥಃ – ವೇಲೆ (ವೇಲಾ) ದಂಡೆ; ಆಕುಲ, ದುಃಖಿತ;

ಅಲಂಕಾರಃ - ಉಪಮೆಗಳ ಮಾಲೆ.

||ವಚನ|| ಅಂತು ಮನದೊಳಲ್ಲಾಡುತ್ತುಮೆಯ್ದೆವಂದು ಮದಂಬಿಕೆಯಂ ಕಂಡೆನಿಲ್ಲೆತ್ತಲಿರ್ದಪಳೆಂಬುದುಮಾನ್ ನಿನ್ನಲ್ಲಿಗೆ ಬಂದ ಪಿಂದೆ ಸಿಂಹಶಂಭಾದಿ ಕ್ಷೌದ್ರವನ ಚರಂಗಳುಯ್ದುವೆಂದರಿಯೆನಾವನಾನುಮೊರ್ವಂ ಮಾಯಾವಿ ಕಳ್ದುಯ್ದನೆಂದರಿಯೆನಿನ್ನೆವರಮರಣ್ಯದೊಳ್ ತೊಳಲ್ದೆಲ್ಲಿಯುಮರಸಿ ಕಂಡೆ ನಿಲ್ಲೆಂದು ನೊಂದುನುಡಿವನ್ನೆಗಮಿದಿರಾಗಿ ಭರ್ಪಬಲಮಂ ಕಂಡಿದಾರ ಬಲಮೆನೆ ಲಕ್ಷ್ಮೀಧರನಿದು ವಿರಾಧಿತನೆಂಬ ವಿದ್ಯಾಧರಂ ಧುರದೊಳೆನಗೆ ಸಹಾಯನಾಗಿ ಪಾಳಿಯಂ ಪಾಳಿಸಿದಂಗಳ್ ದೇವ ನಿಜಚರಣ ಸೇವಾಸಕ್ತ ಚಿತ್ತನಾಗಿ ಬರುತಿರ್ದಪನಾತನ ಬಲಮೆಂದರಿಪುವನ್ನೆಗಮೆಯ್ದೆವಂದು ರಾಘ ವನ ಪಾದೋಪಾಂತದೊಳ್ ಮೆಯ್ಯನಿಕ್ಕೆ ಲಕ್ಷ್ಮೀಧರಂ ಜಗನ್ಮಾತೆಯಂ ಸೀತಾದೇವಿಯನಾವನಾನುಂ ಕಳ್ದುಯ್ದೀ ಕಾನನದೊಳಗಿರ್ದಪನಾ ದೆಸೆಗಗ್ರ ಜಂ ವ್ಯಗ್ರನಾಗಿರ್ದಪನೆನೆ ವಿರಾಧಿತಂ ಮತ್ಕುಲಾಗತಮುಂ ನಿಸರ್ಗ ದುರ್ಗಮುಮಪ್ಪ ಪಾತಾಳಲಂಕಾಪುರದೊಳಿರ್ದು ಸೀತಾದೇವಿಯರ

ಅಣ್ಣನಪ್ಪ ಪ್ರಭಾಮಂಡಲನಂ ಬ¬ಸಿ ಇವರ್ಕೆ ತಕ್ಕುದಂ ನೆಗಳಲಕ್ಕುಮದ ರ್ಕಾನೆ ಸ.ಲ್ವಿನಲ್ಲಿಗೆ ಬಿಜಯಂಗೆಯ್ವುದೆಂದು ರಾಮಲಕ್ಷ್ಮಣರಂ ರಥಮ ನೇರಿಸಿಕೊಂಡು ಚತುರಂಗಬಲಸಹಿತಂ ಮಹಾವಿಭೂತಿಯಿಂ ಪಾತಾಳಲಂಕಾ ಪುರಮಂ ಪೊಕ್ಕನನ್ನೆಗಮಿತ್ತಲಸುರನಾಗಸದೊಳರ್ಣವದ ಮೇಗೆ ಮನೋ ವೇಗದಿಂ ಪೋಗುತ್ತುಮಿರೆ—

[ಹಾಗೆ ಮನಸ್ಸಿನಲ್ಲಿ ಕಳವಳಬಡುತ್ತ ಬಂದು, ಲಕ್ಷ್ಮಣ– ನನ್ನ ತಾಯಿ (ಸೀತಾದೇವಿ ಯನ್ನು ಕಾಣಲಿಲ್ಲ; ಎಲ್ಲಿರುವಳು ? ಎನ್ನುತ್ತಿರಲು, ರಾಮ— ನಾನು ನಿನ್ನಲ್ಲಿಗೆ ಬಂದ ಬಳಿಕ ಸಿಂಹ ಶರಭ ಮೊದಲಾದ ಭೀಕರ ವನ್ಯ ಪಶುಗಳು ಒಯ್ದಿರಬೇಕೆಂಬುವನ್ನೂ ತಿಳಿಯೆನು. ಯಾವನಾದರೂ ಮೋಸಗಾರನು ಕದ್ದೊಯ್ದನೆಂದೂ ತಿಳಿಯೆನು. ಇಲ್ಲಿಯವರೆಗೆ ಅರಣ್ಯ ದೊಳಗೆ ಸಂಚರಿಸಿ ಹುಡುಕಿ ಎಲ್ಲಿಯೂ ಕಾಣಲಿಲ್ಲ. (ಎಂದು ಮನಸ್ಸಿ ನಲ್ಲಿ ಮುದುಡಿಕೊಂಡು ನುಡಿಯುವಷ್ಟರಲ್ಲಿ, ಇದಿರಾಗಿ ಬರುವ ಸೈನ್ಯವನ್ನು ಕಂಡು ) ಇದು ಯಾರ ಸೈನ್ಯವು ? ಎನ್ನಲು, ಲಕ್ಷ್ಮಣ (ಲಕ್ಷ್ಮೀಧರ)— ಇದು ವಿರಾಧಿತನೆಂಬ ವಿದ್ಯಾಧರನು ಯುದ್ಧದಲ್ಲಿ ಸಹಾಯಕನಾಗಿ ಸೈನ್ಯ ವನ್ನು ಕೂಡಿಸಿದನು. ಈಗ ತನ್ನ ಚರಣಸೇವೆಯನ್ನು ಮಾಡಬೇಕೆನ್ನುವ ಮನಸುಳ್ಳವನಾಗಿ ಬರುತ್ತಿರುವನು. ಆತನ ಸೈನ್ಯವು ಇದು. ( ಎಂದು ತಿಳಿಸುವವೊತ್ತಿಗೆ ಆತನು ರಾಮಚಂದ್ರನ ಪಾದಸನ್ನಿಧಿಯಲ್ಲಿ ಬಂದು ಸಾಷ್ಟಾಂಗವೆರಗಲು, ಲಕ್ಷ್ಮೀಧರಂ— ಜಗನ್ಮಾತೆಯಾದ ಸೀತಾದೇವಿಯನ್ನು ಯಾವನೋ ಕದ್ದೊಯ್ದು ಈ ಅಡವಿಯಲ್ಲಿ ಇರುವನು. ಆ ಕಾರಣದಿಂದ ಅಣ್ಣನು ದುಃಖಿತನಾಗಿರುವನು, ಎನ್ನಲು ವಿರಾಧಿತಂ –ನನ್ನ ವಂಶಪರಂಪರೆ ಯಿಂದಲೂ, ಸೃಷ್ಟಿನಿರ್ಮಿತವಾದ ಪಾತಾಳಲಂಕಾಪುರದ ಭದ್ರವಾದ ಕೋಟೆ ಯೊಳಗೆ ಇದ್ದು, ಸೀತಾದೇವಿಯ ಹಿರಿಯ ಅಣ್ಣನಾದ ಪ್ರಭಾಮಂಡಲ ನನ್ನು ಕರೆಯಿಸಿಕೊಂಡು ಇದಕ್ಕೆ ಯೋಗ್ಯವಾದುದನ್ನು ಕೈಕೊಳ್ಳ ತಕ್ಕದ್ದು. ಅದಕ್ಕಾಗಿ ನಾನೊಬ್ಬನೇ ಸಾಕು. ಅಲ್ಲಿಗೆ ತಾವು ದಯಮಾಡಿಸ ಬೇಕು. (ಎಂದು ರಾಮ-ಲಕ್ಷ್ಮಣರನ್ನು ರಥದ ಮೇಲೆ ಕುಳ್ಳಿರಿಸಿಕೊಂಡು, ಚತುರಂಗಬಲ ಸಮೇತನಾಗಿ, ಬಹಳ ವೈಭವದಿಂದ, ಪಾತಾಳಲಂಕಾಪುರ

ವನ್ನು ಪ್ರವೇಶಿಸಿದನು. ಅಷ್ಟರಲ್ಲಿ ಇತ್ತ ರಾಕ್ಷಸ (ರಾವಣ) ನು, ಆಕಾಶ ದಲ್ಲಿ ಸಮುದ್ರದ ಮೇಲೆ ಮನೋವೇಗದಿಂದ ಹೋಗುತ್ತಿರಲಾಗಿ ]

**ಶಬ್ದಾರ್ಥಃ** – ಇನ್ನೆವರಂ, ಇಲ್ಲಿಯವರೆಗೆ; ಪಾಳಿ, ಸೈನ್ಯ; ಉಪಾಂತ, ಸಮೀಪ; ದೆಸೆ, ಕಾರಣ; ನೆಗಳ್, ಮಾಡು; ವಿಭೂತಿ ವೈಭವ; ಅರ್ಣವ, ಸಮುದ್ರ.

**ವ್ಯಾಕರಣ;**— ಆಕಾಶ (ದ್ಭ) ಆಗಸ; ಮನಸ್ಸಿನ ವೇಗ, ಮನೋ ವೇಗ, (ಷ. ತ.)

॥ಶಾರ್ದೂಲ॥

ಖೇದಂ ಕಯ್ಗ ಳಿವಾಗೆ ದಿಗ್ವಿವರಮಂ ಹಾ ಹಾ ರವಂ ತೀವೆ ಬಾ
ಷ್ಪೋದ ಸ್ವೇದ ಜಲಂಗಳಿಂ ಕರಗಿ ನೀರಾಗೊಕ್ಕುವಂತಾಗೆ ಮೆಯ್
ಮೋದುತ್ತುಂ ಬಸಿರಂ ಪರಾಂಗನೆಯ ನೆನ್ನಂ ಕಳ್ದುಕೊಂಡೀ ಖಳಂ
ಪೋದಪ್ಪಂ ಶರಣಪ್ಪುದಾರ್ಪರೆಸುತುಂ ವೈದೇಹಿ ಪುಯ್ಯಲ್ಚಿದಳ್ ॥೭೮॥

**ಸರಳಾನುವಾದಃ**—ದುಃಖವು ಮೇರೆದಾಟಲು, ದಿಕ್ಕುಗಳೆಲ್ಲವನ್ನೂ ಹಾ! ಹಾ! ಸ್ವರವು ತುಂಬಲ್ಕು, ಕಣ್ಣೀರು ಮತ್ತು ಬೆವರಿನ ನೀರಿನಿಂದ ಶರೀರವು ಕರಗಿ ನೀರಾಗಿ ಉಕ್ಕಿ ಹೊರಚಲ್ಲುವಂತಾಗಲು, ಹೊಟ್ಟೆಯನ್ನು ಬಡೆದುಕೊಳ್ಳುತ್ತ, "ಪರಸ್ತ್ರೀಯಳಾದ ನನ್ನನ್ನು ಕದ್ದುಕೊಂಡು, ಈ ನೀಚನು ಹೋಗುತ್ತಿರುವನು. ಸಮರ್ಥರು ರಕ್ಷಿಸಬೇಕು" ಎಂದು ಸೀತೆಯು ಆಕ್ರೋಶ ಮಾಡಿದಳು.

**ಶಬ್ದಾರ್ಥಃ**— ತೀವು, ತುಂಬು; ಸ್ವೇದ, ಬೆವರು; ಒಕ್ಕುವಂತಾಗು, ಉಕ್ಕಿಹೋಚೆಲ್ಲುವಂತಾಗು; ಬಸಿರು, ಹೊಟ್ಟೆ; ಮೋದು, ಹೊಡೆ; ಆರ್ಪರ್, ಸಮರ್ಥರು; ಪುಯ್ಯಲ್ಚು, ಆಕ್ರೋಶಮಾಡು.

**ವ್ಯಾಕರಣ:**— ಬಾಷ್ಪ+ಉದ, ಬಾಷ್ಪೋದ (ಗುಣಸಂಧಿ)

ಮತ್ತೇಭ॥ ಧರಣೀರಕ್ಷಣ ದಕ್ಷದಕ್ಷಿಣಭುಜಂ ಲಕ್ಷ್ಮಣಂ ಮೈದುನಂ
ಹರಿವಂಶಂ ಜನಕಂ ಮದೀಯ ಜನಕಂ ವೀರಂ ಪ್ರಭಾಮಂಡಲಂ
ಪಿರಿಯಣ್ಣಂ ರಘುರಾಮನಂಗನೆಯೆನೆನ್ನಂ ಸೀತೆಯಂ ಪಾತಕಂ
ಪೊರೆಗೆಟ್ಟೊಯ್ದಪನೇವೆನೆಂದು ಸತಿ ಹಾ ಹಾಕ್ರಂದನಂ ಮಾಡಿದಳ್॥೭॥

**ಸರಳಾನುವಾದ:**— "ಭೂಮಿಯನ್ನು ರಕ್ಷಿಸುವುದರಲ್ಲಿ ದಕ್ಷನಾದಂಥ, ರಾಮಚಂದ್ರನ ಬಲಭುಜನಾದ ಲಕ್ಷ್ಮಣನು ನನ್ನ ಮೈದುನನು ಹರಿವಂಶದ ಜನಕರಾಯನು ನನ್ನ ತಂದೆಯು. ಶೂರನಾದ ಪ್ರಭಾಮಂಡಲನು ನನ್ನ ಹಿರಿಯ ಅಣ್ಣನು. ರಾಮಚಂದ್ರನ ಹೆಂಡತಿಯಾದ ನನ್ನನ್ನು ಈ ಪಾಪಿಯು, ನಯವನ್ನು ಬಿಟ್ಟು ಒಯ್ಯುತ್ತಿರುವನು. ಏನುಮಾಡಲಿ!" ಎಂದು ಆ ಪತಿವ್ರತೆ (ಸೀತಾದೇವಿ) ಯು ಹಾ ಹಾ ಎಂದು ಆರ್ತನಾದ ಮಾಡಿದಳು.

**ಶಬ್ದಾರ್ಥ:**— ದಕ್ಷಿಣಭುಜ, ಬಲಗೈ; ಪೊರೆಗೆಟ್ಟು, ಕ್ರಮತಪ್ಪಿ; ಆಕ್ರಂದ, ಅಳೋಣ.

**ಅನುಪ್ರಾಸಾಲಂಕಾರ:**— "ಕ್ಷ" ಕಾರ ಮತ್ತೆ ಮತ್ತೆ ಬಂದಿದೆ.

**ವ್ಯಾಕರಣ:**— ಧರಣಿಯರಕ್ಷಣ (ಷ. ತ.) ಅದರಲ್ಲಿ ದಕ್ಷನು ಯಾವನೋ ಅವನು, ರಾಮ, **ಬಹುವ್ರೀಹಿ.** ಅವನ ದಕ್ಷಿಣ ಭುಜ ಯಾವನೋ ಅವನು (ಲಕ್ಷ್ಮಣ).

॥ವಚನ॥ ಆ ರವಮನರ್ಕಜಟಿಯ ಮಗನಪ್ಪ ರತ್ನಜಟಿ ಕೇಳ್ದು ಬದ್ಧಭ್ರುಕುಟಿ ದಶಾನನ ವಿಮಾನಕ್ಕಡ್ಡಂ ಬಂದು, (ಆ ಆರ್ತನಾದವನ್ನು ಅರ್ಕಜಟಿಯ ಮಗನಾದ ರತ್ನಜಟಿಯು ಕೇಳಿ ಹುಬ್ಬುಗಂಟಿಕ್ಕಿ ರಾವಣನ ವಿಮಾನವನ್ನು ಅಡ್ಡಗಟ್ಟಿ).

॥ಕಂದ॥ ಪರಿಹರಿಸಿ ಪಾಳಿಯಂ ಭೂ
ಚರ ಖೇಚರ ಚಕ್ರವರ್ತಿ ರಾವಣ ನೀನೀ
ಪರವಧುಗಳಿಪುವುದು ವಿಹಂ
ಪಢಮಳಿಗುಂ ನಿನ್ನ ಮಹಿಮೆಗಿದು ನಡೆವಳಿಯೇ ॥೮॥

**ಸರಳಾನುವಾದ**: - ಭೂಚರರ ಹಾಗೂ ವಿದ್ಯಾಧರರ ಚಕ್ರವರ್ತಿಯಾದ ರಾವಣನೇ? ಹೀಗೆ ಕ್ರಮತಪ್ಪಿ ನೀನು ಪರರ ಹೆಂಡತಿಗೆ ಆಶೆ ಪಡುವದರಿಂದ, ಇಹಲೋಕದಲ್ಲಿ ಸುಖವೂ, ಪರಲೋಕದಲ್ಲಿ ಸದ್ಗತಿಯೂ ಸಿಗಲಾರದು. ಇದು ನಿನ್ನ ಕೀರ್ತಿಗೆ ಒಪ್ಪುವುದೇ ?

**ಶಬ್ದಾರ್ಥ**:— ಪಾಳಿ, ಕ್ರಮ;---ಎಂದು,

||ಕಂದ|| ಮೂದಲಿಸಿ ಮುಟ್ಟಿವರ್ಪುದು
ಮಾ ದಾನವನರ್ಕಜಟಿಯ ನಣ್ಪಿಂಗವನೊಳ್
ಕಾದದೆ ಕರುಣಿಸಿ ವಿದ್ಯಾ
ಚ್ಛೇದಂಗೆಯ್ದಂ ನಿರಂಕುಶಂ ದಶಕಂಠಂ ||೮೧||

**ಸರಳಾನುವಾದ**:— ಹೀಯಾಳಿಸಿ ಮೇಲೆ ಏರಿಬರಲು, ಆ ರಾಕ್ಷಸ (ರಾವಣ) ನು ಅರ್ಕಜಟಿ (ರತ್ನಜಟಿಯ ತಂದೆ) ಯ ಸ್ನೇಹಕ್ಕಾಗಿ, ಅವನೊಡ (ರತ್ನಜಟಿಯೊಡ) ನೆ ಯುದ್ಧ ಮಾಡದೆ, ದಯೆತೋರಿಸಿ, ಆತನ (ಆಕಾಶಗಮನ) ವಿದ್ಯೆಯನ್ನು ಇಲ್ಲನಂತೆ ಮಾಡಿದನು. ರಾವಣನು ಯಾರ ಅಂಜಿಕೆಯೂ ಇಲ್ಲದವನು.

**ಶಬ್ದಾರ್ಥ**:— ಮುಟ್ಟಿವರ್ಪು, ಹತ್ತಿರಬರು; ನಣ್ಪು, ಸ್ನೇಹ.

||ಕಂದ|| ಅಂಬರದಿನಾತ್ಮ ವಿದ್ಯಾ
ಡಂಬರಮುಸ್ತಮಿಸೆ ಬೀಳ್ದು ಮೂರ್ಛಾಪನ್ನಂ
ಕಂಬುದ್ವೀಪದೊಳಳವಳಿ
ದಂಬರಚರನೆರಕೆ ಮುರಿದ ಪಕ್ಕಿವೊಲಿರ್ದಂ ||೮೨||

**ಸರಳಾನುವಾದ**: — ಆಕಾಶದಲ್ಲಿ ಚಲಿಸುವವನಾದ ರತ್ನಜಟಿಯು, ತನ್ನ ಆತ್ಮವಿದ್ಯೆಯ ಪ್ರಭಾವವು ನಾಶವಾಗಲು, ಆಕಾಶದಿಂದ ಕಂಬುದ್ವೀಪದಲ್ಲಿ ಬಿದ್ದು, ಮೂರ್ಛೆಹೊಂದಿದವನಾಗಿ, ರೆಕ್ಕೆಗಳು ಮುರಿದ ಪಕ್ಷಿಯಂತೆ ಇದ್ದನು.

**ಶಬ್ದಾರ್ಥ**:—ಆಡಂಬರ, ಪ್ರಭಾವ; ಆಪನ್ನ, ಹೊಂದಿ; ಎರಕೆ, ರೆಕ್ಕೆ.

**ಅಲಂಕಾರ**:— ಉಪಮೆ.

॥ಮತ್ತೇಭ॥
ಬಗೆ ಸಂಭೋಗ ಸುಖಕ್ಕೆ ಕಾತರಿಸೆ ಕಣ್ಗಳ್ ಕೀರಿ ಸರ್ವಾಂಗಮಂ
ತೆಗೆದಾಲಿಂಗಿಸೆ ಮಾತುಗಳ್ ಮದನರಾಗೋನ್ಮಾದಮಂ ಬೀರೆ ಬಾ
ಹುಗಳಾಲಿಂಗನ ಲಾಲಸಂಗಳೆನೆ ಧೈರ್ಯಂಗೆಟ್ಟು ಮೇಲ್ವಾಯ್ವ ಜೀ
ಷ್ಟೆಗೆ ಪೌಲಸ್ತ್ಯನು ಮೊತ್ತುಗೊಟ್ಟನೆನಲಾರಂ ದರ್ಪಕಂ ದಂಡಿಸಂ ॥೫೬॥

**ಸರಳಾನುವಾದ**:- ಮನಸ್ಸು ಸೀತೆಯ ಸಂಭೋಗ ಸುಖಕ್ಕೆ ಆತುರಗೊಳ್ಳಲು, ಕಣ್ಣುಗಳು ಕಟ್ಟುನಿಟ್ಟಿರಿ ಆಕೆಯ ಯಾವತ್ತೂ ಶರೀರವನ್ನು ಚೆನ್ನಾಗಿ ಅಪ್ಪಿಕೊಳ್ಳಲು, ಮಾತುಗಳು ಕಾಮವಾಸನೆಯ ಅತಿರೇಕವನ್ನು ವ್ಯಕ್ತಮಾಡಲು, ಕೈಗಳು ಅಪ್ಪಿಕೊಳ್ಳುವ ಆತುರದಿಂದ ಕೂಡಿರುವವೋ ಎನ್ನಲು, ಧೈರ್ಯಗುಂದಿ, ಮೇಲೆ ಬೀಳುವ ದುಷ್ಟ ಕೆಲಸಕ್ಕೆ ರಾವಣನು ಆಶ್ರಯಕೊಟ್ಟನು; ಎಂದಬಳಿಕ ಕಾಮನು ಯಾರನ್ನು ಶಿಕ್ಷಿಸಲಾರನು!

**ಶಬ್ದಾರ್ಥ**:—ಕೀರಿ, ಕಟ್ಟುನಿಟ್ಟಿರಿ; ಪೌಲಸ್ತ್ಯ, ಪುಲಸ್ತ್ಯ ಋಷಿಯ ವಂಶದವ (ರಾವಣ); ಒತ್ತುಗೊಡು, ಆಶ್ರಯಕೊಡು; ದರ್ಪಕಂ, ಕಾಮನು.

**ವ್ಯಾಕರಣ**:— ಪೌಲಸ್ತ್ಯನುಂ, ಪೌಲಸ್ತ್ಯಂ+ಉಂ ("ಉಂ" ಪ್ರತ್ಯಯವು ಸಮುಚ್ಚಯಾರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ—ಶಬ್ದಮಣಿದರ್ಪಣ ೩೧೪ ಸೂತ್ರ).

**ಅಲಂಕಾರ**:— ಅರ್ಥಾಂತರನ್ಯಾಸ.

॥ವಚನ॥ ಆಗಳವನಳಿಪಿನಳಿಗೆಯ್ತುಕ್ಕೆ ಸೀತೆ ಸ್ಮರಿಸದೆ ನೀನೆನ್ನಂ ಸೋಂಕಿದೊಡೆ ನಾಲಗೆಗಿಳ್ತು ಸಾವೆನೆಂದು ಪರಿಚ್ಛೇದಿಸಿ ನುಡಿಯೆ ದಶಾಸ್ಯಂ ಮಹಾಸತಿಯ ಶೀಲದಳವನರಿಯನಪ್ಪುದರಿನನಂತವೀರ್ಯ ಕೇವಲಿಗಳಿತ್ತ ಪರವಧೂವಿರತಿವ್ರತ ಪರಿಪಾಲನಮೆನಗರಿದಾದುದೆನೆ ನಿಸರ್ಗರಾಗಿಗಳಪ್ಪ ಪೆಂಡಿರ ಪರಿಣಾಮೆಲ್ಲಿವರಂ ನಡೆದಪ್ಪುದೀಕೆಯನೊಡಂಬಡಿಸುವುದಾವ ಗಹನಮೆಂದು ತನ್ನಂ ತಾನೆ ಸಂತಯಿಸುತ್ತುಂ ಪೋಪ ಸಮಯದೊಳ್—

[ಆಗ್ಗೆ ಅವನ (ರಾವಣನ) ಮೋಹದ ದುಷ್ಕೃತಿಗೆ ಸೀತೆ ಸೈರಿಸಲಾರದೆ— "ನೀನು ನನ್ನನ್ನು ಮುಟ್ಟಿದರೆ ನಾಲಗೆ ಕಿತ್ತುಕೊಂಡು ಸಾಯುವೆನೆಂದು" ಸ್ಪಷ್ಟವಾಗಿ ಹೇಳಲು, ರಾವಣನು ಮಹಾಸತಿಯ ( ಸೀತೆಯ ) ಶೀಲದ ಸಾಮರ್ಥ್ಯವನ್ನು ಅರಿಯದವನಿರುವುದರಿಂದ, ಅನಂತವೀರ್ಯ ಕೇವಲಿಗಳು ಆಜ್ಞಾಪಿಸಿದ "ಪರವಧೂವಿರತಿವ್ರತ"ದ ಪರಿಪಾಲನೆಯು ತನಗೆ ಅಸಾಧ್ಯ ವಾಯಿತು, ಎನ್ನುವಂತೆ "ಸ್ವಭಾವ ಜನ್ಯವಾಗಿ ಪ್ರೀತಿಗೆ ವಶರಾಗುವ ಹೆಂಗಳೆಯರ ಮನಸ್ಸಿನ ನಿಶ್ಚಯವು ಅದು ಎಲ್ಲಿಯ ವರೆಗೆ ನಡೆಯುವುದು; ಈಕೆ (ಸೀತೆ) ಯು ಒಪ್ಪುವಂತೆ ಮಾಡುವುದು ಯಾವ ಕಠಿಣವಾದ ಮಾತು" ಎಂದು ತನ್ನನು ತಾನೆಯೆ ಸಮಾಧಾನ ಮಾಡಿಕೊಳ್ಳುತ್ತ ಹೋಗುವ ಹೊತ್ತಿಗೆ—]

॥ಕಂದ॥ ಅನಶನಮಂ ಕಯ್ಕೊಂಡಳ್
ಮನದೊಳ್ ಸತಿ ಪತಿಯ ಕುಶಲವಾರ್ತೆಯನಾನ್ ಕೇ
ಳ್ವಿನಮುಣ್ಣೆನೆಂದು ನೃಪಮಾ
ನಿನಿಯರ್ ಸಜ್ಜನಿಕೆಗಿಂತು ನೋಂತರುಮೊಳರೇ ॥೮೪॥

**ಸರಳಾನುವಾದಃ**— ತನ್ನ ಗಂಡನ ಕ್ಷೇಮಸಮಾಚಾರದ ಸುದ್ದಿಯನ್ನು ಕೇಳುವ ವರೆಗೆ ತಾನು ಉಣ್ಣುವುದಿಲ್ಲವೆಂದು, ಆ ಪತಿವ್ರತೆಯಾದ ಸೀತಾದೇವಿಯು, ಮನಸ್ಸಿನಲ್ಲಿಯೇ ಉಪವಾಸವ್ರತವನ್ನು ಕೈಕೊಂಡಳು. ಅರಸುಮನೆತನದ ಸ್ತ್ರೀಯರು ಗರತಿತನದ ವ್ರತವನ್ನು ಹೀಗೆ ಕೈಕೊಂಡವರು ಉಂಟೇ ?

**ಶಬ್ದಾರ್ಥಃ**—ಸಜ್ಜನಿಕೆ, ಒಳ್ಳೆಯಗುಣ (ಗರತಿತನ); [ಇಕೆ, ಭಾವ ವಾಚಕನಾಮ]; ನೋನ್, ವ್ರತಮಾಡು; ನೋಂತರುಂ, ವ್ರತಕೈಕೊಂಡವರು.

॥ವಚನ॥ ಅಂತು ರಾವಣಂ ಲಂಕೆಯನೆಯ್ದೆವಂದು ಗೀರ್ವಾಣರಮಣಮೆಂಬ ನಿಜವಿನೋದವನಮಂಪೊಕ್ಕು ಅಲ್ಲಿಯ ವಿಚಿತ್ರಮಣಿಮಯಗೇಹದೊಳ್ ವೈದೇಹಿಯನಿರಿಸಿ ತಾನುಂ ತನ್ನರಮನೆಯ ಕರುಮಾಡಮಂ ಪೊಕ್ಕ

ರ್ಗಡುಂ ಖರದೂಷಣರ ಮರಣವಾರ್ತೆಯುಂ ಚಂದ್ರನಖಿಕೇಳ್ದು ಮಹಾ ಶೋಕಂಗೆಯ್ವುದುಮಾಕೆಗೆ ಸಂಸಾರಸ್ವರೂಪಮಂ ತಿಳಿಪಿ ಖರದೂಷಣರಂ ಕೊಂದನನಮೋಘಂ ಕೊಲ್ವೆನೆಂದಳ್ಕೆಯುಂ ಬಾರಿಸಿ ಭಗವದರ್ಹದ್ಭವನಂಗ ಳೊಳ್ ಮಹಾಪೂಜೆಗಳಂ ಮಾಡಿಸಿ ರಾಜಭವನಕ್ಕೆ ಬಂದು ಶಯ್ಯಾಸದ ನಮಂ ಪೊಕ್ಕು (ಹಾಗೆ ರಾವಣನು ಲಂಕೆಗೆ ಬಂದು "ಗೀರ್ವಾಣರಮಣ" ವೆಂಬ ತನ್ನ ವಿನೋದವನವನ್ನು ಹೊಕ್ಕು, ಅಲ್ಲಿಯ ವಿಚಿತ್ರವಾದ ರತ್ನ ಮಣಿಮಯ ಸದನದಲ್ಲಿ ಸೀತೆಯನ್ನು ಇರಿಸಿ, ತಾನು ತನ್ನ ಅರಮನೆಯ ಉಪ್ಪರಿಗೆಯನ್ನು ಸೇರಿ ಇರುವಾಗ ಖರದೂಷಣರ ಮರಣ ವಾರ್ತೆಯನ್ನು ಚಂದ್ರನಖಿಯು ಕೇಳಿ ಬಹಳ ದು:ಖವನ್ನು ಮಾಡುತ್ತಿರಲು ಆಕೆಗೆ ಸಂಸಾ ರದ ನಿತ್ಯಾನಿತ್ಯತೆಗಳ ಬಗ್ಗೆ ತಿಳಿಹೇಳಿ ಖರದೂಷಣರನ್ನು ಕೊಂದಂಥವ ನನ್ನು ತಪ್ಪದೇ ಕೊಲ್ಲುತ್ತೇನೆಂದು ಹೇಳಿ ಅವಳ ದು:ಖವನ್ನು ತಡೆದು ಜಿನನ ಮಂದಿರಗಳಲ್ಲಿಯೂ ಅರ್ಹಂತರ ಭವನಂಗಳಲ್ಲಿಯೂ ಮಹಾ ಪೂಜೆಗಳನ್ನೇರ್ಪಡಿಸಿ ರಾಜಗೃಹಕ್ಕೆ ಬಂದು ತನ್ನ ಶಯನಮಂದಿರವನ್ನು ಹೊಕ್ಕು—)

**ಶಬ್ದಾರ್ಥ:** - ಕರುಮಾಡಮಂ, ಉಪ್ಪರಿಗೆ; ಅಮೋಘಂ, ತಪ್ಪದೆ; ಅಳ್ಕೆ, ದು:ಖ; (ಕೆ, ಇಕೆ, ಮ-ಭಾವವಾಚಕನಾಮಪದ).

**ವ್ಯಾಕರಣ:**— ಭಗವತ್+ಅರ್ಹತ್+ಭವನಂಗಳ್+ಒಳ್; ಶಯ್ಯಾ (ಪ್ರ) ಸೆಜ್ಜೆ; ಅ+ಮೋಘಂ, ತಪ್ಪದೆ ("ಅ") ಎಂಬ ಉಪಸರ್ಗಾ ವ್ಯಯಕ್ಕೆ "ಇಲ್ಲ" ವೆಂಬ ಅರ್ಥವಾಗುವುದು. )

॥ಚಂಪಕ॥ ತಡೆವುದು ತಕ್ಕುದಲ್ತು ಖರದೂಷಣರಂ ಕಡುಕಯ್ದು ಕೊಂದನಂ
ಮಡಿಸುವೆನೆಂಬ ತಕ್ಕಳಿದು ಸೀತೆಯನೇತೆರದಿಂದಮೆಂತೊಡಂ
ಬಡಿಸುವೆನೆಂತು ಮೇಳಿಸುವೆನೆಂತು ಮದೀಯಮನೋಜತಾಪಮಂ
ಕಿಡಿಸುವೆನೆಂದು ಪಂಬಲಿಸಿದಂ ಪಲವಂ ಮನದೊಳ್ ದಶಾನನಂ ॥೮೫॥

**ಸರಳಾನುವಾದ:**— "ತಡಮಾಡುವುದು ಯೋಗ್ಯವಲ್ಲ– ಖರದೂ ಷಣರನ್ನು ಕೊಂದವನನ್ನು ಶೀಘ್ರದಲ್ಲಿಯೇ ಕೊಲ್ಲುವೆನು" ಎಂಬ ಸಾಮ

ರ್ಥ್ಯವು ಮಾಯವಾಗಿ ಸೀತಾದೇವಿಯನ್ನು ಯಾವ ರೀತಿಯಿಂದ ಹೇಗೆ ಒಡಂಬಡಿಸುವೆನು; ಹೇಗೆ ಆಕೆಯನ್ನು ಕೂಡುವೆನೋ! ನನ್ನ ಮದನ ತಾಪವನ್ನು ಹೇಗೆ ಶಾಂತಿಗೊಳಿಸುವೆನು-" ಎಂದು ರಾವಣನು ಮನಸ್ಸಿನಲ್ಲಿ ಹಲವು ವಿಧದಿಂದ ಹಂಬಲಿಸಿದನು.

**ಶಬ್ದಾರ್ಥ**:—ಕಡುಕೆಯ್ದು, ಹುದುಹುಗೊಂಡು; ತಕ್ಕು, ಸಾಮರ್ಥ್ಯ; ಕಿಡಿಸು, ನಾಶಮಾಡು; ಮೇಳಿಸು, ಕೂಡು; ಮದೀಯ, ನನ್ನ:

॥ಉತ್ಪಲ॥ ಏತರ ಸೋಂಕುಮಾವುದರ ಗಾಡಿಯುಮೊಂದರ ಕಂಪುಮೆನ್ನರೊ
ಳ್ಮಾತುಮದೆಂತುಟಪ್ಪ ರಸಮುಂ ತನಗೆಂತುಮಸಹ್ಯಮಾಗೆ ಹೃ
ಜ್ಜಾತನ ಮಾಯೆ ಮೋಹಿಸುವುದುಂ ಬಗೆಯಂ ವಿಗತಾನ್ಯಚಿಂತನಾ
ಸೀತೆಯ ಚಿಂತೆಯಿಂ ದಶಮುಖಂ ಮರವಾನಸನಂತೆ ತೋರಿದಂ ॥೮೬॥

**ಸರಳಾನುವಾದ**:— ಯಾವುದರ ಸ್ಪರ್ಶವೂ, ಯಾವುದರ ಸೌಂದರ್ಯವೂ, ಯಾವ ವಸ್ತುವಿನ ಸುವಾಸನೆಯೂ, ಎಂಥವರ ಒಳ್ಳೆಯ ಮಾತುಗಳೂ, ಅದೆಂತಹ ಸವಿಯಾದ ರಸವೂ ಕೂಡ ತನಗೆ (ರಾವಣನಿಗೆ) ಎಲ್ಲ ರೀತಿಯಿಂದಲೂ ಸೇರದಂತಾಗಲು, ಕಾಮನ ಮಾಯೆಯು ಮನಸ್ಸನ್ನು ಮರುಳುಗೊಳಿಸಿರಲು, ರಾವಣನು, ಬೇರೆ ಯಾವ ಚಿಂತೆಯೂ ಇಲ್ಲದೆ, ಆ ಸೀತಾದೇವಿಯ ಚಿಂತೆಯಿಂದ ಹುಚ್ಚನಂತೆ ಕಂಡನು.

**ಶಬ್ದಾರ್ಥ**:—ಎನ್ನರ್, ಎಂಥೆಂಥವರ; ಒಳ್+ಮಾತು, ಬುದ್ಧಿಯ ಮಾತು; ಎಂತುಟುಂ, ಎಷ್ಟು; ಹೃತ್+ಜಾತಂ, ಕಾಮ; ವಿಗತ+ಅನ್ಯ+ಚಿಂತಂ, ಅನ್ಯಚಿಂತೆಯಿಲ್ಲದವನಾಗಿ; ಮರ+ಮಾನಸಂ, ಹುಚ್ಚು ಮನುಷ್ಯನು.

॥ವಚನ॥ ಅಂತು ಚಿಂತಾಕ್ರಾಂತನಾದ ನಿಜಮನೋವಲ್ಲಭನಂ ಮಂಡೋದರಿ ಕಂಡು, (ಹಾಗೆ ಚಿಂತೆಯಿಂದ ಮುಸುಕಿದ ತನ್ನ ಪ್ರಾಣಪ್ರಿಯನನ್ನು ಮಂಡೋದರಿಯು ನೋಡಿ.)

ಚಂಪಕ॥ ಖರನನಿಪತ್ತಿಯೊಳ್ ವಿಕಲಾವನೆ ಗೆತ್ತಿನಿತೇಕೆ ಪೆಂಡಿರಂ
ತಿರೆ ಬಹುಶೋಕಮೀ ತೆರದಿನಿರ್ದೊಡೆ ಗಂಡಗುಣಕ್ಕೆ ನಾಡೆಯುಂ
ಪರಿಭವಮೆಂದವಳೆತ್ತಲರಿವಳ್ ಗಗನೇಚರ ಚಕ್ರಿ ಜಾನಕೀ
ವಿರಹ ಕೃಶಾನು ಸುತ್ತಿ ಸುಡೆ ಚಿತ್ತಮನಾಕುಲನಾದನೆಂಬಿಸಂ ॥೮೭॥

**ಸರಳಾನುವಾದ:**—"ಖರನ ದುರ್ದೆಸೆಯಿಂದ ಭ್ರಮಿಸಿ ದುಃಖಿತ ನಾದನೇ ? ಹೆಂಗಸರಂತೆ ಇಷ್ಟೇಕೆ ಬಹಳ ದು:ಖ ? ಈ ರೀತಿಯಿಂದ ಇರುವುದಾದರೆ ಪೌರುಷಕ್ಕೆ ಅಧಿಕವಾದ ಅಪಮಾನವು" ಎಂದಳು. ಸೀತೆಯ ವಿಷಯದಲ್ಲಿರುವ ಮದನತಾಪವೆಂಬ ಬೆಂಕೆಯು, ಮನಸ್ಸನ್ನು ಸುತ್ತಿ ಸುಡಲು ದುಃಖಿತನಾದನು; ಎಂಬುವನ್ನು ವಿದ್ಯಾಧರ ಮಹಾರಾಣಿ (ಮಂಡೋದರಿ)ಯು ತಾನು ಹೇಗೆ ತಿಳಿಯುವಳು !

**ವ್ಯಾಕರಣ;**— **ಶಬ್ದಾರ್ಥ:** — } ಗಿರ್ (ಭೂ. ಕೃ.) ಗೆತ್ತು, ಚಿಂತಿಸು; ಪೆಣ್ (ಬಹುವಚನ) ಪೆಂಡಿರ್, ಹೆಣ್ಣುಮಕ್ಕಳು; ಗಂಡಗುಣ, ಪೌರುಷ, ನಾಡೆ, ಬಹಳ; ಪರಿಭವ, ಅವಮಾನ; ಗಗನೇಚರಚಕ್ರಿ, ಖೇಚರನ ಮಹಿಷಿ (ಚಕ್ರಿ "ಇದರಲ್ಲಿಯು" "ಇ" ಕಾರ ಪ್ರತ್ಯಯವು ಸ್ತ್ರೀವಾಚಕವಾಗಿದೆ.)

॥ವಚನ॥ ಎನೆ ದಶಗ್ರೀವನೆನ್ನ ಬೇವಸಕ್ಕಿದು ನಿಮಿತ್ತಮಲ್ತು ನಿನ ಗೆನ್ನತೆರನ ನರಿಯಲಾಗದೆಂದು—(ಹೀಗೆನ್ನಲು, ರಾವಣನು "ನನ್ನ ವ್ಯಸನಕ್ಕೆ ಇದುಕಾರಣವಲ್ಲ. ನಿನಗೆ ನನ್ನ ರೀತಿಯನ್ನು (ಅವಸ್ಥೆಯನ್ನು) ಹೇಳಲಾಗದು" ಎನ್ನಲು—).

**ಶಬ್ದಾರ್ಥ:**— ಗ್ರೀವ, ಕಂಠ; ಬೇವಸ, ವ್ಯಸನ; ತೆರನಂ, ರೀತಿಯನ್ನು; ನಿಮಿತ್ತ, ಕಾರಣ.

॥ಕಂದ॥ ಬೆಂಡಾಗೆ ಮನಂ ಮೌನಂ
ಗೊಂಡಿರೆ ವಲ್ಲಭನ ಮನಮನರಿಪಾಗ್ರಹದಿಂ
ಮಂಡೋದರಿ ಮಾಣದೆ ಬೆಸ
ಗೊಂಡಳ್ ಕೌತುಕಮಿದೇನ್ ನಿಮಿತ್ತಮೆನುತ್ತುಂ ॥೮೮॥

**ಸರಳಾನುವಾದಃ**— ಮನಸ್ಸು ನಿಸ್ಸತ್ವವಾಗಿ ರಾವಣನು ಸುಮ್ಮನೆ ಇರಲು ತನ್ನ ಗಂಡನ ಮನಸ್ಸನ್ನು ತಿಳಿಯಕೊಳ್ಳುವ ಹಟದಿಂದ ಮಂಡೋದರಿಯು ಬಿಡದೆ "ಈ ಆಶ್ಚರ್ಯವು ಯಾವಕಾರಣದಿಂದ" ಎಂದು ಕೇಳಿಕೊಂಡಳು.

**ಶಬ್ದಾರ್ಥ:**— ಆಗ್ರಹ, ಹಟ; ಮಾಣದೆ, ಬಿಡದೆ;

॥ವಚನ॥ ಅಂತು ಬೆಸಗೊಳ್ವುದುಂ ಮರು ಮಾತುಗುಡದೆ ಲಜ್ಜಾರಸ ನಿಮಗ್ನಾನನಂ ದಶಾನನಿರೆ (ಹಾಗೆ ಕೇಳುತ್ತಿರಲು ತಿರುಗಿ ಉತ್ತರ ಕೊಡಲಾರದೆ ಲಜ್ಜಾರಸದಲ್ಲಿ ಮುಳುಗಿದ ಮುಖವುಳ್ಳ ರಾವಣನು ಇರುತ್ತಿರಲು)

॥ಉತ್ಪಲ॥
ಗಂಡುಡೆಯುಟ್ಟು ಕಯ್ದುವಿಡಿದುಮ್ಮಳಮುಂ ನಿನಗುಂಟುಮಾಳ್ಪಬ
ಲ್ಗಂಡಿನ ದೇವ ಮಾನವ ವಿಯಚ್ಚರರೋರ್ವರುಮಿಲ್ಲ ನಿನ್ನ ದೋ
ರ್ಮಂಡಲಮೀ ತ್ರಿಖಂಡಮುಮನಾಕ್ರಮಿಸಿತ್ತಿದು ಪುಷ್ಪಕಾಂಡಕೋ
ದಂಡನಗೊಡ್ಡುಮುರ್ಚಿದುವೆ ತೋರುವೆಯಾತನ ಪೂವಿನಂಬುಗಳ್ ॥೮॥

**ಸರಳಾನುವಾದಃ**— ಕವಚವನ್ನು ತೊಟ್ಟು, ಆಯುಧವನ್ನು ಹಿಡಿದು, ನಿನಗೆ ಕಳವಳವನ್ನುಂಟುಮಾಡುವ ವಿಶೇಷ ಸಾಮರ್ಥ್ಯವುಳ್ಳ ದೇವತೆಗಳು ಮನುಷ್ಯರು ವಿದ್ಯಾಧರರು ಒಬ್ಬರೂ ಇಲ್ಲ. ನಿನ್ನ ಬಾಹುಬಲವು ಈ ಮೂರು ಖಂಡಗಳನ್ನೂ ಮುತ್ತಿರುವುದು ಇದು (ಈ ಅವಸ್ಥೆಯು) ಕಾಮನ ಕುಚೇಷ್ಟೆಯು. ಆತನ ಹೂವಿನ ಬಾಣಗಳು ಚುಚ್ಚಿದುದು ಕಾಣಿಸುವುದಿಲ್ಲವೇ! (ಕಾಮನ ಹೂವಿನ ಬಾಣಗಳನ್ನು ಆತನ ಮೈಮೇಲೆ ಕಾಣುತ್ತಿರುವ ಬೆಮರು ಹನಿಗಳಿಗೆ ಹೋಲಿಸಬಹುದು.)

**ಶಬ್ದಾರ್ಥ:**— ಗಂಡುಡೆ, ಕವಚ; ಕಯ್ದು, ಆಯುಧ; ಉಮ್ಮಳ, ಕಳವಳ; ಗೊಡ್ಡ, ತುಂಟತನ;

**ವ್ಯಾಕರಣ:**— ದೋರ್ಮಂಡಲಂ (ಷ. ತ) ಪೂವಿನಂಬು (ಷ. ತ) ದೇವಮಾನವವಿಯಚ್ಚರರು (ದ್ವಂದ್ವ) ಉರ್ಚು, ಚುಚ್ಚು

||ಕಂದ|| ಸ್ಮರನಂ ಮೆಚ್ಚದ ನಿನ್ನೀ
ಪರಿಜಂ ಕಡೆಗಣಿಸಿ ನಿನಗೆಮನಿತೆಚ್ಚಗಮಂ
ತರಲಾರ್ತ ನೀರೆ ಲೆಪ್ಪದ
ಬರೆಪದ ಕಂಡರಣೆಯೆಸದ ಪೆಣ್ಣ ಕ್ಕುಮವಳ್ ||೯೦||

**ಸರಳಾನುವಾದ:—** ಕಾಮನಿಗಿಂತಲೂ ಅಧಿಕರೂಪವಂತನಾದ ನಿನ್ನನ್ನು ಮೆಚ್ಚದೆ, ನಿನ್ನ ಈ ರೂಪವನ್ನು ತಿರಸ್ಕರಿಸಿ; ನಿನಗೆ ಇಷ್ಟು ವ್ಯಥೆಯನ್ನುಂಟು ಮಾಡಲು ಸಮರ್ಥಳಾದ ಸುಂದರಿಯು ಕಿಟ್ಟದ ಮಣ್ಣಿನಿಂದ ಮಾಡಿದವಳಾಗಲಿ ಚಿತ್ರದಲ್ಲಿ ಬರೆದವಳಾಗಲಿ, ಅಥವಾ ಶಿಲ ಕಲಾಕೃತಿಯಲ್ಲಿದ್ದವಳಾಗಲಿ ಇದಲಷ್ಟೆ ಸಾಕು. (ಅಂದರೆ ಕಿಟ್ಟದ ಬೊಂಬೆಗಿಂತಲೂ ಬಣ್ಣದಿಂದ ಬರೆದ ಚಿತ್ರವು ಸುಂದರವು. ಅದಕ್ಕಿಂತಲೂ ಗಾತ್ರವನ್ನು ಸಹ ತೋರಿಸಬರುವ ಶಿಲ್ಪಕಲಾಕೃತಿಯು ಅತ್ಯಂತ ಸುಂದರವು. ರೂಪದಲ್ಲಿ ಕಾಮನನ್ನು ಪಗ ಸೋಲಿಸುವ ಸೌಂದರ್ಯ ರಾವಣನದು. ಅಂಥವನನ್ನೂ ಕಡೆಗಣಿಸಬೇಕಾದರೆ ಅವಳು ಸಾಮಾನ್ಯರೂಪವುಳ್ಳಸ್ತ್ರೀಯಾಗಿರದೆ ಅತ್ಯಧಿಕ ರೂಪವನ್ನು ತಾಳಿದ ಶಿಲ್ಪಕೃತಿಯೇ ಆಗಿರಬೇಕೆಂಬ ಊಹೆ ಮಂಡೋದರಿಯದು.)

**ಶಬ್ದಾರ್ಥ:—** ಪರಿಜಂ, ರೂಪು; ಅಚ್ಚಿಗ, ಕೇಡು (ವ್ಯಥೆ) ಲೆಪ್ಪದ, ಮಣ್ಣಿನ: ಬರೆಪದ, ಚಿತ್ರಿಸಿದ್ದು: ಕಂಡರಣೆ, ಕೆತ್ತಿದ; ಆರ್ತ, ಸಮರ್ಥಳಾದ;

||ವಚನ|| ಎಂಬರಿಮ ಮರಿಯುವಂತೆ ತೆರೆಯೆನುಡಿಯೆ ಮನದೆಕೊಂಡು ಮಂಡೋದರಿಯ ಮೊಗಮಂನೋಡಿ (ಹೀಗೆಂದು ತಿಳಿದೂ ತಿಳಿಯದಂತೆ ಸ್ಪಷ್ಟವಾಗಿ ಮಾತನಾಡಲು (ರಾವಣನು) ಮನಸ್ಸಿನಲ್ಲಿ ವಿಚಾರಿಸಿ, ಮಂಡೋದರಿಯ ಮುಖವನ್ನು ನೋಡಿ)

||ಚಂಪಕ|| ಅರಿವುವ ವಾರ್ತೆಯಲ್ತು ನಿನಗೆನ್ನ ನೆಗಳ್ತೆಯ ವಾರ್ತೆನೀನೆ ಮ
ನ್ನರಿದ ಬಳಿಕ್ಕನಂ ನಿನಗೆ ವಂಚಿಸಲಾಗದು ತಂದೆನೆಂದು ಮುಂ
ದರಿಯದ್ದೊ ಸೀತೆಯುಂ ಮದನನೊಕೆಯ ದೂಸರೀನೆನ್ನನೆಚ್ಚಮಂ
ನೆರಗೊಳೆ ಪೂವಿನಂ ಬೆಲಗಿನಂಬುಗಳೆಂಬಿನ ಪೆಂಬುಬಾಣನೇ ||೯೧||

**ಸರಳಾನುವಾದಃ**— ನನ್ನ ಕೃತಿ (ಕೆಲಸ) ಯ ಸುದ್ದಿಯು ನಿನಗೆ ತಿಳಿಸುವ ಸುದ್ದಿಯಲ್ಲ. ನೀನೆಯೆ ಮೊದಲು ತಿಳಿದುಕೊಂಡಬಳಿಕ ಅದನ್ನು ನಿನ್ನಿಂದ ಮುಚ್ಚಿಡಲಾಗದು. ಮುಂದೆ ಏನಾಗುವದೆಂಬುದನ್ನು ವಿಚಾರಿಸದೆ ಇಂದು ಸೀತೆಯನ್ನು ತಂದೆನು. ಕಮಲಮುಖಿಯೇ (ಮಂಡೋದರಿಯೇ ?) ಕಾಮನು ಆಕೆಯ ಕಾರಣದಿಂದ ಹೂವಿನ ಬಾಣಗಳು ಉಕ್ಕಿನ ಬಾಣಗಳೋ ಎಂಬುವಂತೆ ಮರ್ಮಸ್ಥಾನವು ಭೇದವಾಗುವಂತೆ ನನ್ನನ್ನು ಬಾಣಗಳಿಂದ ಹೊಡೆಯುತ್ತಿರುವನು,

**ಶಬ್ದಾರ್ಥಃ** – ನೆಗಳ್ತೆ, ಕೆಲಸ; ದೂಸರ, ಕಾರಣ; ನೆಲನಂ+ಕೊಳ್, ನೆರಗೊಳೆ, ಮರ್ಮಸ್ಥಾನವನ್ನು ಭೇದಿಸು. ಅಲಂಕಾರ, ಉತ್ಪ್ರೇಕ್ಷೆ.

॥ವಚನ॥ ಎನೆದಶಾನನ ದಶಾವಸ್ಥೆಯಂ ಕಂಡು ಮಂಡೋದರಿ ಭಯಗೊಂಡು [ ಹೀಗೆನ್ನುತ್ತಿರಲು ರಾವಣನ ದಶಾವಸ್ಥೆ (ಅಭಿಲಾಷೆ, ಚಿಂತೆ, ಸಂಸ್ಮೃತಿ, ವಿಭುಗುಣಸ್ಮೃತಿ, ಸಂತಾಪನ, ಕ್ರಿಯಾದ್ವೇಷ, ವಿಕಲ, ಪ್ರಾಣ, ಮೂರ್ಛೆ, ಮರಣ ) ಯನ್ನು ನೋಡಿ ಮಂಡೋದರಿಯು ಭಯದಿಂದ

॥ಕಂದ॥ ಅಚಿರಪ್ರಭೆಯುಂ ಪೆಂಡಿರ
ಶುಚಿತ್ವಮುಂ ಕ್ಷಣದಿನಗ್ಗಳಂ ನಿಲ್ಕುಮೆ ಪೇಳ್
ಖಚರೇಂದ್ರ ನಿಜಾಕೃತಿ ಚಿ
ತ್ತ ಚಮತ್ಕೃತಿ ಕಂಡಿದರ್ಕೆ ಸೋಲದರೊಳರೇ ॥೯೨॥

**ಸರಳಾನುವಾದ:** – ಚಂಚಲವಾದ ಮಿಂಚಿನ ಕಾಂತಿಯೂ, ಸ್ತ್ರೀಯರ ಪಾತಿವ್ರತ್ಯವೂ, ಕ್ಷಣಕ್ಕಿಂತಲೂ ಹೆಚ್ಚುಹೊತ್ತು ನಿಲ್ಲುವವೇ! ಹೇಳು. ರಾವಣನೇ? ನಿನ್ನ ಸೌಂದರ್ಯವನ್ನೂ ಮತ್ತು ಮನಸ್ಸಿನ ಜಾಣತನವನ್ನೂ ನೋಡಿ, ಇದಕ್ಕೆ ಮೋಹಿಸದವರುಂಟೇ!

**ಶಬ್ದಾರ್ಥ:**— ಅಗ್ಗಳಂ, ಹೆಚ್ಚುಹೊತ್ತು (ಅತಿಶಯ).

**ಅಲಂಕಾರಃ**— ದೀಪಕ.

||ವಚನ|| ಎಂದು ಸಂತಸಂಬಡೆ ನುಡಿದಾಕೆಯನೊಡಂಬಡಿಸಲಾನೆ ಸಾಲ್ವೆನೆಂದು ಸಮಸ್ತಾಂತಃಪುರ ಸೀಮಂತಿನಿಯರಂ ವೆರಸು ಸೀತೆಯ ಸಮೀಪಕ್ಕೆ ನಂದು ವಿಲಾಸದಿಂ ಕುಳ್ಳಿರ್ದು ಜಾನಕಿಯುಂ ನೋಡಿ (ಎಂದು ಸಂತೋಷವಾಗುವಂತೆ ಮಾತನಾಡಿ ಆಕೆ (ಸೀತೆ) ಯನ್ನು ಒಪ್ಪುವಂತೆ ಮಾಡಲು ನಾನೆಯೆ ಸಾಕೆಂದು, ಎಲ್ಲ ಅಂತಃಪುರದ ಹೆಂಣುಮಕ್ಕಳನ್ನು ಕೂಡಿಕೊಂಡು, ಸೀತೆಯ ಸಮೀಪಕ್ಕೆ ಬಂದು, ವೈಭವದಿಂದ ಕುಳಿತುಕೊಂಡು ಸೀತೆಯನ್ನು ನೋಡಿ) —

**ಶಬ್ದಾರ್ಥ:**— ಸಾಲ್, ಸಾಕು; ಸೀಮಂತ; ಬಯ್ತಲೆ.

||ಉತ್ಪಲ|| ಪಂಕಜ ಸಂಭವಂ ನಿನಗೆ ಪಾಸಟಿಯಲ್ಲದ ರಾಘವಂಗೆ ನಿ
ನ್ನಂ ಕುಡೆ ಕಂಡು ಸೈರಿಸದೆ ಚಿತ್ತಭವಂ ದಶಕಂಧರಂಗೆ ಕೊ
ಟ್ಟಂ ಕಡುನೀರೆ ನಿನ್ನನನುರೂಪವರಂಗೊಡಗೂಡಿ ಲೀಲೆಯಿಂ
ಲಂಕೆಯನಾಳ್ದು ತಾಳ್ದ ರಸಿವಟ್ಟಮನಾತ್ಮ ಲಲಾಟ ಪಟ್ಟದೊಳ್ ||೯೩||

**ಸರಳಾನುವಾದ:**–ನಿನಗೆ ಸಮಾನನಲ್ಲದ ರಾಮಚಂದ್ರನಿಗೆ ಬ್ರಹ್ಮನು ನಿನ್ನನ್ನು ಕೊಡಲು, ನೋಡಿ ಸಹಿಸದೆ, ಕಾಮನು ನಿನ್ನನ್ನು ರಾವಣನಿಗೆ ಕೊಟ್ಟನು. ಯೋಗ್ಯ ವರನನ್ನು ಕೂಡಿಕೊಂಡು, ನಿನ್ನ ಹಣೆಯಲ್ಲಿ ಪಟ್ಟಮಹಿಷಿ (ಮಹಾರಾಣಿ)ಯೆಂಬ ಲಿಖಿತವನ್ನು ಧರಿಸಿ, ಲೀಲೆಯಿಂದ ಲಂಕೆಯನ್ನು ಆಳು,

**ಶಬ್ದಾರ್ಥ:**— ಪಾಸಟಿ, ಸರಿಸಮಾನ; ಚಿತ್ತಭವ, ಕಾಮ.

||ಉತ್ಪಲ|| ಈ ನವಯೌವನೋದಯಮನೀ ನಯನೋತ್ಸವಮಪ್ಪರೂಪಿನು
ದ್ದಸಿಯನೀ ತನುಚ್ಛವಿಯನೇವೊಗಳ್ದಪ್ಪುದೊ ಸೋಲ್ತುಬಂದೊಡಂ
ಮೇನಕೆ ಬಾಳ್ತೆಗೆಯ್ಯದ ದಶಾನನನುಂ ಬಸದಾದನೆಂದೊಡಾರ್
ಜಾನಕಿ ನಿನ್ನವೋಲುಳಿದ ಮಾನಿನಿಯರ್ ಕಡುಗಾಡಿಕಾರ್ತಿಯರ್ ||೯೪||

**ಸರಳಾನುವಾದ:**— ಈ ನೂತನಪ್ರಾಯದ ಶೋಭೆಯನ್ನು ಕಣ್ಣುಗಳಿಗೆ ಹಬ್ಬ (ಸಂತೋಷ) ವನ್ನುಂಟುಮಾಡುವ ಈ ಸೌಂದರ್ಯದ ಆಧಿಕ್ಯ

(ಹೆಚ್ಚಳ, ವನ್ನು ಈ ದೇಹಕಾಂತಿಯನ್ನು ಎಷ್ಟು ಹೊಗಳಿದರೂ ತೀರದು. ಮೇನಕೆ ಮೋಹಿಸಿ ತಾನಾಗಿಬಂದರೂ ಲೆಕ್ಕಿಸದ ರಾವಣನೂ ನಿನ್ನ ವಶನಾದನು. ಅಂದಬಳಿಕ ಸೀತಾದೇವಿಯೇ ನಿನ್ನ ಹಾಗೆ ಉಳಿದ ಸ್ತ್ರೀಯರು ಯಾರು ಸೌಂದರ್ಯವತಿಯರು ಇದ್ದಾರೆ!

ಶಬ್ದಾರ್ಥ:— ಉದ್ದಾನಿ, (ಆಧಿಕ್ಯ)ಹೆಚ್ಚಿಗೆ ; ಬಾಳ್ತಿಗೆಯ್ಯದ, ಲಕ್ಷಿಸದ; ಬಸದಾದನು, ವಶವಾದನು; ಗಾಡಿಕಾರ್ತಿ, ಸೌಂದರ್ಯವತಿ;

ವ್ಯಾಕರಣ:— ಗಾಡಿ+ಕಾರ್ತಿ (ಸ್ತ್ರೀವಾಚಕಪ್ರತ್ಯಯ) ಗಾಡಿಕಾರ್ತಿ;

॥ಚಂಪಕ॥ ಇಸುವೆಸಕಯ್ಸು ಖೇಚರಪುರಂಧ್ರಿಯರಂ ಭರತತ್ರಿಖಂಡದೊಳ್
ಪಸರಿಸು ನಿನ್ನ ಗೋಸಣೆಯ ನಾಣೆಯನೀ ಖಚರೇಂದ್ರ ವಕ್ಷದೊಳ್
ವಸಿಯಿಸು ಲಕ್ಷ್ಮಿವೊಲ್ ವಿಜಯಲಕ್ಷ್ಮಿವೊಲಾತನ ತೋಳ ತಳ್ಪಿನೊಳ್
ಪೊಸಯಿಸುನಲ್ಮೆಯಂದಿವಸಲಕ್ಷ್ಮಿಯನೇಕೆಯೊಬಂಜೆಮಾಡುವಯ್ ॥೯೫॥

ಸರಳಾನುವಾದ:— ನಿನ್ನ ಇಷ್ಟದಂತೆ ವಿದ್ಯಾಧರ ಸ್ತ್ರೀಯರ ಮೇಲೆ ಅಧಿಕಾರ ನಡೆಯಿಸು. ಭರತಖಂಡವನ್ನೊಳಗೊಂಡು ಮೂರು ಲೋಕದಲ್ಲಿ ನಿನ್ನ ಆಜ್ಞೆಯ ಘೋಷಣೆಯನ್ನು ಹಬ್ಬಿಸು. ಲಕ್ಷ್ಮಿಯಂತೆ ರಾವಣನ ಹೃದಯದಲ್ಲಿ ವಾಸಿಸು. ವಿಜಯಲಕ್ಷ್ಮಿಯಂತೆ ಆತನ ಬಾಹುಗಳ ಆಲಿಂಗನದಲ್ಲಿ ನಿನ್ನ ಪ್ರೇಮವನ್ನು ಸಲ್ಲಿಸು. ಹಗಲೆಂಬ ಲಕ್ಷ್ಮಿಯನ್ನು ವ್ಯರ್ಥವಾಗಿ ಏಕೆ ಕಳೆಯುವಿ?

ಶಬ್ದಾರ್ಥ:— ಇಸು, ಇಷ್ಟ; ಬೆಸಕೈಸು, ಅಧಿಕಾರನಡಸು; ಘೋಷಣೆ ಧ್ಭ), ಗೋಸಣೆ; ಪುರಂಧ್ರಿಯರು, ಅಂತಃಪುರದ ಸ್ತ್ರೀಯರು; ತಳ್ಪು, ಆಲಿಂಗನ; ಆಜ್ಞಾ(ಧ್ಭ), ಆಣೆ;

॥ವಚನ॥ ಎನೆ ಜಾನಕಿ ಮಂಡೋದರಿಗೆ ಮನದೊಳೆ ಕನಲ್ದು (ಎನ್ನುತ್ತಿರಲು ಸೀತಾದೇವಿಯು ಮಂಡೋದರಿಯ ಮಾತುಗಳಿಗಾಗಿ ಮನಸ್ಸಿನಲ್ಲಿಯೇ ಸಿಟ್ಟಿಗೆದ್ದು)

॥ಮ ಸ್ರಗ್ಧ ರೆ॥
ಇದು ಮತ್ತೋೀಸ್ಮತ್ತ ಜಲ್ಪಂ ಕುಲವಧುವರ ಮಾತಲ್ತು ನಿಮ್ಮೊಂದಿಗರ್ ವಂಶದಕೇಡಂ ನೋಡದೊಳ್ಪಂ ಬಗೆಯದೆ ಪಳಿಗಂ ಪಾತಕಕ್ಕಂ ಭಯಂಗೊಳ್ಳದೆ ಪೇಳರ್ ಪೊಲ್ಲಮಾತಂ ನುಡಿವಿರಿದು ಮನಂನೋಳ್ಪ ಸಂಕಲ್ಪ ಜಲ್ಪಂ ಮದಧೀಶಂ ರಾಮಚಂದ್ರಂ ಪೊರೆಗೆನೆಪೆರರೆ:ಮಾತೊ ಜಾತಾನುಜಾತರ್ ॥೯೬॥

**ಸರಳಾನುವಾದಃ**— ಇದು ಮಸೋಸ್ಮತ್ತರ ಹರಟೆ; ಕುಲಸ್ತ್ರೀಯರು ಆಡತಕ್ಕಮಾತಲ್ಲ. ನಿಮ್ಮಂಥವರು ವಂಶದ ನಾಶವನ್ನು ನೋಡದೆ, ಹಿತವನ್ನು ವಿಚಾರಿಸದೆ, ನಿಂದೆಗೂ ಪಾಪಕ್ಕೂ ಹೆದರದೆ, ಹೊಲಸು ಮಾತನ್ನು ಹೇಳರು. ಈ ಮಾತು (ನೀವು ಆಡುವ ಮಾತು) ನನ್ನ ಮನಸ್ಸನ್ನು ಪರೀಕ್ಷಿಸುವ ನಿಶ್ಚಯದ ನುಡಿಯು. ನನ್ನ ಒಡೆ (ಪತಿ)ಯನಾದ ಶ್ರೀರಾಮಚಂದ್ರನನ್ನು ಬಿಟ್ಟರೆ ಉಳಿದವರದು ಏತರ ಮಾತು! ಅವರೆಲ್ಲರೂ (ನನಗೆ ಒಡಹುಟ್ಟಿದವರು.

**ಶಬ್ದಾರ್ಥ**:— ಜಲ್ಪ, ಹರಟೆ; ನಿಮ್ಮೊಂದಿಗರ್, ನಿಮ್ಮಂಥವರು; ಪೊರಗು, ಬಿಟ್ಟು; ಮತ್+ಅಧೀಶಂ, ನನ್ನೊಡೆಯ.

॥ಕಂದ॥ ತನಗೆ ಪತಿವ್ರತಮಿಲ್ಲದ
ವನಿತೆ ಕುಲಸ್ತ್ರೀಯು ಭಿನ್ನಭಾಜನಮಿಂತ
ಪ್ಪನುಚಿತಮಂ ಹರಿವಂಶದ
ವನಿತೆಯರೊಳ್ ನುಡಿಯಲಕ್ಕುಮೇ ನಿಮ್ಮನ್ನರ್ ॥೯೭॥

**ಸರಳಾನುವಾದಃ**— ತನ್ನಲ್ಲಿ ಪತಿಭಕ್ತಿಯು ಇಲ್ಲದ ಸ್ತ್ರೀಯಳು ಕುಲಸ್ತ್ರೀಯಳೇ! ಆಕೆಯು ಒಡಕು ಗಡಿಗೆ (ಪಾತ್ರೆ)ಯಿದ್ದಂತೆ. ಇಂಥ ಅಯೋಗ್ಯವಾದ ಮಾತುಗಳನ್ನು ನಿಮ್ಮಂಥವರು, ಚಂದ್ರವಂಶದ ಸ್ತ್ರೀಯರಲ್ಲಿ (ಅಂದರೆ ತನ್ನಲ್ಲಿ—ಸೀತೆಯಲ್ಲಿ) ನುಡಿಯುವುದು ಯೋಗ್ಯವೇ?

**ಶಬ್ದಾರ್ಥ**: ಭಿನ್ನ, ಒಡಕು; ಭಾಜನ, ಪಾತ್ರೆ; ನಿಮ್ಮನ್ನರ್, ನಿಮ್ಮಂತಹರು; ಪತಿವ್ರತ, ಪತಿಭಕ್ತಿ.

**ವ್ಯಾಕರಣಃ—** "ತನಗೆ ಪತಿವ್ರತಮಿಲ್ಲದ" (ಸಪ್ತಮಿವಿಭಕ್ತಿಗೆ ಬದಲಾಗಿ ಚತುರ್ಥಿಬಂದಿದೆ-ವಿಭಕ್ತಿ ಪಲ್ಲಟ).

॥ವಚನ॥ ಎಂದು ಬಿಡೆನುಡಿವುದುಮಾಸಮಯದೊಳ್ (ಹೀಗೆಂದು ಬಿಡದೆ [ಸ್ಪಷ್ಟವಾಗಿ] ಮಾತನಾಡಲು, ಆ ಸಮಯದಲ್ಲಿ-)

॥ಮ. ಸ್ರಗ್ಧರಾ॥

ಜಡಿಯುತ್ತುಂ ಚಂದ್ರಹಾಸಾಸಿಯನೆಳಸೆ ತದಾಸ್ಥಾನಮುಂ ದಿವ್ಯಗಂಧಂ।
ಕುಡುಮಿಂಚಂ ಬೀರೆ ವಜ್ರಾಭರಣ ಕಿರಣಮಿಂದ್ರಂಗೆ ಸೌಂದರ್ಯದಿಂ ನೂರ್ಮಡಿ ಮೇಲೆಂಬನ್ನೆಗಂ ಜಾನಕಸುತಾಲೋಕನೋತ್ಕಂಠ ಚಿತ್ತಂ।
ನಡೆತಂದಂ ದಾನವೇಂದ್ರಂ ಸುರತರುಸುಮನೋಮಂಜರೀಕರ್ಣಪೂರಂ॥೯೮॥

**ಸರಳಾನುವಾದಃ—** ಸುವಾಸನೆಯು ಆ ಆಸ್ಥಾನವನ್ನು ವ್ಯಾಪಿಸಿರಲು, (ಅವನ ಮೈಮೇಲಿನ) ವಜ್ರದ ಆಭರಣಗಳ ಕಿರಣಗಳು ಕೋಲ್ಮಿಂಚನ್ನು ಸೂಸುತ್ತಿರಲು, ಸೌಂದರ್ಯದಲ್ಲಿ ಇಂದ್ರನಿಗಿಂತಲೂ ನೂರುಪಟ್ಟು ಹೆಚ್ಚಿನವನೆನ್ನುವಂತೆ, ಆ ರಾವಣನು ಸೀತಾದೇವಿಯನ್ನು ನೋಡುವ ಕುತೂಹಲ ಚಿತ್ತವುಳ್ಳವನಾಗಿಯೂ, ಕಲ್ಪವೃಕ್ಷದ ಪುಷ್ಪಗುಚ್ಛವನ್ನು ಕರ್ಣಕುಂಡಲಗಳನ್ನು ಧರಿಸಿದವನಾಗಿಯೂ, ಚಂದ್ರಹಾಸವೆಂಬ ಖಡ್ಗವನ್ನು ಝುಳಪಿಸುತ್ತ ಕೂಡಲೆ ನಡೆದುಬಂದನು.

**ಶಬ್ದಾರ್ಥಃ—** ಎಳಸು, ವ್ಯಾಪಿಸು; ಸುರತರು, ಕಲ್ಪವೃಕ್ಷ; ಸುಮನಸ್, ಪುಷ್ಪ; ಮಂಜರಿ, ಗೊಂಚಲು; ಕರ್ಣಪೂರ, ಕರ್ಣಾಭರಣ;

**ವ್ಯಾಕರಣಃ—** ಜನಕಸುತಾ+ಆಲೋಕನ+ಉತ್ಕಂಠ+ಚಿತ್ತಂ; ದಾನವೇಂದ್ರ (ಸ. ತ)

**ಅಲಂಕಾರಃ—** ಇಂದ್ರಂಗೆ ಸೌಂದರ್ಯದಿಂ ನೂರ್ಮಡಿ ಮೇಲೆಂಬನ್ನೆಗಂ— ಪ್ರತೀಪ—

॥ವಚನ॥ ಅಂತುಬಂದೊಡಂ (ಹೀಗೆ ಬಂದೊಡನೆಯೆ-)

||ಕಂದ|| ಪರಿನೀರೊಳಗಣ ನೆಳಲಂ
ತಿರೆ ತನ್ನಂನೋಡಿ ನಡುಗೆ ಜಾನಕಿ ದಶಕಂ
ಧರನಂ ಜಲೆನುತ್ತಂತಃ
ಪುರಮಂ ಕಣ್ಸನ್ನೆಯಿಂದಮಲ್ಲಿಂ ಕಳೆದಂ ||೯೯||

**ಸರಳಾನುವಾದಃ**— ಹರಿಯುವ ನೀರಿನಲ್ಲಿಯು ನೆಳಲಂತೆ ಇರುವ ತನ್ನನ್ನು (ರಾವಣನನ್ನು) ನೋಡಿ ಜಾನಕಿಯು ನಡುಗಲು (ಹೆದರಲು, ರಾವಣನು- "ಅಂಜಲ-ಬೇಡ" ಎನ್ನುತ್ತ ಅಂತಃಪುರದ ಸ್ತ್ರೀಯರನ್ನು ಕಣ್ಣಿನ ಸನ್ನೆಯಿಂದ ಅಲ್ಲಿಂದ ಕಳುಹಿಸಿದನು. (ಅಂದರೆ ಹರಿಯುವ ನೀರಿನಲ್ಲಿಯು ನೆರಳನ್ನು ನೋಡಿದಾಗ ಮನುಷ್ಯನು ಹೇಸಿಕೊಳ್ಳುವಂತೆ ಜಾನಕಿಯು ರಾವಣನನ್ನು ನೋಡಿ ಹೇಸಿಕೊಂಡು ನಡುಗಲು )

**ಶಬ್ದಾರ್ಥಃ**— ಪರಿ+ನೀರು, ಹರಿಯುವ ನೀರು; ಅಂಜು+ಅಲ್, ಅಂಜಬೇಡ;

**ಅಲಂಕಾರಃ**— ಉಪಮೆ

||ವಚನ|| ಅನಂತರಂ ಜಾನಕೀವದನ ವಿನ್ಯಸ್ತವಿಲೋಚನಂ (ಆ ಬಳಿಕ ಸೀತೆಯ ಮುಖದಲ್ಲಿ ಚೆಲ್ಲಿದ ದೃಷ್ಟಿಯುಳ್ಳವನಾಗಿ)

||ಉತ್ಪಲ|| ಆನೆಯುಮೇಲೆ ಬೆಳ್ಗೊಡೆಯ ತಣ್ಣೆಳಲೊಳ್ನೆಲಸಿರ್ದೆ/ಲೆಸರೋ
ಜಾನನೆ/ಪೆಂಡವಾಸದ/ವಿಲಾಸಿನಿಯರ್/ಬರೆ ನಿನ್ನ ಸುತ್ತಲುಂ
ಜಾನಕಿ/ ನೋಡ/ನಿನ್ನ ನಗೆಗಣ್ ಪರಿತುಷ್ಟಿಯನಪ್ಪುಕಯ್ಯೆಲಂ
ಕಾನಗರೀ ಬಹಿಃಪುರ /ಸಮೇರು ವಿಲಾಸ ವನಂಗಳೇಳುಮಂ ||೧೦೦||

**ಸರಳಾನುವಾದಃ**— ಆನೆಯುಮೇಲೆ ಶ್ವೇತಛತ್ರದ ತಂಪುನೆರಳಿನಲ್ಲಿ ಕುಳಿತುಕೊಂಡು, ಎಲೈ ಕಮಲಮುಖಿಯಾದ ಸೀತೆಯೇ? ರಾಣೀವಾಸದ ಯಾವತ್ತೂ ಸುಂದರಿಯರು ನಿನ್ನ ಸುತ್ತಲೂ ಬರುತ್ತಿರಲು, ನಿನ್ನ ಸುಂದರವಾದ ಕಣ್ಣುಗಳು ಸಂತೋಷವನ್ನು ಹೊಂದುವಂತೆ ಲಂಕಾಪಟ್ಟಣದ ಹೊರಭಾಗದಲ್ಲಿರುವ ರುದ್ರಾಕ್ಷಿಹೂವಿನ ಮರಗಳಿಂದ ಶೋಭೆಯನ್ನು ಉಂಟುಮಾಡುತ್ತಿರುವ ಏಳೂ ಉದ್ಯಾನಗಳನ್ನು ನೋಡು.

ಶಬ್ದಾರ್ಥ:— ನಮೇರು, ರುದ್ರಾಕ್ಷಿಹೂವಿನಮರ

ವ್ಯಾಕರಣ:— ಪೆಂಡಿರ+ವಾಸ, ಪೆಂಡವಾಸ (ಷ. ತ)

॥ಚಂಪಕ॥ ಕುಲನದಿಯಂ। ಕುಲ ದ್ರಿ ಶಿಖರಂಗಳ ದಿವ್ಯಸರೋವರಂಗಳಂ।
ಮಲಯ ಗಿರೀಂದ್ರ ಸಾನುವಲಮಂ। ಲವಣಾರ್ಣವ ವಜ್ರವೇದಿಕಾ
ವಿಲಸನಮಂ। ವಿಲೋಚನ ಪಥಾತಿಥಿಮಾಡು। ವಿಯದ್ವಿಲಾಸಿನೀ
ತಿಲಕಮೆನಿಪ್ಪ। ಪುಷ್ಪಕವಿಮಾನಮನೆನ್ನೊಡನೇರಿ ಜಾನಕೀ ॥೧೧॥

ಸರಳಾನುವಾದ:— ಸೀತೆಯೇ, ಆಕಾಶಸುಂಗರಿಯ ತಿಲಕದಂತೆ ಶೋಭಾಯಮಾನವಾಗಿರುವ ಪುಷ್ಪಕವಿಮಾನವನ್ನು ನನ್ನ ಸಂಗಡ ಏರಿ, ಕುಲನದಿಗಳನ್ನು ಕುಲಪರ್ವತಗಳ ಶಿಖರದಲ್ಲಿರುವ ದಿವ್ಯವಾದಸರೋವರಗಳನ್ನೂ ಶ್ರೇಷ್ಠವಾದ ಮಲಯಪರ್ವತದ ತಪ್ಪಲುಪ್ರದೇಶದಲ್ಲಿರುವ ತೋಟವನ್ನೂ, ಲವಣಸಮುದ್ರದಲ್ಲಿರುವ ಶೋಭಾಯಮಾನವಾದ ವಜ್ರದ ಗದ್ದುಗೆಗಳನ್ನೂ ನಿನ್ನ ದೃಷ್ಟಿಗೆ ಬರಮಾಡಿಕೊಳ್ಳು.

ಶಬ್ದಾರ್ಥ:— ವಿಯತ್+ವಿಲಾಸಿನೀ+ತಿಲಕ+ಎನಿಪ್ಪ, ಆಕಾಶವೆಂಬ ಸುಂದರಿಯಹಣೆಯಮೇಲಿನತಿಲಕದಂತೆಇರುವ; ಸಾನು, ತಪ್ಪಲು;

ಅಲಂಕಾರ: ಉತ್ಪ್ರೇಕ್ಷೆ

ಟಿಪ್ಪಣಿ—ಕುಲನದಿ: (೧) ಶೋಣ (೨) ಸಿಂಧು (೩) ಹಿರಣ್ಯವಾಹ (೪) ಕೋಕ (೫) ಘರ್ಘರ (೬) ಲೋಹಿತ (೭) ಶತದ್ರು

ಕುಲಾದ್ರಿಗಳು:— (೧) ಮಹೇಂದ್ರ (೨) ಮಲಯ (೩) ಸಹ್ಯ (೪) ಶಕ್ತಿಮಾನ (೫) ಗಂಧಮಾದನ (೬) ವಿಂಧ್ಯ (೭) ಪಾರಿಯಾತ್ರ....... ಆದರೆ ಜೈನಸಂಪದ್ಧತಿಯಂತೆ ಕುಲಾದ್ರಿಗಳು ೬ ಇದ್ದು ಬೇರೆ ಹೆಸರುಗಳು ಕೊಡಲಾಗಿವೆ. (೧) ಹಿಮವಂತ (೨) ಮಹಾಹಿಮವಂತ (೩) ನಿಷಧ (೪) ನೀಲ (೫) ರುಕ್ಮಿ (೬) ಶಿಖರಿ— ಇವುಗಳ ಮೇಲೆ ಸರೋವರಗಳು ಇವೆ.

ಸರೋವರಗಳು:— (೧) ಪದ್ಮ (೨) ಮಹಾಪದ್ಮ (೩) ತಿಗಂಛ (೪) ಕೇಸರಿ (೫) ಪುಂಡರೀಕ (೬) ಮಹಾಪುಂಡರೀಕ

॥ಶಾರ್ದೂಲ॥
ಎನ್ನೊಳ್ ಪೋರ್ದುಡಿದಿಂದ್ರ ಸಿಂಧುರದ ಕೋಡಿಂದಾದ ಪಲ್ಯಂಕದೊಳ್
ಮುನ್ನಂ ಪದ್ಮಜನಂಚೆಯಂ ತರಿದು ತುಪ್ಪುಳ್ಗೊಂಡು ದಿಕ್ಪಾಲಕರ್
ಜೆನ್ನಿತ್ತಿಕ್ಕಿದ ಚೀಲದಿಂ ಸಮೆದ ಕೇಳೀ ತಲ್ಪದೊಳ್ ನಿದ್ರೆಗೆಯ್
ನಿನ್ನಂ ನಿದ್ರೆಯಿನೆಳ್ಚುವನ್ನಮಮರೀ ಮಾಂಗಲ್ಯಗೀತ ಸ್ವನಂ ॥೧೦೨॥

**ಸರಳಾನುವಾದ:—** ನನ್ನ ಸಂಗಡ ಹೋರಾಡಿ ಮುರಿದ ಐರಾವತದ ಕೋರೆಗಳಿಂದ ತಯಾರಿಸಿದ ಮಂಚದಮೇಲೆ ಮೊದಲು ಬ್ರಹ್ಮನ ಹಂಸವನ್ನು ಸಂಹರಿಸಿ ಅದರ ತುಪ್ಪಳವನ್ನು ತೆಗೆದುಕೊಂಡು ದಿಕ್ಪಾಲಕರು ಸೋತು ಬಿಟ್ಟುಕೊಟ್ಟ ಬಟ್ಟೆಯಿಂದ ಸಿದ್ಧಪಡಿಸಿದ ಕ್ರೀಡಾಶಯ್ಯೆಯಲ್ಲಿ ದೇವತಾ ಸ್ತ್ರೀಯರ ಮಂಗಲಕರವಾದ ಸಂಗೀತದ ಧ್ವನಿಯು ನಿನ್ನನ್ನು ನಿದ್ರೆಯಿಂದ ಎಬ್ಬಿಸುವವರೆಗೂ ಮಲಗು.

**ಶಬ್ದಾರ್ಥ:** ಪೋರ್, ಹೋರಾಡು; ಉಡಿದ, ಮುರಿದ; ಸಿಂಧು, ಐರಾವತ; ಪಲ್ಯಂಕ(ಪ್ಥ) ಪಲ್ಲಂಗ; ಸಮೆದ, ಸಿದ್ಧಪಡಿಸಿದ; ಅಮರೀ, ದೇವತೆಗಳ; ಜೆನ್ನಿತ್ತು+ಇಕ್ಕಿದ, ಸೋತುಬಿಟ್ಟುಕೊಟ್ಟ; ಚೀಲ (ಚೀರ) ಬಟ್ಟೆ; ಕ್ರೀಡಾ(ಪ್ಥ) ಕೇಳಿ; **ಅಲಂಕಾರ:—** ಅತ್ಯುಕ್ತಿ.

॥ಮತ್ತೇಭ॥ ಅಸಿರತ್ನಂ ಚಕ್ರರತ್ನಂ ನವನಿಧಿಸಲವುಂ ವಿದ್ಯೆಕಯ್ಸಾರ್ದುವುಳ್ಕಿಂ
ಜಿಸಿದೆಂ ದಿಕ್ಪಾಲರಂ ಕಟ್ಟಿದೆನುರದಿದಿರಾದಿಂದ್ರನಂ ಲೀಲೆಯಿಂ ಚಾ
ಳಿಸಿದೆಂ ಕೈಲಾಸಮಂ ದಕ್ಷಿಣಭರತ ಧರಾಚಕ್ರಮಂ ಚಕ್ರದಿಂ ಸಾ
ಧಿಸಿದೆಂ ಪೌಲಸ್ತ್ಯನಂ ಮೀರುವರೆ ಸಮರದೊಳ್ ಮಾನವರ್ ಮೀನನೇತ್ರೇ ॥೧೦೩॥

**ಸರಳಾನುವಾದ:—** ಶ್ರೇಷ್ಟವಾದ (ಚಂದ್ರಹಾಸ) ಖಡ್ಗವು (ಶ್ರೇಷ್ಟವಾದ ಚಕ್ರವು, ಕುಬೇರನ) ಒಂಬತ್ತು ಪ್ರಕಾರದ ಐಶ್ವರ್ಯವು, ಹಲವು ವಿದ್ಯೆಗಳು, ನನ್ನ ಕೈವಶವಾದವು. ದಿಕ್ಪಾಲರ ಮನಸ್ಸಿಗೆ ಭಯವನ್ನುಂಟು ಮಾಡಿದೆನು, ಇದಿರಾದ ಇಂದ್ರನನ್ನು ಬಿಡದೆ ಕಟ್ಟಿಹಾಕಿದೆನು. ಸಹಜವಾಗಿ ಕೈಲಾಸಪರ್ವತವನ್ನು ಅಲ್ಲಾಡಿಸಿದೆ (ತೂರಾಡಿದೆ)ನು. ದಕ್ಷಿಣಭರತ ಭೂಮಂಡಲವನ್ನು, ನನ್ನ ಚಕ್ರಾಯುಧದಿಂದ ದೊರಕಿಸಿದೆನು. ಮೀನದಂತೆ ಕಣ್ಣುಳ್ಳ ಸೀತೆಯೇ? ಮನುಷ್ಯರು, ರಾವಣನನ್ನು ಯುದ್ಧದಲ್ಲಿ ಮೀರುವರೇ?

ಶಬ್ದಾರ್ಥ:– ಉಳ್+ಅಂಜಿಸು (ಒಳಗೆ+ಅಂಜಿಸು) ಮನಸ್ಸಿಗೆ ಭಯ ವನ್ನುಂಟುಮಾಡು; ಚಾಳಿಸು, ಅಲ್ಲಾಡಿಸು (ತೂರಾಡು); ಸಾಧಿಸಿದೆಂ, ಗೆದ್ದಿಸು (ದೊರಕಿಸಿದೆನು); ಪೀನನೇತ್ರೆ–ಲುಪ್ತೋಪಮೆ, ಅಂತೆ ಎಂಬ ವಾಚಕವೂ, ಚಂಚಲ ಎಂಬ ಸಾಧಾರಣಧರ್ಮವೂ ಲೋಪವಾಗಿವೆ.

[ಟಿಪ್ಪಣಿ:— ನವನಿಧಿಗಳಾವವು?— ೧ ಪದ್ಮ ೨ ಮಹಾಪದ್ಮ ೩ ಶಂಖ ೪ ನೀಲ ೫ ಮಕರ ೬ ಕಚ್ಛಪ ೭ ಮುಕುಂದ ೮ ನಂದ ಹಾಗೂ, ೯ ಖರ್ವ— ಈ ಒಂಭತ್ತು ಕುಬೇರನ ನವನಿಧಿಗಳು ರಾವಣ ನಿಗೆ ವಶವಾಗಿದ್ದವು.] ಎಂದು,

॥ಕಂದ॥ ಅನುನಯಶತಂಗಳಂ ನುಡಿ
ದನುವಶೆ ಮಾಡಲ್ ವಿಯಚ್ಚರೇಂದ್ರನುಮೇನಾ
ರ್ತನೆ ಜನಕಜೆಯಂ ಗಗನಮ
ನನುಲೇಪಂಗೆಯ್ದೊಡಲ್ಲಿ ಮಸಿ ಪತ್ತುಗುಮೇ ॥೧೦೪॥

ಸರಳಾನುವಾದ:— ನೂರು ನಮ್ರತೆಯ ಮಾತುಗಳನ್ನಾಡಿ, ಸೀತೆ ಯನ್ನು ವಶಪಡಿಕೊಳ್ಳಲು ರಾವಣನೇನು ಸಮರ್ಥನಾದನೇ? ಆಕಾ ಶಕ್ಕೆ ಮಸಿಯನ್ನು ಹಚ್ಚಿದರೆ, ಅದು ಅಲ್ಲಿ ಹತ್ತುವುದೇ?

ಶಬ್ದಾರ್ಥ:— ಏಂ+ಆರ್ತನೇ, ಸಮರ್ಥನಾದನೇ?

ಅಲಂಕಾರ:— ದೃಷ್ಟಾಂತ (ಸಂಬಂಧವುಳ್ಳ ಎರಡು ಮಾತುಗಳು ಒಂದರ ಪ್ರತಿಬಿಂಬ ಮತ್ತೊಂದು ಎನ್ನುವಂತಿರಬೇಕು.)

॥ವಚನ॥ ಅಂತಾದುರಾತ್ಮನ ದುರುಕ್ತಿಗೆ ಜನಕಸುತೆ ಕಡುಮುಳಿದು ಮುನಿಸಂ ಮೊಗಕ್ಕೆ ತಾರದೆ (ಹಾಗೆ ಆ ದುಷ್ಟನ ಕೆಟ್ಟ ಮಾತುಗಳಿಗೆ (ಸೀತಾ ದೇವಿಯು) ಬಹಳ ಸಿಟ್ಟಿಗೆದ್ದು, ಆ ಸಿಟ್ಟನ್ನು ಮುಖದಲ್ಲಿ ತೋರಿಸದೆ—

॥ಮತ್ತೇಭ॥ ನುಡಿಯಲ್ ತಕ್ಕುದೆ ಪಾಳಿದಪ್ಪಿ ಪಳಿಗಂ ಪಾಪಕ್ಕಮುಳ್ಳಳ್ಕದೀ
ನುಡಿಯಂ ಛೀ ಪರದಾರಮನ್ಯಶಯನಸ್ಥಾನಂ ಪೆರರ್ ಮಿಂದ ನೀರ್
ಮುಡಿದುತ್ಪಲ್ಲ ಕದಂಬಕಂ ತೊಡೆದ ಕಾಶ್ಮೀರಾಂಗರಾಗಾದಿಕಂ
ಮಡಗೂಳ್ ಬೀಳುಡೆ ಬಾಯತಂಬುಲಮಿವಸ್ಪೃಶ್ಯಂಗಳೇನಲ್ಲಮೇ ॥೧೦೫॥

ಸರಳಾನುವಾದ:—ನಿಂದೆಗೂ, ಪಾಪಕ್ಕೂ, ಎಳ್ಳಷ್ಟಾದರೂ ಹೆದರದೆ, ಕ್ರಮತಪ್ಪಿ ಇಂಥ ಮಾತುಗಳನ್ನು ಆಡುವುದು ಯೋಗ್ಯವೇ? ಥೂ! ಎರಡನೆಯವರ ಹೆಂಡತಿಯು, ಅನ್ಯರು ಮಲಗುವ ಸ್ಥಳವು, ಪರರು ಸ್ನಾನಮಾಡಿದ ನೀರು, ಬೇರೊಬ್ಬರು ಮುಡಿದ ಅರಳಿದ ಹೂ, ಲೇಪಿಸಿಕೊಂಡ ಕುಂಕುಮಕೇಸರ ಸುಗಂಧದ್ರವ್ಯಗಳೇ ಮೊದಲಾದವುಗಳು— ಎಂಜಲು ಆಹಾರವು, ಮೈಲಿಗೆಯ ವಸ್ತ್ರಗಳು, ಬಾಯಲ್ಲಿಯ ತಂಬುಲವು, ಇವೆಲ್ಲವೂ ಮುಟ್ಟಲು, ಅಯೋಗ್ಯವಾದವುಗಳು.

ಶಬ್ದಾರ್ಥ:— ಉಳ್ಳಳ್ಕು, ಒಳಗೆ+ಅಳ್ಕು (ಮನಸ್ಸಿನಲ್ಲಿ ಅಳುಕು); ಪರದಾರಂ, ಪರರಹೆಂಡತಿ; ಅಂಗರಾಗ, ಮೈಗೆಲೇಪಿಸಿಕೊಳ್ಳುವ ಸುಗಂಧ ದ್ರವ್ಯ; ಮಡಗೂಳ್, ಎಂಜಲುಕೂಳು; ಅಸ್ಪೃಶ್ಯ, ಮುಟ್ಟಲಿಕ್ಕೆ ಬಾರದವು; ಮಡ+ಕೂಳ್; ಬೀಳ್+ಉಡೆ.

ಅಲಂಕಾರ:— ದೀಪಕ-ಪ್ರಸ್ತುತ-ಪರದಾರಂ ಅಸ್ಪೃಶ್ಯಂ ಏಂ ಅಲ್ಲವೇ? ಅಪ್ರಸ್ತುತ, ಅನ್ಯಶಯನಸ್ಥಾನಂ... ಇತ್ಯಾದಿ.

||ಕಂದ|| ಗುಣಹಾನಿಯಿಂದಧೋಗತಿ
ಗುಣದಿಂ ಸ್ವರ್ಗಾಪವರ್ಗ ಸುಖಮಕ್ಕುಮೆನಲ್
ಗುಣಹೀನನ ಸಿರಿಯಿಂದಂ
ಗುಣಿಗಳ ಬಡತನಮೆ ನಾಡೆಯುಂ ಲೇಸಲ್ತೇ ||೧೦೬||

ಸರಳಾನುವಾದ:—ಸದ್ಗುಣವು ಇಲ್ಲದಂತಾಗುವುದರಿಂದ ನರಕವೂ ಸದ್ಗುಣದಿಂದ ಸ್ವರ್ಗಸುಖವೂ ಮತ್ತು ಮೋಕ್ಷಸುಖವೂ ಆಗುವದು ಎಂದಿರಲು ಸದ್ಗುಣವಿಲ್ಲದವನ ಐಶ್ವರ್ಯಕ್ಕಿಂತ ಸದ್ಗುಣವಂತನ ಬಡತನವೇ ಹೆಚ್ಚಿಗೆ ಒಳಿತಲ್ಲವೇ! ಶಬ್ದಾರ್ಥ:— ಅಪವರ್ಗ, ನಿರ್ವಾಣ (ಮೋಕ್ಷ)

ಅಲಂಕಾರ:— ಅರ್ಥಾಂತರನ್ಯಾಸ.

||ಮತ್ತೇಭ|| ಅದುನೀರಾಗಿರೆ ತಾಯ್ಮಳಲ್ಪರೆಗಮೀ ವಾರಾಶಿಯಂ ತುಳ್ಕಲುಂ
ತಿರುಕಲ್ಗಾಡಲುಮೀ ತ್ರಿಕೂಟಗಿರಿಯಂ ತತ್ಸೂರ್ಯಹಾಸಾಸಿಯಂ
ದಿರಿದಳ್ಕಾಡಿಸಲುಂ ದ್ವಿಷನ್ನೃಪರನೇಕಾಕ್ಷೌಹಿಣೀ ಸೇನೆಯಂ
ನೆರೆವಂ ದೋರ್ಬಲ ದೃಪ್ತನಪ್ರತಿಹತಂ ರಾಮಾನುಜಂ ಲಕ್ಷ್ಮಣಂ ||೧೦೭||

**ಸರಳಾನುವಾದಃ**— ತೀರ ತಳದಲ್ಲಿನ ಉಸುಬಿನ ವರೆಗೂ, ನೀರು ಬತ್ತಿರಲು ಈ ಸಮುದ್ರವನ್ನು ತುಂಬಿತುಳುಕಿಸಲಿಕ್ಕೂ ಈ ತ್ರಿಕೂಟ ಪರ್ವತವನ್ನು ಆಣೆಕಲ್ಲಾಡುವಂತೆ ಆಡಲಿಕ್ಕೂ, ವೈರಿ ಅರಸರ ಅನೇಕ ಅಕ್ಷೌಹಿಣೀ ಸೇನೆಯನ್ನು ತನ್ನ ಸೂರ್ಯಹಾಸ ಖಡ್ಗದಿಂದ ಇರಿದು ನಾಶ ಮಾಡಲಿಕ್ಕೂ, ಬಾಹುಬಲದಿಂದ ಪುಷ್ಟನಾದವನೂ, ಸೋಲಸ್ನರಿಯದವನೂ, ರಾಮಚಂದ್ರನ ತಮ್ಮನೂ ಆದ ಲಕ್ಷ್ಮಣನು ಬಲ್ಲಿದನಾಗಿರುವನು.

**ಶಬ್ದಾರ್ಥಃ**— ಅರುನೀರು, ಬತ್ತಿಹೋಗು; ತಾಯ್ಮಳಲ್, ತಳದಲ್ಲಿನ ಉಸುಬು; ತಿರಿಕಲ್ಲು+ಆಡು, (ತೂರಾಡು) ಆಣೆಕಲ್ಲು ಆಡು; ದ್ವಿಷತ್ (ವೈರಿ)+ನೃಪರ್; ಅಳ್ಕಾಡಿಸು, ನಾಶಮಾಡು; ನೆರೆ, ಸಮರ್ಥನಾಗು; ನೃಪ್ತ, ಪುಷ್ಟನಾದ; ಅಪ್ರತಿಹತ, ಸೋಲಿಸಲು ಅಸಾಧ್ಯನಾದ.

**ಅಲಂಕಾರಃ**— ಅತ್ಯುಕ್ತಿ [ಟಿಪ್ಪಣಿಃ-. ಅಕ್ಷೌಹಿಣಿಸೈನ್ಯ-೨೧,೮೭೦ ಆನೆಗಳೂ, ೨೧,೮೭೦ ರಥಗಳೂ, ೬೫,೬೧೦ ಕುದುರೆಗಳೂ, ೧,೦೯,೩೫೦ ಕಾಲಾಳುಗಳೂ ಕೂಡಿರುವವು.]

||ಉತ್ಪಲ|| ಆಹವದೋಹಳಂ ಮಸುಳೆ ಮತ್ಪತಿಯಿಂದಮಗಲ್ಚಿ ತಂದೆ ವೈ
ದೇಹಿಯನೆನ್ನನುಕ್ಕೆವದಿನಲ್ಲಿದೊಡೇಂ ದಶಕಂಠ ರಾಮ ಬಾ
ಣಾಹತಿಯಿಂ ನಭಂಬರೆಗಮುಂಬರಿವಿಟ್ಟು ಮಡಲ್ತ ವಿದ್ವಿಷ
ಲ್ಲೋಹಿತದಿಂದಕಾಂಡ ಲಯಕಾಲದ ಸಂಜೆ ಮುಗಿಲ್ಗಳಾಗವೇ ||೧೮೮||

**ಸರಳಾನುವಾದಃ**—(ನಿನ್ನಲ್ಲಿ) ಯುದ್ಧದ ಬಯಕೆ ಇಲ್ಲದಂತಾಗಲು, ನನ್ನ ಗಂಡನಿಂದ ಅಗಲಿಸಿ, ಮೋಸದಿಂದ ನನ್ನನ್ನು ತೆಗೆದುಕೊಂಡು ಬಂದೆ, ಅಲ್ಲದಿದ್ದರೆ ರಾವಣಾ? ರಾಮಚಂದ್ರನ ಬಾಣದ ಹೊಡೆತದಿಂದ ಆಕಾಶದ ವರೆಗೂ, ನೀರಿನಂತೆ ಧಾರಾಕಾರವಾಗಿ ಚಿಮ್ಮಿ ಹಬ್ಬಿದ ವೈರಿಯ ರಕ್ತದಿಂದ, ಅಕಸ್ಮಾತ್ತಾಗಿ ಒದಗಿದ, ಪ್ರಳಯಕಾಲದ ಕೆಂಪು (ಸಾಯಂಕಾಲದ) ಮೋಡಗಳು ಆಗುವುದಿಲ್ಲವೇ?

**ಶಬ್ದಾರ್ಥಃ**— ದೋಹಳ, ಬಯಕೆ; ಉಕ್ಕೆವ, ಮೋಸ; ಅಂಬು, ನೀರು; ಇರಿವಿಡು, ಧಾರಾಕಾರವಾಗಿ ಹರಿಬಿಡು; ಮಡಲ್, ಹಬ್ಬು;

ಲೋಹಿತ, ರಕ್ತ; ಅಕಾಂಡ, ಅಸಮಯ (ಕಾಲವಲ್ಲದ ಕಾಲ); ವಿದ್ರುಮ + ಶೋಹಿತ: ವಿದ್ರುಮಲ್ಲೋಹಿತ. ಅಲಂಕಾರ;-ಅತ್ಯುಕ್ತಿ.

||ವಚನ|| ಎಂದು ಮರುಮಾತಿಂಗೆಡೆಯಿಲ್ಲದಂತು (ಎಂದು ಪ್ರತ್ಯುತ್ತರಕ್ಕೆ ಅವಕಾಶವಿಲ್ಲದ ಹಾಗೆ)—

||ಕಂದ|| ಬಿಡೆಮುಡಿಯೆ ಸೀತೆ ಮುಳಿಸಿನ
ಪಡೆಮಾತಂತಿರ್ಕೆ ರಾವಣಂಗೊಲವು ಪದಿ
ಮ್ರ್ಮಡಿಸಿತ್ತು ಪ್ರಾಪ್ತಿರಸಂ
ಬಡೆಗುಂ ವೈಷಯಿಕ ಸುಖಮೊಳಿದು ವಿಸ್ಮಯಮೇ ||೧೦೯||

**ಸರಳಾನುವಾದ:**—ಸೀತೆಯು ಸ್ಪಷ್ಟವಾಗಿ ಮಾತನಾಡಲು, ಸಿಟ್ಟಿನ ಪ್ರತಿಮಾತು (ಪ್ರತ್ಯುತ್ತರವು) ಒತ್ತಟ್ಟಿಗಿರಲಿ; ರಾವಣನಿಗೆ ಆಕೆಯಮೇಲಿನ ಸ್ನೇಹವು ಹತ್ತುಪಟ್ಟು ಹೆಚ್ಚಾಯಿತು. ದೊರಕದೆ ಇರುವ ಭಾವವು ಆಸೆಯನ್ನು ಹೆಚ್ಚಿಸುವುದು. ಇಂದ್ರಿಯ ಸುಖದ ವಿಷಯದಲ್ಲಿ ಇದೇನು ಆಶ್ಚರ್ಯವೇ !.

**ಶಬ್ದಾರ್ಥ:**— ಪದಿರ್+ಮಡಿಸು (ಪದಿ, ಪದಿರ್, ಪದಿನ್ - ಹತ್ತು) ಹತ್ತುಪಟ್ಟಾಗು; ಅ+ಪ್ರಾಪ್ತಿ, ದೊರಕದಿರುವ ಭಾವ; ರಸಂಪಡೆ, ಭಾವ ಪ್ರೇರಕವಾಗು. **ಅಲಂಕಾರ:**— ಅರ್ಥಾಂತರನ್ಯಾಸ.

ಕಂದ|| ನಯದಿಂದಮೀ ಸರೋರುಹ
ನಯನೆಯನಳವಡಿಸಲಾರ್ತೆನಿಲ್ಲಳವಡಿಸೆಂ
ಭಯದಿಂದಮೆಂದು ವಿದ್ಯಾ
ದಯಿತಂ ಪಡೆದಂ ವಿಕುರ್ವಣಾ ವೈಭವಮಂ ||೧೧೦||

**ಸರಳಾನುವಾದ:**— "ಕಮಲದಂತೆ ಕಂಣುಳ್ಳ ಈಕೆಯನ್ನು ವಿನಯದಿಂದ ವಶಮಾಡಿಕೊಳ್ಳಲು ಸಾಧ್ಯವಿಲ್ಲ. ಈಕೆಯನ್ನು ಹೆದರಿಸಿ ವಶಮಾಡಿಕೊಳ್ಳುವೆನು" ಎಂದು ವಿದ್ಯೆಯವಲ್ಲಭನಾದ ರಾವಣನು, ಭೀಕರ ಆಕಾರಗಳನ್ನು ತಾಳಿದನು. **ಶಬ್ದಾರ್ಥ:** – ಆರ್ತೆನಿಲ್ಲ, ಸಮರ್ಥನಿಲ್ಲ; ದಯಿತಂ, ಗಂಡ (ವಲ್ಲಭ). **ಅಲಂಕಾರ:**— (ಸರೋರುಹನಯನೆ) ಲುಪ್ತೋಪಮೆ.

||ವಚನ|| ಆ ಸಮಯದೊಳ್ ನೇಸರ ಪಡಲೊಡಂ (ಆ ಸಮಯದಲ್ಲಿ ಸೂರ್ಯನು ಮುಳುಗಲು),

||ಉತ್ಪಲ|| ತೋರಪೆಣಂಗಳಂ ತಳೆದು ಭೂತಗಣಂ ಕುಣಿದಾಡುವಂತಿರಲ್
ಕ್ರೂರಮೃಗಂಗಳವ್ವಳಿಸಿ ಗರ್ಜಿಸಿ ನುಂಗಲೊಡರ್ಚುವಂತು ಘೋ
ರ್ಭೋರೆನೆ ರಕ್ತವೃಷ್ಟಿ ಕರೆವಂತು ಸಿಡಿಲ್ ಪೊಡೆವಂತು ಸುತ್ತಲುಂ
ವಾರಿಧಿ ಮೇರೆದಪ್ಪಿ ಕವಿವಂತು ಬಿಗುರ್ವಿಸಿದಂದಶಾನನಂ ||೧೧೧||

**ಸರಳಾನುವಾದ:** ದೊಡ್ಡ ದೊಡ್ಡ ಹೆಣಗಳನ್ನು ಧರಿಸಿ, ಭೂತಗಳ ಸಮೂಹವು ಕುಣಿದಾಡುವ ಹಾಗೆ, ಕ್ರೂರಮೃಗಗಳು ಗರ್ಜಿಸುತ್ತ ಮೇಲೆಬಿದ್ದು ನುಂಗಲು ಯತ್ನಿಸುವಂತೆ, ಭೀಕರ ಸಪ್ಪಳವನ್ನುಂಟುಮಾಡುತ್ತ ರಕ್ತದ ಮಳೆಯು ಸುರಿಯುತ್ತಿರುವ ಹಾಗೆ, ಸಿಡಿಲುಹೊಡೆಯುವಂತೆ, ಸಮುದ್ರವು ತನ್ನ ಸೀಮೆಯನ್ನು ದಾಟಿ, ಮುತ್ತುವಂತೆ, ರಾವಣನು ಸೀತೆಯನ್ನು ಹೆದರಿಸಿದನು.

**ಶಬ್ದಾರ್ಥ:** ತೋರ, ದೊಡ್ಡ; ತಳೆದು, ಧರಿಸಿ; ಅವ್ವಳಿಸು, ಧುಮುಕು; ಬಿಗುರ್ವಿಸು, ಬೆದರಿಸು; (ಭಯಾನಕರಸವನ್ನು ಸೂಚಿಸುವಂತಹ ನಾದವುಳ್ಳ ಪದಪ್ರಯೋಗ).

**ವ್ಯಾಕರಣ:**— ತೋರ ಹೆಣ, ತೋರಪೆಣ (ವಿ. ಪೂ. ಪ. ಕ. ;

**ಅಲಂಕಾರ:** – ಉಪಮೆ.

||ಕಂದ|| ಬಗೆಯೊಳ್ ಜೈನಪದಂ ನಾ
ಲಗೆಯೊಳ್ ಪಂಚಪದಮುಗಲದಿರೆ ರಕ್ಷದ ದೀ
ಪಿಗೆ ಪರುಷ ಪವನಹತಿಯುಂ
ಬಗೆಯದವೊಲ್ ಸೀತೆ ಬಗೆದಳಿಲ್ಲುಪಹತಿಯುಂ ||೧೧೨||

**ಸರಳಾನುವಾದ:**— ಮನಸ್ಸಿನಲ್ಲಿ ಜಿನನ ಪಾದಗಳ ಸ್ತುತಿಯೂ, ನಾಲಗೆಯಲ್ಲಿ ಪಂಚಪರಮೇಷ್ಠಿಗಳ ಸ್ತುತಿಯೂ, ಒಂದೇಸಮನೆ ನಡೆದಿರಲು, ರತ್ನದ ಪ್ರಕಾಶವು, ಬಿರುಗಾಳಿಯ ಹೊಡತವನ್ನು ಲೆಕ್ಕಿಸದಂತೆ ಸೀತೆಯು ಆ ಕೇಡನ್ನು ಲೆಕ್ಕಿಸಲಿಲ್ಲ.

ಶಬ್ದಾರ್ಥ:— ಉಪಪತಿ, ಕೇಡು; ಪರುಷ, ಬಿರುಸು; ಪವನಗಾಳಿ; ರತ್ನ (ದ್ಭ) ರನ್ನ. ವ್ಯಾಕರಣ:- ಪರುಷವಾದ ಪವನ ವಿ. ಪೂ. ಪ. ಕ.)

ಅಲಂಕಾರ:— ಉಪಮೆ.

॥ವಚನ॥ ಅನ್ನೆಗಮಿತ್ತ ಕನ್ನೆಮಾಡದ ಮರೆಯೊಳಿರ್ದು ಸೀತೆ ಶೋಕಂಗೆಯ್ವ ಪರಮಂ ವಿಭೀಷಣಂ ಕೇಳ್ದು ಪುರುಷ ವಿರಹದಿನತಿ ಪ್ರಲಾಪಂಗೆಯ್ವ ನಾರೆ ಬುದುವಾಮಾತಂಕೇಳ್ದು ಸೀತೆ (ಅಷ್ಟರಲ್ಲಿ ಇತ್ತಕಡೆಗೆ ಅಂತ:ಪುರದ ಉಪ್ಪರಿಗೆಯ ಮರೆಯಲ್ಲಿ ನಿಂತು, ಸೀತೆಯು ಶೋಕಿಸುವ ದನಿಯನ್ನು ವಿಭೀಷಣನು ಕೇಳಿ, "ಪತಿಯ ಅಗಲಿಕೆಯಿಂದ ಬಹಳವಾಗಿ ದು:ಖಿಸುವ ವರಾರು?" ಎನ್ನಲು, ಆ ಮಾತುಗಳನ್ನು ಕೇಳಿ ಸೀತೆಯು —)

॥ಚಂಪಕ॥ ತನಗಿದಿರಾದ ಮಾರ್ಪಳಮನೊರ್ವನೆ ಲಕ್ಷ್ಮಣನಾಂತು ಕಾದೆ ತ
ಮ್ಮನ ರಣಮಂ ನಿರೀಕ್ಷಿಸಲಪೇಕ್ಷಿಸಿಪೋಗೆ ಪರೋಕ್ಷದೊಳ್ ದಶಾ
ನನನೆಳೆತಂದನಾನ್ ಜನಕನಂದನೆಯೆನ್ ರಘುವೀರನಪ್ಪ ರಾ
ಮನವಧುಸೀತೆಯೆನ್ ಪತಿವಿಯೋಗಶಾನು ಸುಡಲ್ಕೆಬೆಂದಪೆಂ ॥ ೧೩॥

ಸರಳ-ಸುವಾದ;— ತನಗೆ ಇದಿರಾದ (ವೈರಿಗಳ ಮಹಾಸೈನ್ಯವನ್ನು, ಲಕ್ಷ್ಮಣನೊಬ್ಬನೇ ಇದಿರಿಸಿ, ಯುದ್ಧಮಾಡುತ್ತಿರಲು, ತಮ್ಮನ ಯುದ್ಧ ಚಮತ್ಕೃತಿಯನ್ನು ನೋಡಬೇಕೆಂದು ಇಚ್ಛಿಸಿ, ರಾಮಚಂದ್ರನು ಹೋಗಲು, ಆತನು ಇಲ್ಲದ ಸಮಯದಲ್ಲಿ, ರಾವಣನು ನನ್ನನ್ನು ಎಳೆದು ತಂದನು. ನಾನು ಜನಕರಾಯನ ಮಗಳು (ಇದ್ದೇನೆ. ರಘುಶ್ರೇಷ್ಠನಾದ ರಾಮಚಂದ್ರನ ಹೆಂಡತಿ ಸೀತೆಯು (ಇದ್ದೇನೆ. ಗಂಡನ ಅಗಲುವಿಕೆಯ ಬೆಂಕಿಯು ಸುಡಲು ಕಷ್ಟಬಡುತ್ತಿರುವೆನು.

ವ್ಯಾಕರಣ:— ಆನ್, ನಾನು; ಎನ್; ಇರುತ್ತೇನೆ (ಇದ್ದೇನೆ- ಎಂಬುದರ ಹಳಗನ್ನಡ ರೂಪ.

॥ವಚನ॥ ಎನೆ ವಿಭೀಷಣಂ ನೈಮಿತ್ತಿಕಾದೇಶಮಂ ನೆನೆದು ಭಯಚಕಿತಚಿತ್ತನಾಗಿ (ಹೀಗೆನ್ನುತ್ತಿರಲು, ವಿಭೀಷಣನು ನೈಮಿತ್ತಿಕರ (ಬುದ್ಧಿಸಾಗರಜ್ಯೋತಿಷಿಗಳ) ಭವಿಷ್ಯವನ್ನು ಸ್ಮರಿಸಿ, ಭಯದಿಂದ ಕೂಡಿದ ಮನಸ್ಸುಳ್ಳವನಾಗಿ).

ಶಬ್ದಾರ್ಥ— ನೈಮಿತ್ತಿಕ, ನಿಮಿತ್ತವನ್ನು ಹೇಳತಕ್ಕವರು (ಶಕುನಿಗರು); ಆದೇಶ. ಭವಿಷ್ಯ.

||ಕಂದ|| ಪರ ಪರಸ್ತ್ರೀತೆಗಳಿಪಂ
ತರೆ ಪುರುಷಂ ಪುರುಷಥರ್ಮಮಳಿಗುಂ
ಧರೆ ದುರ್ಗತಿಸಮನಿಸುಗುಂ
ಪರಿಹರಿಸುವುದಾರುಮದರಿನೀ ದುರ್ಣಯಮಂ ||೧೧೪||

ಸರಳಾನುವಾದಃ - ಪುರುಷನು ಪರರ ಹೆಂಡತಿಗೆ ಆಸೆಮಾಡಿದರೆ ಆತನ ಪೌರುಷವು ನಾಶವಾಗುವುದು. ಭೂಮಿಯ ಜನರು ಹೀಯಾಳಿಸುವರು. ಆತನಿಗೆ ನರಕವು ಸಂಭವಿಸುವುದು. ಆದುದರಿಂದ, ಈ ದುರಾಚಾರವನ್ನು ಯಾರಾದರೂ ಹೋಗಲಾಡಿಸಬೇಕು.

ಶಬ್ದಾರ್ಥ:— ದುರ್,+ನಯ; ದುರ್ಣಯ, ದುರ್ನಡತೆ.

||ವಚನ|| ಎಂದು ಬಿನ್ನವಿಸೆ ಮಾರೀಚನು ಮದನೆನುಡಿಯೆ (ಹೀಗೆಂದು ಅರಿಕೆಮಾಡಿಕೊಳ್ಳಲು, ಮಾರೀಚನಾದರೂ ಅದನ್ನೆಯೆ ಉಪದೇಶಿಸಲು—)

||ಕಂದ|| ಸ್ತ್ರೀರತ್ನಕ್ಕಾನಿರ್ದೆ ಪರ
ರಾರೊಡೆಯರ್ ಮೀರುವನ್ನರಾರೆನ್ನೀ ಪ್ರ
ವ್ಯಾರ ಭುಜಬಲಮನೆಂದವಿ
ಚಾರಿ ದಶಗ್ರೀವನವರನೇಳಿಸಿ ನುಡಿದಂ ||೧೧೫||

ಸರಳಾನುವಾದಃ — "ಸ್ತ್ರೀಯರಲ್ಲಿ ಶ್ರೇಷ್ಠಳಾದ ಸೀತೆಗೆ ನಾನು ಇರಲು, ಬೇರೆ ಯಾರು ಯಜಮಾನರು! ನನ್ನ ಈ ಪ್ರಚಂಡ ಭುಜಪರಾಕ್ರಮವನ್ನು ಮೀರುವಂಥವರು ಯಾರು?" ಎಂದು ವಿಚಾರಗೇಡಿಯಾದ ರಾವಣನು, ಅವರನ್ನು (ವಿಭೀಷಣ-ಮಾರೀಚರನ್ನು) ತಿರಸ್ಕರಿಸಿ ಮಾತನಾಡಿದನು.

ಶಬ್ದಾರ್ಥ:— ದುರ್ವಾರ, ಅಸಾಧ್ಯ (ಪ್ರಚಂಡ) ವಾದ; ಏಳಿಸಿ, ತಿರಸ್ಕರಿಸಿ. ವ್ಯಾಕರಣ;— ಸ್ತ್ರೀಯರಲ್ಲಿ ರತ್ನ, ಸ್ತ್ರೀರತ್ನ (ಸ. ತ.)

॥ವಚನ॥ ಅಂತು ನುಡಿದು ರಾಮಸೀಮಂತಿನಿಯಂ ಪ್ರಮ್ಪದಮದಿರಾ ಪ್ರಮತ್ತಂ ಪ್ರಮದವನದೊಳ್ ಸೆರೆಗೆಯ್ದು ವಿರಹವಿಕಲನಾಗಿರ್ದಂ (ಹಾಗೆ ಮಾತನಾಡಿ, ರಾಮಚಂದ್ರನ ಹೆಂಡತಿಯಾದ ಸೀತೆಯನ್ನು ವಿಶೇಷ ಪ್ರಕಾರದ ಹೆಂಡದಿಂದ ಅಮಲು ಏರಿದವನಾದ (ರಾವಣನು) ಹೆಂಗಳೆಯರಿಗಾಗಿ ವಿರಚಿಸಿದ ಉದ್ಯಾನದಲ್ಲಿ, ಬಂಧನದಲ್ಲಿರಿಸಿ, ಮದನತಾಪದಿಂದ ಚಿಂತೆಗೊಳಗಾದನು.

ಶಬ್ದಾರ್ಥ:— ಸೀಮಂತಿನಿ, ಬಯ್ತಲೆಯುಳ್ಳವಳು (ಕುಲೀನಸ್ತ್ರೀ).

ಅಲಂಕಾರ:— ರೂಪಕ.

॥ಚಂಪಕ॥

ಕುಲಮದಮೊಂದು! ರೂಪಮದಮೊಂದು, ವಯೋಮದಮೊಂದು, ತನ್ನದೋ-
ರ್ಬಲಮದಮೊಂದು, ಜಾತಿಮದಮೊಂದು, ಕಲಾಮದಮೊಂದು ದೇವತಾ
ಬಲಮದಮೊಂದು, ರಾಜ್ಯಮದಮೊಂದಿನಿತಲ್ಲದೆ, ಬೇರೆ ರಾಗಮ-
ಗ್ಗಲಿಸಿದ ದೋಷದೃಷ್ಟಿ, ವಿಷಯಾತುರರೇನ್ ಗಡ ಮುಂದುಗಾಣ್ಬರೇ ॥೧೧॥

ಸರಳಾನುವಾದ:— ವಂಶದ, ಸೌಂದರ್ಯದ, ತಾರುಣ್ಯದ, ತನ್ನ ಭುಜಪರಾಕ್ರಮದ, ಜಾತಿಯ, ಯಾವತ್ತೂ ಕಲೆಗಳ, ದೇವತಾಬಲದ, ರಾಜ್ಯದ, ಇವೆಲ್ಲವುಗಳ ಮದವು ಅಲ್ಲದೆ, ಮೋಹವು ಹೆಚ್ಚುಮಾಡಿದ ಪಾಪದೃಷ್ಟಿ-ಇವುಗಳು ರಾವಣನಲ್ಲಿ ಉಂಟಾಗಿದ್ದವು. ವಿಷಯಲೋಲುಪರು (ವಿಷಯ ಸುಖದಲ್ಲಿ ಆತುರರಾದವರು) ಭವಿತವ್ಯವನ್ನು ತಿಳಿಯುವರೇ!

ಶಬ್ದಾರ್ಥ:— ಅಗ್ಗಲಿಸು, ಹೆಚ್ಚಾಗು; (ಅಷ್ಟಮದಗಳೆಲ್ಲ ರಾವಣನಲ್ಲಿ ಸೇರಿದ್ದನ್ನು ಲಕ್ಷಿಸಬೇಕು).

ವ್ಯಾಕರಣ:-ಮುಂದು+ಕಾಣ್, ಮುಂದುಗಾಣ (ಕ್ರಿಯಾಸಮಾಸ)

ಅಲಂಕಾರ:— ಅರ್ಥಾಂತರನ್ಯಾಸ.

# ತಿದ್ದುಪಡೆ.

| ಪುಟ. | ಪಙ್ತಿ | ಅಶುದ್ಧ | ಶುದ್ಧ |
|---|---|---|---|
| ೫ | ೧೩ | ತಾಣ (ಕ್ಷ) ಸ್ಥಾನ | ಸ್ಥಾನ (ಕ್ಷ) ತಾಣ |
| ೧೬ | ೨೪ | ಹೋಗುದಂತೆ | ಹೋಗುವಂತೆ. |
| ೧೭ | ೬ | ಹುಸಿಹೋಗದ | ಹುಸಿಹೋಗದ. |
| ೨೦ | ೮ | ಪ್ರಾಣ್ಮೈದತ್ತು | ಪೊಣ್ಮೈದತ್ತು. |
| ೨೦ | ೧೯ | ಪೂರು (ಪೂರ್ಣ) | ಪೂರು (ಪೂರ್ಣ) |
| ೨೧ | ೧೩, ೧೪ | ಪತ್ರಿಕಾ | ಪುತ್ರಿಕಾ |
| ೩೧ | ೧೮ | ಚಿತ್ರದೊಳ್ | ಚಿತ್ತದೊಳ್ |
| ೩೪ | ೨೨ | ಕೀರ್ತಿಪಟ್ಟ | ಕೀರ್ತಿದಪು |
| ೪೦ | ೧೬ | ತೋರುವೆ | ತೋರವೆ |

---

ಇದನ್ನು ರಾ॥ ಬ॥ ಪಿ. ಜಿ. ಹಳಕಟ್ಟಿ ಬಿ. ಏ. ಎಲ್. ಎಲ್. ಬಿ. ವಿಜಾಪುರ ಇವರು ವಿಜಾಪುರದಲ್ಲಿ ವಾರ್ಡ ನಂ॥ ೨ ಮನೆ ನಂ॥ ೧೨೬೮ ರಲ್ಲಿರುವ ತಮ್ಮ ಹಿತಚಿಂತಕ ಪ್ರಿಂ. ಪ್ರೆಸ್ಸಿನಲ್ಲಿ ಮುದ್ರಿಸಿ

